ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ.

( ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ )

ಪ್ರಥಮಖಂಡ—ಮೂರನೆಯಭಾಗ



ಅನುವಾದಕ

ಚಾಮರಾಜನಗರದ ವೆಂಕಟರಮಣಶಾಸ್ತ್ರೀ.



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಪ್ರಸ್ತಾವನೆ.

---

ಈ ವಿಷ್ಣು ಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ೨೬೯ ಅಧ್ಯಾಯಗಳಿವೆ ಈ ಖಂಡವನ್ನು ವಾಚಕರ ಸೌಕರ್ಯಕ್ಕಾಗಿ ಐದು ಸಂಪುಟಗಳಾಗಿ ವಿಂಗಡಿಸಲಾಗಿದೆ. ಪ್ರಥಮಸಂಪುಟವು ೭೩ ಅಧ್ಯಾಯಗಳನ್ನೂ ದ್ವಿತೀಯ ಸಂಪುಟವು ೬೪ ಅಧ್ಯಾಯಗಳನ್ನೂ, ಈ ತೃತೀಯ ಸಂಪುಟವು ೫೪ ಅಧ್ಯಾಯಗಳನ್ನೂ ಒಳಗೊಂಡಿರುವುದು. ಇನ್ನೆರಡು ಸಂಪುಟಗಳಲ್ಲಿ, ಉಳಿದ ಅಧ್ಯಾಯಗಳು ಪ್ರಕಟವಾಗಿ ಈ ಖಂಡವು ಸಂಪೂರ್ಣವಾಗುವುದು

ಹಿಂದಿನೆರಡು ಸಂಪುಟಗಳ ವಾಚನದಿಂದಲೇ ಈ ಗ್ರಂಥದ ಉತ್ಕರ್ಷವು ಎಂತಹುದೆಂಬುದನ್ನು ವಾಚಕರು ಅರಿತಿರುವರು ಇಂತಹ ಮಹಾಗ್ರಂಥವು ಭರತಖಂಡದ ಅನೇಕ ಭಾಷೆಗಳಿಗೆ ಪರಿವರ್ತನವಾಗಿದೆಯೆಂದು ತಿಳಿದುಬಂದಿದೆ ಆಂಗ್ಲಭಾಷೆಯಲ್ಲಿಯೂ ಸಹ ಈ ಗ್ರಂಥವು ಅನುವಾದಮಾಡಲ್ಪಟ್ಟಿದೆ ಹಿಂದೀ, ಮರಾಠಿ ಮುಂತಾದ ಸುಪ್ರಸಿದ್ಧ ದೇಶಭಾಷೆಗಳಲ್ಲಿ ಇದರ ಸ್ವಾರಸ್ಯವಾದ ಭಾಗಗಳು ಪ್ರಕಟವಾಗಿರುವ ಸಂಗತಿಯನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ ಈ ಮಹಾಪುರಾಣದಲ್ಲಿ ಬಂದಿರುವ ಅತ್ಯದ್ಭುತ ಕಥಾವಳಿಗಳನ್ನು ಓದುತ್ತಿದ್ದ ಹಾಗೆಯೇ ಮನಸ್ಸು ವಿಚಾರ ಸಾಗರದಲ್ಲಿ ಪ್ರವೇಶಿಸಿ ನಾನಾವಿಧವಾದ ವಿಚಾರ ತರಂಗಗಳನ್ನೆಬ್ಬಿಸುವುದು

ಮಾದರಿಗಾಗಿ ಈ ಸಂಪುಟದಲ್ಲಿ ಪ್ರಕಟವಾಗಿರುವ ಪುರೂರವ ಚಕ್ರವರ್ತಿಯ ಮೂರು ಜನ್ಮಗಳ ವೃತ್ತಾಂತವನ್ನು ತೆಗೆದುಕೊಳ್ಳೋಣ ಮೊದಲನೆಯದು ಬ್ರಾಹ್ಮಣ ಜನ್ಮ ಆ ಜನ್ಮದಲ್ಲಿ ಮಾಡಿದ ವ್ರತಸಾಧನೆಯಿಂದ ಮುಂದಿನ ಜನ್ಮದಲ್ಲಿ ಮದ್ರರಾಜನಾಗುವ ವೃತ್ತಾಂತ. ದ್ವಾದಶೀ ಅಭ್ಯಂಗನದಿಂದ ಕುರೂಪಪ್ರಾಪ್ತಿ. ಆ ಕುರೂಪತ್ವವನ್ನು ಪ್ರಬಲಸಾಧನೆಯಿಂದ ಹಿಮಾಲಯದ ಅತ್ರ್ಯಾಶ್ರಮದಲ್ಲಿ ರೂಪಸತ್ರಾನುಷ್ಠಾನದಿಂದ ನೀಗಿಕೊಂಡು ಪರಮಸೌಂದರ್ಯಶಾಲಿಯಾಗುವುದು ಆ ಬಳಿಕ ಒರುವ ಮೂರನೆಯ ಜನ್ಮದಲ್ಲೇ ಅದೇ ಮದ್ರರಾಜನೇ ಪುರೂರವನಾಗಿ ಹುಟ್ಟಿ ಸಶರೀರ ಸ್ವರ್ಗವನ್ನಡರುವುದು ಈ ಕಥಾ ಸರಣಿಯು ಈ ಸಂಪುಟದಲ್ಲಿ ಬಹು ಸ್ವಾರಸ್ಯವಾಗಿ ವಿವೃತವಾಗಿದೆ. ಇದಲ್ಲದೆ ಮಾಂಧಾತೃ ಚಕ್ರವರ್ತಿಯ ಕಥೆ ನಯನಸುಂದರಿಯ ಕಥೆ. ಶಕ್ರಶಾಂಬರಾಯಣೀ ಸಂವಾದವೇ ಮುಂತಾದ ವಿಚಾರ ಪರಿಪ್ಲುತವಾದ ಚರಿತ್ರೆಗಳು ವಾಚಕರ ಮನಸ್ಸಿಗೆ ಆನಂದವನ್ನುಂಟುಮಾಡುವುವು. ಮತ್ತು ಈ ಚರಿತ್ರೆ

ಗಳಲ್ಲೆಲ್ಲ ಅವರವರ ಹಿಂದಿನ ಜನ್ಮದ ವೃತ್ತಾಂತಗಳನ್ನು ಉಲ್ಲೇಖಿಸಿರುತ್ತಾರೆ ಪುನರ್ಜನ್ಮ, ಕರ್ಮ, ವ್ರತ, ಶ್ರಾದ್ಧವೇ ಮುಂತಾದುವುಗಳು ಆಸ್ತಿಕಮತದ ಮುಖ್ಯ ತತ್ತ್ವಗಳು ನಮ್ಮ ಹಿಂದೂ ದರ್ಶನಗಳನ್ನು ಈಗ ಪಾಶ್ಚಾತ್ಯರೂ, ಪೌರಸ್ತ್ಯರೂ ಸಹ ಚೆನ್ನಾಗಿ ವಿಮರ್ಶಿಸಿ ನೋಡಿ ಇವರ ಅಗಾಧತತ್ತ್ವಗಳಿಗಾಗಿ ತಲೆದೂಗುತ್ತಿದ್ದಾರೆ ಭೌತಿಕಶಾಸ್ತ್ರ, ಮನಶ್ಶಾಸ್ತ್ರ, ವಿಜ್ಞಾನಶಾಸ್ತ್ರವೇತ್ತರಾದ ಪಂಡಿತ ಶ್ರೇಷ್ಠರೂಡನೆ ಕಲೆತು ನಾನು ಈ ವಿಚಾರಸರಣಿಯನ್ನು ಚೆನ್ನಾಗಿ ವಿಮರ್ಶೆಮಾಡುತ್ತ ಬಂದಿದ್ದೇನೆ ಈ ಮಹಾಪುರಾಣವನ್ನು ನಾನು ಪಂಡಿತನೆಂಬ ದೃಷ್ಟಿಯಿಂದ ಬರೆಯುತ್ತಿಲ್ಲ ಆಯಾಯ ಸಂದರ್ಭದಲ್ಲಿ ಬರುವ ಶಾಸ್ತ್ರಪ್ರಕ್ರಿಯೆಗಳನ್ನು ತಿಳಿದವರಲ್ಲೂ, ಗ್ರಂಥಮೂಲಕವಾಗಿಯೂ ವ್ಯಾಸಂಗಮಾಡುತ್ತಾ ಸಂದರ್ಭೋಚಿತಶಾಸ್ತ್ರವಿಚಾರಗಳನ್ನು ಬಲು ಎಚ್ಚರಿಕೆಯಿಂದ ಬರೆಯುತ್ತ ಬಂದಿದ್ದೇನೆ

ಮನಶ್ಶಾಸ್ತ್ರ (ಸೈಕಾಲಜಿ) ಪಾರಂಗತನಾದ ಸಿಗ್ಮಂಡ್‌ಫ್ರಾಯ್ಡ್ ಎಂಬ ಪ್ರಸಿದ್ಧ ತತ್ತ್ವಜ್ಞಾನಿಯು ತನ್ನ ಗ್ರಂಥದಲ್ಲಿ ವಿವರಿಸಿರುವ ಜಾಗ್ರಚ್ಚಿತ್ತ, ಸುಪ್ತಚಿತ್ತ, ವಿಶ್ವಚಿತ್ತಗಳೆಂಬ ಮನೋವ್ಯಾಪಾರಗಳನ್ನು ಬಹುಗೂಢವಾಗಿ ಮನನಮಾಡುವುದಾದರೆ ನಮ್ಮ ವೇದಾಂತಶಾಸ್ತ್ರದಲ್ಲಿ ಹೇಳಿರುವ ವಿಶ್ವ, ತೈಜಸ, ಪ್ರಾಜ್ಞ, ಅಕಾರ, ಉಕಾರ, ಮಕಾರರೂಪವಾದ ಪ್ರಣವ, ಸ್ಥೂಲಸೂಕ್ಷ್ಮಕಾರಣದೇಹಗಳು ಪಂಚಕೋಶಗಳು ಮತ್ತು ಅವುಗಳ ವ್ಯಾಪಾರಗಳು, ಜಪಧ್ಯಾನಗಳನ್ನು ಏಕಾಗ್ರ್ಯದಿಂದ ಮಾಡುವುದರಿಂದುಂಟಾಗುವ ಅದ್ಭುತ ಪ್ರಯೋಜನಗಳು, ಇವುಗಳೆಲ್ಲಾ ನಿದರ್ಶನಕ್ಕೆ ಬರುವುವು ಈ ವಿಚಾರವು ಬಹು ಗಹನವಾದುದರಿಂದ ಇಂತಹ ಸಂದರ್ಭಗಳನ್ನು ಪೀಠಿಕಾಪ್ರಕರಣದಲ್ಲಿ ವಿಸ್ತರಿಸುವುದಕ್ಕಿಂತ ಅನುವಾದಕಾಲದಲ್ಲೇ ಅಲ್ಲಲ್ಲಿ ಟಿಪ್ಪಣಿಯರೂಪವಾಗಿ ಬರೆಯುತ್ತ ಬಂದಿದ್ದೇನೆ ೭೫ನೇ ಪುಟದಲ್ಲಿ ೧೪೭ನೇ ಅಧ್ಯಾಯದ ಕರ್ಮಬ್ರಹ್ಮವಿಚಾರವಾಗಿಯೂ ೧೦೦ನೇ ಪುಟದಲ್ಲಿ ಬರುವ ೧೫೧ನೇ ಅಧ್ಯಾಯದಲ್ಲಿ ಹಿಮಾಲಯ ಪರ್ವತದಲ್ಲಿ ಹುಟ್ಟಿರುವ ಸ್ಥಾವರ ಜಂಗಮಪ್ರಾಣಿಗಳ ವರ್ಣನಾವಸರದಲ್ಲಿಯೂ ಬರೆದಿರುವ ಟಿಪ್ಪಣಿಗಳನ್ನು ವಾಚಕರಿಗಾಗಿ ಓದಿನೋಡೋಣವಾಗಲಿ.

ಪಾಪಪುಣ್ಯಗಳನ್ನೂ ಅವುಗಳ ಫಲಗಳನ್ನೂ ವ್ರತಾಚರಣೆಗಳ ಮಹಿಮೆಯನ್ನೂ ಇದರಲ್ಲಿ ವಿಶೇಷವಾಗಿ ಬರೆದಿದ್ದಾರೆ ಮತ್ತು ಧರ್ಮಶಾಸ್ತ್ರಗಳಲ್ಲಿ ಇದಕ್ಕಾಗಿ ಅನೇಕ ನಿಬಂಧನೆಗಳನ್ನು ಮಾಡಿದ್ದಾರೆ ಈ ವಿಷ್ಣುಧರ್ಮೋತ್ತರಪುರಾಣವನ್ನೂ ಸಹ ಧರ್ಮಶಾಸ್ತ್ರಗಳಲ್ಲೊಂದೆಂದೂ ಇದು ಪ್ರಮಾಣಗ್ರಂಥವೆಂದೂ ಪ್ರಾಚೀನಪಂಡಿತರೆಲ್ಲರೂ ಒಪ್ಪಿಕೊಂಡಿದ್ದಾರೆ.

ಧರ್ಮಶಾಸ್ತ್ರಗಳಲ್ಲಿ ವಿಧಿಸಿರುವ ಧರ್ಮಗಳನ್ನು ಆಚರಿಸುವುದು ಬಹಳ ಕಷ್ಟವೆಂದು ಆಧುನಿಕರು ಭಾವಿಸುತ್ತಾರೆ ಈ ಧರ್ಮಗಳು ಪ್ರಕೃತಿಶಾಸ್ತ್ರಕ್ಕೆ (ಸೈನ್ಸ್)

ವಿರೋಧವಿಲ್ಲದಂತೆ ಬರೆಯಲ್ಪಟ್ಟಿರುವುದರಿಂದ, ಇದು ಉಪಾದೇಯವೆಂದು ಪಾಶ್ಚಾತ್ಯ ಪಂಡಿತರೇ ಒಪ್ಪಿ ನಮ್ಮ ಋಷಿ ವಚನಗಳಿಗೆ ಮನ್ನಣೆ ಕೊಡುತ್ತ ಬಂದಿದ್ದಾರೆ.

ಬೆಳಗ್ಗೆ ಬ್ರಾಹ್ಮಮುಹೂರ್ತದಲ್ಲೇಳು ದೇಹಶುದ್ಧಿಯನ್ನು ಮಾಡಿಕೋ, ಪ್ರಪಂಚದಲ್ಲಿ ನಡೆಯುತ್ತಿರುವ ವ್ಯಾಪಾರಗಳನ್ನೂ, ಪುಣ್ಯಪಾಪಗಳೇನೆಂಬುದನ್ನೂ ಸ್ವಲ್ಪ ವಿಚಾರಮಾಡು ಹಿಂದಿನ ಒಳ್ಳೇ ಪದ್ಧತಿಗಳನ್ನೆಲ್ಲಾ ಅನುಸರಿಸು ಸತ್ಕರ್ಮಗಳನ್ನು ಬಿಡಬೇಡ ತಂದೆತಾಯಿಗಳ ಮತ್ತು ಗುರುಹಿರಿಯರ ಮಾತಿನಲ್ಲಿ ವಿಶ್ವಾಸವಿಡು ಇವೇ ಮುಂತಾದ ಧಾರ್ಮಿಕ ಭಾವನೆಗಳನ್ನೇ ಎಲ್ಲರೂ ಅನುಸರಿಸಬೇಕಾದುದು ಅವಶ್ಯವಾಗಿದೆ ಈ ಧರ್ಮಪರಿಪಾಲನೆಗಾಗಿಯೇ ನ್ಯಾಯಸ್ಥಾನಗಳು ಏರ್ಪಟ್ಟಿವೆ. ಶಾಸ್ತ್ರಗಳು ಬರೆಯಲ್ಪಟ್ಟಿವೆ ವಿದ್ಯಾಭ್ಯಾಸಪದ್ಧತಿಯೂ ಇದಕ್ಕಾಗಿಯೇ ಉಲ್ಲೇಖಿತವಾಗಿದೆ ಯಾವ ದೇಶದಲ್ಲಿ ವಿದ್ಯಾವಂತರ ಸಂಖ್ಯೆಯು ಅಧಿಕವಾಗಿರುವುದೋ, ಯಾವ ರಾಜನ ರಾಜ್ಯವು ಧರ್ಮನಿಬಂಧನೆಯಿಂದ ಕೂಡಿರುವುದೋ ಆ ರಾಜ್ಯವು ಯಾವಾಗಲೂ ಉನ್ನತಸ್ಥಿತಿಯಲ್ಲಿಯೇ ಇರುವುದು.

ಇಂತಹ ಮೂಲಾದರ್ಶಗಳನ್ನು ಧ್ಯೇಯದಲ್ಲಿಟ್ಟುಕೊಂಡು ಇದರಿಂದ ನಮ್ಮ ದೇಶವೂ, ಪ್ರಜೆಗಳೂ ಅಭಿವೃದ್ಧಿಗೆ ಬರಲೆಂಬ ಗೂಢಾಭಿಪ್ರಾಯದಿಂದ ಅನಿತರಸಾಧಾರಣವಾದ ಈ ಮಹಾಪುರಾಣಪ್ರಕಟನಾರೂಪವಾದ, ಲೋಕಪೂಜ್ಯವಾದ ಕಾರ್ಯಗಳನ್ನು ಕಾರ್ಯರೂಪದಿಂದ ಸಾಧಿಸುತ್ತಿರುವ ನಮ್ಮ **ಮಹಾರಾಜರು ಶ್ರೀಮರ್ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ರವರಿಗೆ** ಭಗವಂತನು ಸಕಲ ಸೌಭಾಗ್ಯಗಳನ್ನೂ ದಯಪಾಲಿಸಬೇಕೆಂದು ಪ್ರಾರ್ಥಿಸುತ್ತೇನೆ

ಪಾರ್ಥಿವಾಧಿಕ ಚೈತ್ರಾಸಿತ ಸಪ್ತಮಿ

ಅಧ್ಯಾತ್ಮರಾಮಾಶ್ರಮ, ಮೈಸೂರು — **ಚಾ. ವೆಂಕಟರಮಣಶಾಸ್ತ್ರಿ,**

1-4-1945 — ಅನುವಾದಕ



# ವಿಷಯಾನುಕ್ರಮಣಿಕೆ.



ಶ ೩೩೦೭೫

## ನೂರ ಐವತ್ತೆರಡನೆಯ ಅಧ್ಯಾಯ -

ಈರೀತಿ ಹಿಮವತ್ಪರ್ವತದ ತಪ್ಪಲಿನಲ್ಲಿ ಅತ್ರಿಋಷಿಗಳ ಆಶ್ರಮವಿದೆಯೆಂದು ಹೇಳಿಯಾಯಿತಷ್ಟೆ. ಆ ಆಶ್ರಮದಲ್ಲಿ ಒಂದು ಸರೋವರವಿದೆ. ಆಸರೋವರದಲ್ಲಿ ಅತ್ರಿಗಳ ತಪಸ್ಸಿದ್ಧಿರೂಪವಾಗಿ ಕೊಳದ ಸುತ್ತಲೂ ಇರುವ ಗಿಡಮರಗಳಲ್ಲೆಲ್ಲಾ ಬರೀ ಚಿನ್ನದ ಮತ್ತು ಬೆಳ್ಳಿಯ ಹೂವುಗಳೇ ಚಿನ್ನ ಬಳ್ಳಿಯ ಹಣ್ಣುಗಳೇ ಬಿಡುತ್ತಾ ಇರುತ್ತವೆ ಕೊಳದೊಳಗಿರುವ ತಾವರೇಗಿಡಗಳಲ್ಲೆಲ್ಲಾ ನಾನಾವಿಧ ಪರಾಗಗಳಲ್ಲಿ ರತ್ನದ ಮತ್ತು ವಜ್ರಗಳ ಪುಡಿಗಳೂ, ಆ ಕೊಳದ ಸುತ್ತಲೂ ವಿವಿಧರತ್ನಗಳೂ ರಾಶಿರಾಶಿಯಾಗಿ ಬಿದ್ದಿರುವುವು ಅಂತಹ ಆ ಕೊಳದ ಒಳಿಯಲ್ಲಿ ಒಂದು ಶೇಷಶಾಯಿಸ್ವಾಮಿಯ ದೇವಸ್ಥಾನವಿರುವುದು. ಆ ಭವ್ಯದೇವಾಲಯದೊಳಗೆ ಭಗವಾನ್ ಶೇಷಶಾಯಿಯು ಹಡೆಗಳನ್ನಲ್ಲಾಡಿಸುತ್ತಿರುವ ಆದಿಶೇಷನ ದೇಹವೆಂಬ ಮೃದುತಲ್ಪದಲ್ಲಿ ಪವಡಿಸಿರುವನು ಇಂತಹ ದೇವೋತ್ತಮನನ್ನು ಭದ್ರರಾಜ (ಭವಿಸ್ಯತ್ಪುರೂರವ)ನು ನೋಡಿ ನಮಸ್ಕರಿಸಿದವನಾಗಿ ಆ ಒಳಿಕ ಆ ಆತ್ರೇಯಾಶ್ರಮದ ಒಂದು ಭಾಗದಲ್ಲಿ ಕುಳಿತು ತಪಸ್ಸು ಮಾಡಲು ಆರಂಭಿಸುವನು 124-132.

## ನೂರ ಐವತ್ತಮೂರನೆಯ ಅಧ್ಯಾಯ—

ಆ ಅತ್ರಿಮುನಿಗಳ ಆಶ್ರಮಕ್ಕೆ ಪ್ರತಿ ದಿವಸವೂ ಅನೇಕ ಮಂದಿ ಗಂಧರ್ವರು ಅಪ್ಸರಸ್ತ್ರೀಯರ ಜತೆಯಲ್ಲಿ ಬಂದು ಭೋಗಗಳನ್ನನುಭವಿಸುತ್ತಿರುವರು ಇಷ್ಟು ಭೋಗಗಳು ಎದುರಿಗೇ ನಡೆಯುತ್ತಿದ್ದಾಗ್ಯೂ ಭದ್ರರಾಜನು ಇದನ್ನೆಲ್ಲಾ ಸ್ವಲ್ಪವೂ ಮನಸ್ಸಿಗೇ ತಂದುಕೊಳ್ಳದೆ ಬಹು ಆಲಕ್ಷ್ಯದಿಂದ ತನ್ನ ತಪಸ್ಸಾಧನೆಯನ್ನು ಬಿಡದೆ ಮಾಡುತ್ತಿರುವುದನ್ನು ನೋಡಿ ಗಂಧರ್ವರೂ ಅಪ್ಸರ ನಾರಿಯರೂ ಪರಮಾಶ್ಚರ್ಯಪಟ್ಟವರಾಗಿ ಅವನ ಸಮೀಪಕ್ಕೆ ಬಂದು ಅವನ ಸ್ನೇಹವನ್ನು ಸಂಪಾದಿಸಿ ವರವನ್ನು ಬೇಡು, ಕೊಡುವೆವೆಂದು ಹೇಳಿದರು ಆಗ ಭದ್ರರಾಜನು ಮಹಾವಿಷ್ಣುವನ್ನು ದರ್ಶನಮಾಡಿಸಿ ಅವನಿಂದ ಪ್ರಸಾದಕೊಡಿಸ

## ನೂರ ಐವತ್ತನಾಲ್ಕನೆಯ ಅಧ್ಯಾಯ—

ಆ ರಾತ್ರಿಯೇ ಮದ್ರರಾಜನ (ಮುಂದಿನ ಪುರೂರವನ) ಕನಸಿನಲ್ಲಿ ಅತ್ರಿಮಹರ್ಷಿಗಳು ಬಂದು ದರ್ಶನವನ್ನು ಕೊಟ್ಟು, ನಿನ್ನ ಇಷ್ಟಾರ್ಥಸಿದ್ಧಿಯಾಗುವುದೆಂದು ಹೇಳುವರು ಈ ರೀತಿ ಕನಸನ್ನು ಕಂಡು ಮಾರನೇದಿನ ಬೆಳಗಾಗಿ ಎದ್ದ ಮೇಲೆ ನಿಜ ವಾಗಿಯೂ ಅವನ ಬಳಿಗೆ ಅತ್ರಿಋಷಿಗಳು ಬಂದೇ ಬರುವರು ಆಗ ಅವರ ಕಾಲಿಗೆ ಅಡ್ಡಬಿದ್ದು ಮದ್ರರಾಜನು ತನ್ನ ಕುರೂಪಕ್ಕೆ ಕಾರಣವೇನೆಂದೂ ಇದಕ್ಕೆ ಪರಿಹಾರವೇನೆಂದೂ ಬೇಡಿಕೊಳ್ಳಲು ಅತ್ರಿಋಷಿಗಳು ಅವನ ಹಿಂದಿನ ಜನ್ಮದ ಕಥೆಯನ್ನು ಹೀಗೆ ಹೇಳುವರು—ಆ ಕಥೆ ಏನೆಂದರೆ—ಅಯ್ಯಾ! ಮದ್ರರಾಜನೇ, ನೀನು ಪೂರ್ವ ಜನ್ಮದಲ್ಲಿ ಒಬ್ಬ ವ್ರತಾಚರಣ ಪರಾಯಣನಾದ ಬ್ರಾಹ್ಮಣನಾಗಿ ಹುಟ್ಟಿದೆ ಆ ಜನ್ಮದಲ್ಲಿ ನೀನು ದ್ವಾದಶೀದಿವಸ ಎಣ್ಣೆಯೊತ್ತಿಕೊಂಡು ನೀರೆರೆದುಕೊಳ್ಳುತ್ತಲಿದ್ದ ಆ ಪಾಪ ಫಲ ವಾಗಿ ಈ ಜನ್ಮದಲ್ಲಿ ಕುರೂಪಿಯಾಗಿ ಹುಟ್ಟಿದೆ ವ್ರತಮಾಡಿದ ಪುಣ್ಯಫಲವಾಗಿ ಮಹಾರಾಜನಾಗಿ ಹುಟ್ಟಿರುತ್ತೀಯೆ. (ದ್ವಾದಶೀ ದಿವಸ ಯಾರೂ ಅಭ್ಯಂಗನಮಾಡಿಕೊಳ್ಳಬಾರದೆಂದೂ ಇದು ನಿಷೇಧವೆಂದೂ ತಿಳಿದುಕೊಳ್ಳಬೇಕು) ಈ ಜನ್ಮದಲ್ಲಿ ನೀನು ನನ್ನ ಆಶ್ರಮಕ್ಕೆ ಪುಣ್ಯವಿಶೇಷದಿಂದ ಬಂದು ತಪಸ್ಸನ್ನು ಮಾಡಿ ದ್ದೀಯೆ ದೇವರು ನಿನಗೆ ಪ್ರಸನ್ನನಾಗಿರುವನು ನೀನು ನನ್ನ ಆಶ್ರಮದಲ್ಲಿ ಬೇಕಾದ ರುಚಿಕರವಾದ ಫಲಮೂಲಗಳಿದ್ದಾಗ್ಯೂ ಹಾಲು, ತುಪ್ಪ, ಮೊಸರು, ಜೇನುತುಪ್ಪಗಳ ಕೊಳಗಳೇ ಇದ್ದಾಗ್ಯೂ ಅವುಗಳೊಂದನ್ನೂ ತಿನ್ನದೆ (ಸೇವಿಸದೆ) ಉಪವಾಸ ವಾಗಿಯೇ ಇದ್ದು ದೃಢಪ್ರತಿಜ್ಞೆಯಿಂದ ಭಗವದ್ಧ್ಯಾನವನ್ನು ಮಾಡಿರುವೆಯಾದ್ದರಿಂದ ಮಹಾವಿಷ್ಣುವು ನಿನಗೆ ಪ್ರಸನ್ನನಾಗಿರು ವನು ನೀನು ಈಗ ನಾನು ಹೇಳುವ ಕ್ರಮದಂತೆ ರೂಪಸತ್ರ ವೆಂಬ ವ್ರತವನ್ನು ಮಾಡು. ನಿನ್ನ ಈ ಕುರೂಪವು ನಾಶವಾಗಿ ದಿವ್ಯಸೌಂದರ್ಯವು ಸಂಪ್ರಾಪ್ತವಾಗುವುದೆಂದು ಆ ರೂಪಸತ್ರ

ಏದಷ್ಟೂ ಕೊಡಿದರೆ ಅತ್ಯಂತ ಫಲಸಿದ್ಧಿಯೆಂದೂ ಇದರಲ್ಲಿವಿವೃತ ವಾಗಿದೆ 176-180

**ನೂರ ಅರವತ್ತೆರಡನೆಯ ಅಧ್ಯಾಯ—**

ಈ ಶ್ರವಣ ದ್ವಾದಶೀ ಪ್ರಸಂಗಾವಸರದಲ್ಲಿ ಪುಣ್ಯನದಿಗಳ ಸಂಗಮ ಗಳಲ್ಲಿ ಸ್ನಾನಮಾಡುವುದರ ಫಲವನ್ನೂ ಆ ಮಹಾನದೀ ಸಂಗ ವಾದ ರುಚಿಕರವಾದ ಜಲವನ್ನು ಕಲಶಗಳಲ್ಲಿ ತುಂಬಿ ಆ ಉದ ಕುಂಭವನ್ನೂ ಅದರೊಡನ ಮೊಸರನ್ನ(ದಧ್ಯಾನ್ನ) ವನ್ನೂ ದಾನ ಮಾಡೋಣವರಿಂದಾಗುವ ಅಕ್ಷಯ್ಯ ಫಲವನ್ನೂ ವಿವರಿಸಿ, ಈ ವಿಚಾರವಾಗಿ ಅನೇಕ ನಿದರ್ಶನಗಳನ್ನು ತೋರಿಸಿ ಇದರ ಪ್ರಾಶಸ್ತ್ಯವನ್ನು ಹೇಳಿರುವರು ಈ ನಿದರ್ಶನಗಳಲ್ಲಿ ಒಂದು ಸಣ್ಣ ಕಥೆಯು ಈ ಅಧ್ಯಾಯದಲ್ಲಿದೆ ಆ ಕಥಾ ಸಾರಾಂಶವನ್ನೂ ಇಲ್ಲಿ ಕೊಟ್ಟಿರುತ್ತೆ ಶಾಲಕ ನಗರದಲ್ಲಿ ಒಬ್ಬ ಜಿಪುಣನಾದ ವೈಶ್ಯನಿದ್ದನು, ಆ ದೇಶವು ಒರೀ ಮರುಭೂಮಿಯ ಸ್ಥಳ ಈ ವೈಶ್ಯನು ಒಂದು ದಿನ ಧನೋಪಾರ್ಥವಾಗಿ ಶ್ರವಣದ್ವಾದಶೀ ದಿವಸ ತೋಷೀ, ಚಂದ್ರಭಾಗಾನದಿಗಳ ಸಂಗಮದಲ್ಲಿ ಸ್ನಾನ ಮಾಡಿ, ಮೊಸರನ್ನವನ್ನೂ, ಉದಕುಂಭವನ್ನೂ ಒಬ್ಬ ಬ್ರಾಹ್ಮಣ ನಿಗೆ ದಾನಮಾಡಿದನು ಈ ದಾನ ಮಹಿಮೆಯಿಂದಲೂ, ಸಂಗಮಸ್ನಾನ ಮಹಿಮೆಯಿಂದಲೂ ಆ ವೈಶ್ಯನು ಸತ್ತ ಮೇಲೆ (ಜಿಪುಣತ್ವದಿಂದ ಪಿಶಾಚಿ ಜನ್ಮವನ್ನು ಹೊಂದಿದಾಗ್ಯೂ) ಅನೇಕ ಪಿಶಾಚಿಗಳಿಗೆ ಯಜಮಾನನಾಗಿ, ಮಧ್ಯಾಹ್ನ ಊಟದ ಹೊತ್ತಿ ನಲ್ಲಿ ತನ್ನ ಬಳಿಗೆ ಎಲ್ಲಿಂದಲೋ ಬರುತ್ತಿದ್ದ ಅಕ್ಷಯ್ಯವಾದ ಮೊಸ ರನ್ನ ಮತ್ತು ಸೀನೀರುಗಳನ್ನು ಹಸಿವು ಬಾಯಾರಿಕೆಗಳಿಂದ ಸಂಕಟಪಡುತ್ತಾ ಬಿಸಿಲಿನ ತಾಪದಿಂದ ಬೇಗುದಿಗುದಿಯುತ್ತಿದ್ದ ಪಿಶಾಚಿಗಳಿಗೆ ಕೊಟ್ಟು ಅವುಗಳನ್ನು ತೃಪ್ತಿಪಡಿಸುತ್ತಲೂ ತಾನೂ ಉಂಡು ತಿಂದು ಕುಡಿದು ಸುಖಪಡುತ್ತಿದ್ದುದೇ ಮೊದಲಾದ ಮನೋಹರವಾದ ವಿಚಿತ್ರ ವೃತ್ತಾಂತಗಳು ಇದರಲ್ಲಿ ತುಂಬಿವೆ 190 19.

**ನೂರ ಅರವತ್ತಮೂರನೆಯ ಅಧ್ಯಾಯ—**

ತಿಲದ್ವಾದಶಿಯೆಂದರೇನು ? ಅದರಿಂದಾಗುವ ಫಲವೇನು ? ಎಳ್ಳಿನ ಪ್ರಾಶಸ್ತ್ಯವೇನು ? ತಿಲದ್ವಾದಶೀದಿವಸ ಸ್ನಾನಮಾಡಿ, ಜ..

ಹೋಮಾರ್ಚನೆಗಳನ್ನು ಮಾಡಿ ಎಳ್ಳಿನ ದೀಪದಾನ, ಉದಕುಂಭ ದಾನಗಳನ್ನು ಮಾಡಿದರೆ ಆಗುವ ಫಲಗಳನ್ನು ತಿಳಿಯಬೇಕಾದರೆ ಈ ಅಧ್ಯಾಯವನ್ನೋದಬೇಕು 195-202

## ನೂರ ಅರವತ್ತನಾಲ್ಕನೆಯ ಅಧ್ಯಾಯ—

ಮಗಧದೇಶದ ರಾಜನಾದ ಚಂಡವೇಗನ ಹೆಂಡತಿ, ನಯನಸುಂದರಿಯೆಂಬ ಮಹಾರಾಣಿಯು ಪೂರ್ವಜನ್ಮದಲ್ಲಿ ಶ್ರವಣದ್ವಾದಶಿಯ ದಿವಸ ತಿಲಹೋಮವನ್ನೂ, ತಿಲದಾನವನ್ನು ಮಾಡಿದುದರ ಫಲವಾಗಿ ರಾಜಪತ್ನಿಯಾದ ವೃತ್ತಾಂತ ಈ ವೃತ್ತಾಂತವನ್ನು ಅವಳ ಸಖಿಯಾದ ವಾಸಂತಿಕೆಯೆಂಬುವಳೊಡನೆ ಹೇಳುವಳು ಈ ಶ್ರವಣದ್ವಾದಶೀವ್ರತಮಹಿಮಾ ಪ್ರಸಕ್ತಿಯಲ್ಲಿ ಈ ನಯನಸುಂದರಿಯ ಜನ್ಮಾಂತರ ವೃತ್ತಾಂತಗಳು ನಿರೂಪಿತವಾಗಿರುವುವು ಆ ಕಥೆಯು ಈ ಅಧ್ಯಾಯದಲ್ಲಿದೆ, ನಯನಸುಂದರಿಯ ಪೂರ್ವ ಜನ್ಮದ ವೃತ್ತಾಂತವೇನೆಂದರೆ —ವಾಸಂತಿಕೆಯನ್ನು ಕುರಿತು ನಯನಸುಂದರಿಯು ಹೇಳುತ್ತಾಳೆ —ಎಲೌ ಸಖಿಯೇ! ಹಿಂದಿನ ಜನ್ಮದಲ್ಲಿ ನಾನು ಬ್ರಾಹ್ಮಣಸ್ತ್ರೀಯಾಗಿ ಹುಟ್ಟಿದ್ದೆನು ಈಗ ನನ್ನ ಗಂಡನಾಗಿರುವ ಚಂಡವೇಗರಾಜನೇ ಆ ಜನ್ಮದಲ್ಲೂ ನನಗೆ ಗಂಡನಾಗಿ ಹುಟ್ಟಿದ್ದನು ಆದರೆ ಅವನು ಆಗ ನಾಸ್ತಿಕನಾಗಿಯೂ ಕ್ರೂರನಾಗಿಯೂ ಜಗಳಗಂಟನಾಗಿಯೂ ಇದ್ದನು ಆ ದೇಶದಲ್ಲಿ ದಧಿವಾಹನನೆಂಬ ರಾಜನಿದ್ದನು ಆತನ ಹೆಂಡತಿಯಾದ ಕಮಲೆಯೆಂಬ ಹೆಸರಿನ ಮಹಾರಾಣಿಯು ನನಗೆ ಆಗ ಪ್ರಾಣಸಖಿಯಾಗಿದ್ದಳು ಅವಳು ತಿಲದ್ವಾದಶೀ ದಿವಸ ಹೋಮವನ್ನೂ ತಿಲದಾನವನ್ನೂ ಮಾಡುತ್ತಿದ್ದಳಾದುದರಿಂದ ಅದರ ಕ್ರಮವನ್ನು ನನಗೂ ಉಪದೇಶಿಸಿದಳು. ಅದೇ ಮೇರೆ ನಾನು ವಿತಸ್ತಾನದಿಯಲ್ಲಿ ಸ್ನಾನಮಾಡಿ ಆ ವ್ರತವನ್ನು ಮಾಡಿ ಈ ಜನ್ಮದಲ್ಲಿ ಮಹಾರಾಣಿಯಾಗಿ ಹುಟ್ಟಿದೆನು ನೀನೂ ಅದೇ ಮೇರೆ ಮಾಡಿದರೆ ನಿನಗೂ ಶ್ರೇಯಸ್ಸುಂಟಾಗುವುದೆಂಬುದೇ ಮುಂತಾದ ಕಥಾನಕಗಳು ಇದರಲ್ಲಿವೆ 203-210

## ನೂರ ಅರವತ್ತೈದನೆಯ ಅಧ್ಯಾಯ—

ಗಾಯತ್ರೀ ಮಹಿಮೆ ಗಾಯತ್ರೀದೇವತೆಯ ಶಕ್ತಿ ಪ್ರವಚನೆ ಈ

ಪೃ. ಸಂ.

ದೇವಸ್ಥಾನದ ಗೋಡೆಯಮೇಲೆ ಬಿರುಕುಗಳಲ್ಲಿ ನೇರಿಕೊಂಡು ಹೊಟ್ಟೆಹೊರೆದುಕೊಳ್ಳುತ್ತಿದ್ದೆನು. ಕೃತ್ತಿಕೋತ್ಸವದ ದಿವಸ ಆ ವಿಷ್ಣುದೇವಸ್ಥಾನದಲ್ಲಿ ದೀಪೋತ್ಸವವಾಗಲು ಅನೇಕ ದೀಪಗಳನ್ನು ಹತ್ತಿಸಿದ್ದರು. ರಾತ್ರಿ ಬಹಳಹೊತ್ತಿನಮೇಲೆ ಜನರೆಲ್ಲರೂ ಮನೆಗೆ ಹೊರಟುಹೋದಮೇಲೆ ನಾನು ಬಿಲದಿಂದ ಹೊರಗೆ ಬಂದು ನೋಡಿದೆ. ಹಣತೆಗಳಲ್ಲಿ ಬತ್ತಿಗಳನ್ನು ನೆನಸಿ ದೀಪವನ್ನು ಹತ್ತಿಸಿದ್ದುದು ಕಾಣಿಸಿತು. ಆ ನೆನಸಿದ ಬತ್ತಿಯನ್ನು ತಿನ್ನಲು ನನಗೆ ಆಸೆಯಾಯಿತು. ಕೂಡಲೆ ಒಂದು ನನಸಿದ ಬತ್ತಿಗೆ ಬಾಯಿಹಾಕಿದೆ. ಪವನತಪ್ಪಿ ಹಣತೆಯು ಎಣ್ಣೆಯಲ್ಲಿ ಉರುಳಿಕೊಂಡುಬಿಟ್ಟಿ. ದೀಪದಬತ್ತಿಯು ಉರಿಯುತ್ತ ನನ್ನ ದೇಹಕ್ಕೆ ವ್ಯಾಪಿಸಿ ನಾನೂ ಆ ಬತ್ತಿಯೊಡನೆ ಉರಿದು ಬೆಂದು ಹೋದೆನು. ಆ ಮಹಾಪವಿತ್ರಸ್ಥಳದಲ್ಲಿ ದೀಪಜ್ವಾಲೆಗೆ ಸಿಕ್ಕಿ ಸತ್ತ ನಾನು ದೀಪದರ್ಶನ ಪುಣ್ಯದಿಂದಲೇ ಈ ಜನ್ಮದಲ್ಲಿ ವಿದರ್ಭರಾಜನ ಪುತ್ರಿಯಾಗಿಯೂ ಕಾಶೀರಾಜನ ಪ್ರಿಯಮಹಿಷಿಯಾಗಿಯೂ ಹುಟ್ಟುವ ಪುಣ್ಯವನ್ನು ಸಂಪಾದಿಸಿದೆನು. ಅಕ್ಕಂದಿರಾ, ಕೇಳಿರಿ ! ಜನ್ಮಾಂತರ ಸಂಸ್ಕಾರದಿಂದಲೇ ನಾನು ಈಗ ದೀಪಗಳನ್ನು ಹತ್ತಿಸುತ್ತ ಬಂದಿದೇನೆ. ನೀವೂ ಸಹ ದೀಪದಾನದಿಂದ ಪುಣ್ಯವಂತರಾಗಿರಿ. ಹೀಗೆಂದು ಈ ಲಲಿತೆಯು ಹೇಳಿದ ಕಥೆಯು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. 228 234

## ನೂರ ಅರವತ್ತೆಂಟನೆಯ ಅಧ್ಯಾಯ--

ಹಣಗಾರರಾಗಿದ್ದು ಪುಣ್ಯವಂತರಾದರೆ ಬೇಕಾದ ಧರ್ಮವನ್ನು ಮಾಡಬಹುದು. ದೇಹಪುಷ್ಟಿಯಿದ್ದು ಉಪವಾಸ ವನವಾಸವನ್ನು ಸಹಿಸುವವರಾದರೆ ಉಪವಾಸದಿಂದ ದೇಹದಂಡನೆ ಮಾಡಬಹುದು. ಇದೂ ಇಲ್ಲದೆ ಅದೂ ಇಲ್ಲದೆ ಇರುವವರ ಗತಿಯೇನೆಂಬುದು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಸರ್ವಸುಲಭವಾಗಿ ಕಾಡುಗಳಿವೆ. ಅವುಗಳಲ್ಲಿ ಬೇಕಾದಷ್ಟು ಹೂ ತೊಳಸಿಯ ಗಿಡಗಳಿವೆ. ಹೊಳೆಗಳು ಅನೇಕವಾಗಿ ಸೀನೀರಿನಿಂದ ತುಂಬಿ ಹರಿಯುತ್ತಿವೆ. ದೇವಸ್ಥಾನಗಳು ಸರ್ವಸುಲಭವಾಗಿ ಎಲ್ಲೆಲ್ಲೂ ತುಂಬಿವೆ. ಇವುಗಳನ್ನೆಲ್ಲಾ ಉಪಯೋಗಿಸಿಕೊಂಡು ಸರ್ವಕಾಮ ಸಮೃದ್ಧಿಯನ್ನೂ

(ಪುತ್ರಕಾಮೇಷ್ಟಿಯಾಗ) ವನ್ನು ಮಾಡಿ ಮಹಾವಿಷ್ಣುವನ್ನು ತೃಪ್ತಿಪಡಿಸಿದನು ಈರೀತಿ ವ್ರತಾಚರಣೆ ಮಾಡಿದೊಡನೆಯೇ ರಾತ್ರಿ ಕನಸಿನಲ್ಲಿ ಭಗವಂತನೇ ಪ್ರತ್ಯಕ್ಷನಾಗಿ ದರ್ಶನಕೊಟ್ಟು ನೀನು ಭಾರ್ಗವರ ಮಗನಾದ ಚ್ಯವನಋಷಿಗಳ ಆಶ್ರಮಕ್ಕೆ ಹೋಗು ಅವರು ನಿನಗೆ ಸಹಾಯಮಾಡುವರೆಂದು ಹೇಳಿ ದಂತಾಯಿತು ಮಾರನೇದಿನ ಎದ್ದೊಡನೆ ಆ ಯುವನಾಶ್ವನು ಕನಸನ್ನು ನೆನಸಿಕೊಂಡು ಆದರಂತೆ ಚ್ಯವನರ ಆಶ್ರಮಕ್ಕೆ ಹೋದನು ಮತ್ತೆ ತನ್ನ ಕೋರಿಕೆಯನ್ನೂ ಸ್ವಪ್ನವೃತ್ತಾಂತ ವನ್ನೂ ಹೇಳಿದನು ಅದನ್ನು ಕೇಳಿ ಚ್ಯವನರು ಆ ರಾಜನಿಗೆ ಇಲ್ಲಿಯೇ ಇರೆಂದು ಹೇಳಿ ಅವನಿಗೆ ತಿಳಿಯದಂತೆ ಒಂದು ರಾತ್ರಿ ಕಲಶಪ್ರತಿಷ್ಠಾಪನೆಮಾಡಿ ಆ ಕಲಶದೊಳಗೆ ಪುತ್ರೀಯಜಲ (ಮಕ್ಕಳಾಗುವ ಶಕ್ತಿಯುಳ್ಳ ನೀರು) ವನ್ನು ತುಂಬಿ ಅದನ್ನು ಮಂತ್ರಪೂತವನ್ನಾಗಿಮಾಡಿ ಇಟ್ಟಿದ್ದರು ಇದು ಯುವನಾಶ್ವ ರಾಜನಿಗೆ ತಿಳಿದಿರಲಿಲ್ಲವಾದ್ದರಿಂದ ಆ ರಾತ್ರಿ ಸರಿಹೊತ್ತಿನಲ್ಲೆದ್ದು ಬಲು ಬಾಯಾರಿಕೆಯಾಗಲು ಆ ಪುತ್ರೀಯಜಲಪೂರಿತವಾಗಿದ್ದ ಕಲಶದಲ್ಲಿದ್ದ ನೀರನ್ನು ಕುಡಿದುಬಿಟ್ಟನು ಬೆಳಗಾದೊಡನೆ ರಾಜನ ಈ ಅವಿವೇಕ ಕಾರ್ಯವು ಚ್ಯವನರಿಗೆ ತಿಳಿದು ಅವರು ಬಹು ಕನಿಕರಗೊಂಡರು ಆ ಕಲಶಜಲವು ರಾಜನ ಹೊಟ್ಟೆ ಯಲ್ಲಿ ಗರ್ಭವಾಗಿ ಪರಿಣಾಮಹೊಂದಿ ಆ ಗರ್ಭವು ರಾಜನ ಕುಕ್ಷಿಯಿಂದ ಶಿಶುರೂಪವಾಗಿ ಹೊರಕ್ಕೆಬಂದಿತು ಈರೀತಿ ಕುಕ್ಷಿಯಿಂದ ಹುಟ್ಟಿದ ಮಗುವೇ ಮಾಂಧಾತೃಚಕ್ರವರ್ತಿ ಯೆಂದು ಪ್ರಸಿದ್ಧನಾದ ಮಹಾರಾಜನು ಆಗ ಯುವನಾಶ್ವನ ಗರ್ಭವನ್ನು ಪ್ರವೇಶಿಸಿದ ಮಂತ್ರಪೂತೋದಕದಲ್ಲಿ ಮೇಲೆ ವಿವ ರಿಸಿದ ಶೂದ್ರಾತ್ಮನು (ಜೀವ) ಸ್ವರ್ಗದಿಂದಿಳಿದು ಬಂದು ಪ್ರವೇಶಿ ಸಿದ ಆದ್ಯಂತವೃತ್ತಾಂತವನ್ನು ಈ ಅಧ್ಯಾಯದಲ್ಲೋದಿ ನೋಡಿರಿ (ಈ ಸಂಪುಟದ ಪೀಠಿಕಾಪ್ರಕರಣದಲ್ಲಿ ಈ ವಿಚಾರವಾಗಿ ಬರ ದಿರುವ ಅನುವಾದಕರ ತತ್ವರಹಸ್ಯೋದ್ದೀಪಕವಾದ ಲೇಖನ ವನ್ನು ನೋಡಿರಿ)

ಶೂದ್ರಾತ್ಮವು ಯೌವನಾಶ್ವನ ಗರ್ಭದಲ್ಲಿ ಮಾಂಧಾತೃವಾಗಿ ಜನಿಸಿ ದೊಡನೆ ಆ ಶೂದ್ರಪತ್ನಿಯ ಆತ್ಮವು ಕಾಶೀರಾಜನ ಮೂಲಕ

ಪುಟಸಂಖ್ಯೆ

ಪ್ರ. ಸಂ ಖ್ಯೆ

ಮುಂತಾದ ಸಪ್ತರ್ಷಿಗಳು ಪ್ರಸಿದ್ಧರಾಗಿದ್ದರು ಅಷ್ವಕಾದಿಯಾಗಿ ಐದು ದೇವತಾಗಣಗಳು ಆಕಾಲದಲ್ಲಿದ್ದುವು ಈ ದೇವತೆಗಳ ರಾಜನಿಗೆ ಮನೋಜವನೆಂದು ಹೆಸರು ಮಹಾವಾಲನೇ ಮುಂತಾದ ದೈತ್ಯಗಣಗಳು, ಆಗ ಪ್ರಾಶಸ್ತ್ಯಹೊಂದಿ ದೇವತೆಗಳೊಡನೆ ಸೆಣಸುತ್ತಿದ್ದ ವಿಚಾರಗಳೆಲ್ಲಾ ಇದರಲ್ಲಿ ವರ್ಣಿಸಲ್ಪಟ್ಟಿದೆ 300-304

## ನೂರ ಎಂಭತ್ತೆರಡನೆಯ ಅಧ್ಯಾಯ—

ಏಳನೆಯದೇ ವೈವಸ್ವತ ಮನ್ವಂತರ ನಾವೆಲ್ಲ ಬದುಕಿ ಬಾಳುತ್ತಿರುವ ಕಾಲವೇ ಇದು ಈ ಚರಾಚರಗಳಿಗೊಡೆಯನಾದ ವೈವಸ್ವತ ಮನುವಿಗೆ ಇಕ್ಷ್ವಾಕುವೇ ಮುಂತಾದ ಮಕ್ಕಳುಂಟು ಈ ಚಕ್ರವರ್ತಿಗಳ ಕಥೆಗಳನ್ನೆಲ್ಲ ಈಗಲೂ ನಾವೆಲ್ಲರೂ ಓದುತ್ತಲೂ ಕೇಳುತ್ತಲೂ ಇದ್ದೇವೆ ಈ ನಮ್ಮ ಕಾಲದಲ್ಲಿ (ವೈವಸ್ವತ ಮನ್ವಂತರದಲ್ಲಿ) ಇರುವ ಮಹರ್ಷಿಗಳೇ ಆತ್ರೇಯಾದಿ ಋಷಿಪ್ರವರರು ಈ ಕಾಲದ ರಾಕ್ಷಸರ ಗುಂಪು ನಲವತ್ತೊಂಭತ್ತು ವಿಧವಾಗಿದ ಅಶ್ವಿನಾದಿ ದಶವಿಧ ದೇವತೆಗಳಿಗೂ ಇತರರಾದ ಸಕಲ ದೇವತೆಗಳಿಗೂ ರಾಜನಾಗಿರುವ ಇಂದ್ರನಿಗೆ ಒಜಂಬಿ ಯೆಂದು ಹೆಸರು (ಇಂದ್ರನೆಂಬುದು ಒಬ್ಬನ ಹೆಸರಲ್ಲ ಇದು ಅಧಿಕಾರದ ಹೆಸರು) ಹಿರಣ್ಯಾಕ್ಷನು ವರಾಹಾವತಾರಿಯಾದ ಪರಮಾತ್ಮನಿಂದ ಸಂಹೃತನಾದುದೂ ಇದೇ ಮನ್ವಂತರದಲ್ಲೆಂಬುದನ್ನು ಸಹ ಈ ಅಧ್ಯಾಯದಲ್ಲಿ ವಿವರಿಸಿರುವರು 305-308.

## ನೂರ ಎಂಭತ್ತಮೂರನೆಯ ಅಧ್ಯಾಯ—

ಇದುವರಿಗೆ ಹೇಳಿದ ಏಳು ಮನ್ವಂತರಗಳು ಹಿಂದೆ ಕಳೆದು ಹೋದುವುಗಳಾಗಿಯೂ ಈಗ ನಡಯುತ್ತಿರುವುದೂ ಸಹ ಈಗ ಸೇರಿಕೊಂಡಂತಾಯಿತು ಇನ್ನು ಮುಂದ ಬರುವ ಮನ್ವಂತರಗಳೇಳರ ಭವಿಷ್ಯದ ವೃತ್ತಾಂತವನ್ನು ಶಾಂಬರಾಯಣಿಯೆಂಬ ತ್ರಿಕಾಲಜ್ಞಾನಸಂಪನ್ನೆಯಾದ ಸಿದ್ಧಾಂಗನೆಯು ಇಂದ್ರನೊಡನೆ ಹೇಳುವಳು ಎಷ್ಟೋ ಮುಂದೆ ಮುಂದೆ ಬರುವ ವೃತ್ತಾಂತಗಳನ್ನು ಶಾಂಬರಾಯಣಿಯು ಜ್ಞಾನದೃಷ್ಟಿಯಿಂದ ವಿವರಿಸಿರುವುದರಿಂದಲೇ

ಪು ೩೯೦೩೧

ಈ ಮಹಾಪುರಾಣಕ್ಕೆ ವಿಷ್ಣು ಧರ್ಮೋತ್ತರ (ಭವಿಷ್ಯೋತ್ತರ) ವೆಂಬ ಹೆಸರು ಬಂದಿದೆ ಇಂತಹ ಸಿದ್ಧಾಂಗನೆಯರೂ ಸಿದ್ಧ ಪುರುಷರೂ ಸಹ ಸರ್ವದಾ ಇರುತ್ತಾರೆಂದೂ ಹಿಮಾಲಯದ ತಪ್ಪಲಿನಲ್ಲೂ, ಪವಿತ್ರ ಕ್ಷೇತ್ರಗಳಲ್ಲೂ ಈಗಲೂ ಇರುವರೆಂದು ಸರ್ವರೂ ತಿಳಿದಿರಬೇಕು ವೇದಶಾಸ್ತ್ರಗಳನ್ನು ನಂಬಬೇಕು ಅವರ ಮಾತಿನಂತೆ ನಡೆಯಬೇಕು ಈ ಪ್ರಪಂಚವೂ, ಅಧಿಕಾರವೂ ಶಾಶ್ವತವೆಂದು ಯಾರೂ ಮದಹಂಕಾರಪಡಬಾರದು (ಈಗಿನ ಪಾಶ್ಚಾತ್ಯ ನಾಗರಿಕತೆಗೆ ಮರುಳಾಗಿ ಸ್ವಧರ್ಮ ತ್ಯಾಗ ಶೀಲರಾದ ತರುಣರೂ, ಅವರಿಗೆ ಮೇಲ್ಪಂಕ್ತಿಯನ್ನು ಹಾಕಿ ಕೊಡುತ್ತಲಿರುವ ಸುಧಾರಕರೂ ಈ ವಿಚಾರವನ್ನು ನೆನಪಿನಲ್ಲಿಡಲಿ) ಈವೈವಸ್ವತ ಮನ್ವಂತರ ಕಳಿದು ಪ್ರಳಯವಾಗಿ (ಮನ್ವಂತಃ ಪ್ರಳಯಃ ಕಲ್ಪಃ ಕ್ಷಯಃ ಕಲ್ಪಾಂತ ಇತ್ಯಪಿ) ಪುನಃ ಜಗತ್ಸೃಷ್ಟಿಯಾದಾಗ ಆರಂಭವಾಗುವ ಮನ್ವಂತರಕ್ಕೆ ಅಧಿಪತಿಯಾಗುವವನು ಸಾವರ್ಣಮನುವು ಅವನಿಗೆ ವಿಜಯನೇ ಮುಂತಾದ ಪುತ್ರರು ಜನಿಸುವರು ಅಶ್ವತ್ಥಾಮಾದಿ ಸಪ್ತರ್ಷಿಗಳು ಆ ಕಾಲದಲ್ಲಿ ಪ್ರಕಟವಾಗುವರು. ಸುತಪಸಾದಿ ದೇವಗಣಗಳು ಸ್ವರ್ಗಲೋಕದಲ್ಲಿ ವಾಸಮಾಡುವರು ಬಲಿ ಚಕ್ರವರ್ತಿಯು ಆಗ ಇಂದ್ರಪಟ್ಟವನ್ನೇರುವನು ಅವನಿಗೆ ಯಾರೂ ಶತ್ರುಗಳೇ ಇರುವುದಿಲ್ಲ ಆಗ ನಾನೋಲವೆಂಬ ರಾಕ್ಷಸನು ಹಿಮಾಲಯದಲ್ಲಿದ್ದುಕೊಂಡು ಲೋಕಕ್ಕೆ ಕಿರುಕುಳವನ್ನುಂಟು ಮಾಡುವನು. ಆಗ ಮಹಾವಿಷ್ಣುವು ಅವನನ್ನು ಸಂಹಾರ ಮಾಡುವರು 309-311

## ನೂರ ಎಂಭತ್ತನಾಲ್ಕನೆಯ ಅಧ್ಯಾಯ--

ಒಂಭತ್ತನೇ ಮನ್ವಂತರದಲ್ಲಿ ಮನುಪಟ್ಟಕ್ಕೇರುವವನಿಗೆ ಬ್ರಹ್ಮಪುತ್ರನೆಂದು ಹೆಸರು ಧೃತಿಕೇತುವೇ ಮುಂತಾದವರು ಇವನ ಪುತ್ರರು ಮೇಧಾತಿಥಿಯೇ ಮುಂತಾದವರು ಆ ಕಾಲದ ಸಪ್ತರ್ಷಿಗಳು. ಪರಾದಿದೇವತೆಗಳೇ ದೇವಗಣಗಳು ದೇವತೆಗಳ ಇಂದ್ರನು ವಿಭುವೆಂಬುವನು. ಆಗ ಕಾಲಕಕ್ಷಾದಿಗಳೆಂಬ ದೈತ್ಯರು ಹುಟ್ಟಿ ದೇವತೆಗಳ ಶತ್ರುಗಳಾಗುವರು ವಸುನಾಭನೆಂಬುವನು ಆಗ

ಪುಟಸಂಖ್ಯೆ

ವಿಷ್ಣುವಿನ ಮಗನಾಗಿ ಹುಟ್ಟಿ ಮುಂದಿನ ಕಾಲದ ಆಕಾಲ ಕಕ್ಷ್ಯಾದಿ ಗಳನ್ನು ಸಂಹರಿಸಿ ಲೋಕಶಾಂತಿಯನ್ನುಂಟುಮಾಡುವನು.

**ನೂರ ಎಂಭತ್ತೈದನೆಯ ಅಧ್ಯಾಯ**— 312-314

ಹತ್ತನೇ ಮನುವಿಗೆ ಧರ್ಮಪುತ್ರನೆಂದು ಹೆಸರು ಆ ಮನುವಿಗೆ ಸುಕ್ಷೇತ್ರಾದಿ ಕುಮಾರರು ಜನಿಸುವರು ಆಪೋಮೂರ್ತ್ಯಾದಿನಾಮಕರಾದ ಸಪ್ತರ್ಷಿಗಳು ಆಮನ್ವಂತರದಲ್ಲಿಮಹಾತಪಸ್ವಿಗಳಾಗುವರು ಆಗಿನ ದೇವತಾಗಣಗಳಿಗೆ ಪ್ರಾಣದೇವತೆಗಳೆಂದು ಹೆಸರು ಅವರ ರಾಜನಾದ ದೇವೇಂದ್ರನಿಗೆ ಶಾಂತಿಯೆಂದು ಹೆಸರು ವಾಲಿಯೆಂಬುವನು ಆ ಕಾಲದ ದೇವಶತ್ರುವು ಆಗ ಮಹಾವಿಷ್ಣುವೇ ಸಾಕ್ಷಾತ್ತಾಗಿ ಅವನನ್ನು ಸಂಹರಿಸುವನು

**ನೂರ ಎಂಭತ್ತಾರನೆಯ ಅಧ್ಯಾಯ**— 315-317

ಹನ್ನೊಂದನೆಯ ಮನುವಿಗೆ ರುದ್ರಪುತ್ರನೆಂದು ನಾಮಧೇಯವು ಸರ್ವರ್ತುಗಾದಿಗಳೇ ಅವನ ಮಕ್ಕಳು- ಹವಿಷ್ಮದಾದಿಗಳೇ ಆ ಕಾಲದ ಸಪ್ತರ್ಷಿಗಳು. ನಿರ್ಮಧ್ಯಾದಿಗಳೇ ದೇವತೆಗಳು ಅವರುಗಳ ಧೊರೆಯಾದ ಇಂದ್ರನಿಗೆ ವೃಷನೆಂದು ಹೆಸರು ಆ ಇಂದ್ರಶತ್ರುಗಳು ಆಗ್ಗೆ ದಶಗ್ರೀವಾದಿಗಳು ಆ ದಶಗ್ರೀವನನ್ನು ಶ್ರೀಮನ್ಮಹಾವಿಷ್ಣುವು ಹೆಂಗಸಿನ ರೂಪವನ್ನು ಧರಿಸಿಕೊಂಡು ಸಂಹರಿಸಿ ಬಿಡುವನು.

**ನೂರ ಎಂಭತ್ತೇಳನೆಯ ಅಧ್ಯಾಯ**— 318-320

ಹನ್ನೆರಡನೇ ಮನುವಿಗೆ ದಕ್ಷಪುತ್ರನೆಂದು ಹೆಸರು, ದೇವವಂತನೇ ಮುಂತಾದವರು ಅವನ ಪುತ್ರರು. ಸತ್ತಮಾದಿಗಳೇ ಸಪ್ತರ್ಷಿಗಳು. ಸುಶರ್ಮಾದಿಗಳೇ ದೇವಗಣಗಳು ನರಕಾಸುರನೇ ಆಗಿನ ದೇವತೆಗಳಿಗೆ ಶತ್ರುವಾಗುವನು ಆಗ ಮಹಾವಿಷ್ಣುವು ನಪುಂಸಕನ ರೂಪವನ್ನು ಧರಿಸಿ ನರಕಾಸುರನನ್ನು ಸಂಹರಿಸುವನು

**ನೂರ ಎಂಭತ್ತೆಂಟನೆಯ ಅಧ್ಯಾಯ**— 321-323

ಹದಿಮೂರನೇ ಮನುವಿಗೆ ರೌಚ್ಯನೆಂದು ಹೆಸರು. ಚಿತ್ರಸೇನಾದಿ

ಪುಟಸಂಖ್ಯೆ

ಮಾಡುತ್ತಿದ್ದೆನಾದುದರಿಂದ ಆ ಪೂಜಾಮಹಿಮೆಯಿಂದ ಅತೀತಾನಾಗತಜ್ಞಾನವು ಬಂದು ಈ ಮನ್ವಂತರ ವೃತ್ತಾಂತವನ್ನು ನಿನಗೆ ತಿಳಿಸಿರುತ್ತೇನೆಂದು ಹೇಳಿ ಇಂದ್ರಲೋಕವನ್ನು ಬಿಟ್ಟು ಬ್ರಹ್ಮಲೋಕಕ್ಕೆ ಪ್ರಯಾಣಮಾಡಿದಳು (ಈ ಮಾಸನಕ್ಷತ್ರ ಪೂಜೆಯನ್ನು ಈ ಮಹಾಪುರಾಣದಲ್ಲಿ ಹೇಳಿರುವಂತೆ ಆಚರಿಸುವವರೆಲ್ಲರಿಗೂ ಸಕಲ ಇಷ್ಟಾರ್ಥಗಳೂ ನೆರವೇರುವುದರಲ್ಲಿ ಸಂದೇಹವೇನಿದೆ ) 334-336

(ತೃತೀಯ ಸಂಪುಟದ ವಿಷಯಾನುಕ್ರಮಣಿಕೆ ಮುಗಿಯಿತು )



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟತ್ರಿಂಶದುತ್ತರ ಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ವರ್ತಂತೇ ಪಿತರಃ ಸ್ವರ್ಗೇ ಕೇಷಾಂಚಿನ್ನರಕೇ ತಥಾ ।
ನರಕಸ್ಥಾಃ ಫಲಂ ದಾತುಂ ಕಥಂ ಶಕ್ತಾವದಸ್ವ ಮೇ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪಿತೄಣಾಂ ತು ಗಣಾಃ ಸಪ್ತ ನಾಮತಸ್ತಾನ್ನಿಬೋಧ ಮೇ ।
ತ್ರಯೋಽಮೂರ್ತಿಮತಶ್ಚೈಷಾಂ ಚತ್ವಾರಶ್ಚ ಸಮೂರ್ತಯಃ ॥ ೨ ॥

ಸುಭಾಸುರಾ ಬರ್ಹಿಷದೋಽಗ್ನಿಷ್ವಾತ್ತಾಸ್ತಥೈವ ಚ ।
ತ್ರಯೋಽಮೂರ್ತಿಮತಶ್ಚೈಷಾಂ ಚತ್ವಾರಶ್ಚಾಪ್ಯಮೂರ್ತಯಃ ॥ ೩ ॥

---

### ಒಂದುನೂರ ಮೂವತ್ತೆಂಟನೇ ಅಧ್ಯಾಯವು.

೧. ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ,—ಸ್ವಾಮಿ! ಮಾರ್ಕಂಡೇಯರೇ! ನನಗೊಂದು ಸಂದೇಹವುಂಟಾಗಿದೆ ಅದನ್ನು ಮೊದಲು ತಿಳಿಸಬೇಕು ಕೆಲವರ ಪಿತೃಗಳು ಸ್ವರ್ಗದಲ್ಲಿ ವಾಸಮಾಡುತ್ತಾರೆ. ಇನ್ನು ಕೆಲವರು ಮಹಾಪಾಪ ಮಾಡಿ ನರಕದಲ್ಲಿರುತ್ತಾರಷ್ಟೆ? ಆ ನರಕದಲ್ಲಿರುವ ಪಿತೃಗಳು ತಮ್ಮ ವಂಶೀಯರಿಗೆ ಸತ್ಫಲವನ್ನನುಗ್ರಹಿಸಲು ಶಕ್ತರೆಂತಾದಾರು? ದಯಮಾಡಿ ತಿಳಿಸಿರಿ

೨-೪. ಮಾರ್ಕಂಡೇಯರು ಹೇಳುತ್ತಾರೆ —ಎಲೈ ರಾಜನೆ! ಕೇಳು ಪಿತೃಗಳ ಗಣವು ಏಳು. ಅವರ ಹೆಸರನ್ನು ಹೇಳುತ್ತೇನೆ ಅವರಲ್ಲಿ ಮೂರು ಮಂದಿ

ಕ್ರವ್ಯಾದಾಶ್ಚೋಪಹೂತಾಶ್ಚ ಆಜ್ಯಪಾಶ್ಚ ಸುಕಾಲಿನಃ ।
ಮೂರ್ತಿಮಂತಃ ಪಿತೃಗಣಾಶ್ಚತ್ವಾರಶ್ಚ ಪ್ರಕೀರ್ತಿತಾಃ ॥ ೪ ॥

ಸುಭಾಸ್ವರಾ ಬ್ರಹ್ಮಸುತಾಃ ಸೋಮಮಾಪ್ಯಾಯಯಂತಿ ಯೇ ।
ಬ್ರಹ್ಮಲೋಕಚರಾ ರಾಜನ್ನಿತ್ಯಂ ಮೂರ್ತಿವಿವರ್ಜಿತಾಃ ॥ ೫ ॥

ತಥಾ ಬರ್ಹಿಷದೋ ನಾಮ ರಾಜಪುತ್ರಾ ಮರೀಚಿನಃ ।
ಆಪ್ಯಾಯಯಂತಿ ತೇ ದೇವಾಂಲ್ಲೋಕೇ ಸೋಮಪದೇ ಸ್ಥಿತಾಃ ॥ ೬ ॥

ವಿಭ್ರಾಜಲೋಕೇ ತಿಷ್ಠಂತಿ ಅಗ್ನಿಷ್ವಾತ್ತಾ ನರಾಧಿಪ ।
ಪುಲಸ್ತ್ಯಸ್ಯ ಋಷೇಃ ಪುತ್ರಾ ಭಾವಯಂತಿ ಜಗಂತಿ ಯೇ ॥ ೭ ॥

ದಾನವಾನ್ಯಕ್ಷಗಂಧರ್ವಾನ್ಪಿಶಾಚೋರಗರಾಕ್ಷಸಾನ್ ।
ದೈತ್ಯಾನ್ಭೂತಪಿಶಾಚಾಂಶ್ಚ ವಿದ್ಯಾಧರಗಣಾಂಸ್ತಥಾ ॥ ೮ ।

---

ಪಿತೃಗಳಿಗೆ ಆಕಾರವೇ ಇಲ್ಲವಾದ್ದರಿಂದ ಅಮೂರ್ತಿಮಂತ ಪಿತೃಗಳೆನಿಸುವರು. ೪ ಈ ನಾಲ್ಕು ಮಂದಿ ಪಿತೃಗಳಿಗೆ ಮೂರ್ತಿ (ಆಕಾರ) ಯುಂಟು. ಇವರಲ್ಲಿ ಸುಭಾಸ್ವರರೂ, ಬರ್ಹಿಷದರೂ, ಅಗ್ನಿಷ್ವಾತ್ತರೂ ಎಂಬ ಹೆಸರಿನ ಮೂವರು ಪಿತೃಗಳು ಅಮೂರ್ತಿಮತ್ಪಿತೃಗಳೆನಿಸುವರು. ಕ್ರವ್ಯಾದ, ಉಪಹೂತ, ಆಜ್ಯಪ, ಸುಕಾಲ ಎಂಬ ಹೆಸರಿನ ನಾಲ್ವರು ಪಿತೃಗಳೂ ಮೂರ್ತಿಮಂತಪಿತೃಗಳ ಗುಂಪಿಗೆ ಸೇರಿದವರು.

೫-೬ ಇವರಲ್ಲಿ ಸುಭಾಸ್ವರರೆಂಬುವರು ಬ್ರಹ್ಮನ ಮಕ್ಕಳು, ಅವರು ಯಾವಾಗಲೂ ಆಕಾರರಹಿತರಾಗಿ ಬ್ರಹ್ಮಲೋಕದಲ್ಲಿಯೇ ಸಂಚರಿಸುತ್ತಾ ಚಂದ್ರನನ್ನು ಆಪ್ಯಾಯನ ಪಡಿಸುತ್ತಾರೆ. ಅವರಂತೆಯೇ ಬರ್ಹಿಷದರೆಂಬ ಪಿತೃಗಳೂ ಮರೀಚಿಬ್ರಹ್ಮನ ಮಕ್ಕಳಾಗಿ ಚಂದ್ರಮಂಡಲದಲ್ಲಿಯೇ ವಾಸಮಾಡುತ್ತಾ ದೇವತೆಗಳನ್ನು ಸರ್ವದಾ ಸಂತೋಷಪಡಿಸುತ್ತಾ ಇರುತ್ತಾರೆ.

೭ ಎಲೈ ದೊರೆಯೇ! ಕೇಳು. ಅಗ್ನಿಷ್ವಾತ್ತರೆಂಬ ಪಿತೃಗಳು ಪುಲಸ್ತ್ಯ ಋಷಿಯ ಮಕ್ಕಳುಗಳು. ಅವರು ಸೂರ್ಯ (ವಿಭ್ರಾಜ) ಲೋಕದಲ್ಲಿ ವಾಸಮಾಡುತ್ತಾ ಪ್ರಪಂಚವನ್ನು ಜ್ಞಾನದೃಷ್ಟಿಯಿಂದ ನೋಡುತ್ತಲಿರುವರು.

೮-೧೦ ಶುಕ್ರ, ಗುರು, ಕರ್ದಮಬ್ರಹ್ಮ, ವಸಿಷ್ಠರ ಮಕ್ಕಳುಗಳ ಹೆಸರನ್ನು ಇದರ ಕೆಳಗೆ ವಿವರವಾಗಿ ಬರೆದಿರುತ್ತೇವೆ. ದಾನವರು, ಯಕ್ಷರು, ಗಂಧರ್ವರು,

ಸಾಗಾನ್ಸರ್ಪಾನ್ಸುಪರ್ಣಾಂಶ್ಚ ಪರ್ವತಾನ್ಸರಿತಸ್ತಥಾ ।
ಕ್ರವ್ಯಾದಾಂಶ್ಚೋಪಹೂತಾಂಶ್ಚ ಆಜ್ಯಪಾಂಶ್ಚ ಸುಕಾಲಿನಃ ॥ ೯ ॥

ಬ್ರಾಹ್ಮಣಾನ್ಕ್ಷತ್ರಿಯಾನ್ವೈಶ್ಯಾನ್ಭಾವಯಂತ್ಯಂತ್ಯಜಾಂಸ್ತಥಾ ।
ಕವೇರಾಂಗಿರಸಶ್ಚೈವ ಕರ್ದಮಸ್ಯ ಪ್ರಜಾಪತೇಃ ॥ ೧೦ ॥

ವಸಿಷ್ಠಸ್ಯ ತಥಾ ಪುತ್ರಾಃ ಕ್ರಮೇಣೈತೇ ಪ್ರಕೀರ್ತಿತಾಃ ।
ಜ್ಯೋತಿರ್ಭಾಸಃ ಸ್ಮೃತಾ ಲೋಕೇ ಯೇ ಚ ಲೋಕಾ ಮರೀಚಿನಃ ॥ ೧೧ ॥

ತೇಜಸ್ವಿನೋ ಮಾನಸಾಶ್ಚ ಕ್ರಮೇಣೈತೇ ಪ್ರಕೀರ್ತಿತಾಃ ।
ಏತೇ ಶ್ರಾದ್ಧಸ್ಯ ಭೋಕ್ತಾರೋ ವಿಶ್ವೇದೇವೈಃ ಸದಾ ಸಹ ॥ ೧೨ ॥

ಏತೇ ಶ್ರಾದ್ಧಂ ಸದಾ ಭುಕ್ತ್ವಾ ಪಿತೄನ್ಸಂತರ್ಪಯಂತ್ಯತಃ ।
ಯತ್ರ ಕ್ವಚನ ಧರ್ಮಜ್ಞ ವರ್ತಮಾನಾನ್ಹಿ ಯೋಗತಃ ॥ ೧೩ ॥

ಏತೇ ಚ ಪುಷ್ಟ್ಯಾ ವಿನಿಯೋಜಯಂತಿ
ಶ್ರಾದ್ಧಸ್ಯ ದಾತಾರಮದೀನಸತ್ತ್ವಾಃ ।

---

ಪಿಶಾಚ, ಸರ್ಪ, ರಾಕ್ಷಸ, ದೈತ್ಯ, ಭೂತ, ಪಿಶಾಚಿ, ವಿದ್ಯಾಧರಗಣ, ನಾಗರು, ಸರ್ಪರು, ಗರುಡರು, ಪರ್ವತಗಳು, ಹೊಳೆಗಳು, ಕ್ರವ್ಯಾದರು, ಉಪಹೂತರು, ಆಜ್ಯಪರು, ಸುಕಾಲಿಗಳು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಹೊಲೆಯ, ಇವರುಗಳೇ ಮೇಲ್ಕಂಡವರ ಮಕ್ಕಳು ಮರೀಚಿಬ್ರಹ್ಮನ ಮಕ್ಕಳು ಯಾರೆಂದರೆ —ಜ್ಯೋತಿರ್ಭಾಸ ಇವರುಗಳು ಇವರುಗಳು ಮಾನಸದಿಂದ ಹುಟ್ಟಿದವರು ಇವರೆಲ್ಲರೂ ವಿಶ್ವೇದೇವ ರೊಡನೆ ಬಂದು ಶ್ರಾದ್ಧದಲ್ಲಿ ಭೋಜನಮಾಡುತ್ತಾರೆ ಇವರುಗಳೆಲ್ಲರೂ ಶ್ರಾದ್ಧಾನ್ನ ದಿಂದ ತೃಪ್ತರಾಗಿ ತಮ್ಮ ತಮ್ಮ ಮಕ್ಕಳ (ಮೇಲೆ ಬರೆದ ಸರಿವಾರದ) ಭೂಲೋಕದ ಪಿತೃವರ್ಗಕ್ಕೆಲ್ಲಾ ತೃಪ್ತಿಯನ್ನುಂಟುಮಾಡುತ್ತಾರೆ ಯಾರಾದರೂ ಪುಣ್ಯವಂತರಾದ ವರು ಅವರವರ ಅದೃಷ್ಟದಿಂದ ಸತ್ತು ಸ್ವರ್ಗಕ್ಕೆ ಸೇರಿದ್ದರೆ ಅವರವರ ಮಕ್ಕಳಿಂದ ಕೊಡಲ್ಪಡುವ ಶ್ರಾದ್ಧಾನ್ನವನ್ನು ಭುಜಿಸಿ ಮೇಲ್ಕಂಡ ಪಿತೃದೇವತೆಗಳು ಶ್ರಾದ್ಧಕರ್ತನ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುತ್ತಾರೆ ಮೇಲೆ ಕಂಡ ಪಿತೃದೇವತೆಗಳು ಶ್ರಾದ್ಧ ದಾತೃವನ್ನು ಅವರವರ ಪಿತೃಗಳೊಡನೆ ಸೇರಿಸಿ, ಅವರು ಕೊಡುವ ಅನ್ನೋದಕ ಗಳನ್ನು ಅವರವರ ಪಿತೃಗಳಿಗೆ ಸೇರುವಂತೆ ಮಾಡಿ, ಎಲ್ಲೆಲ್ಲಿ ಅವರವರ ಮಕ್ಕಳು

**ತೃಪ್ತಾಸ್ತತ್ರೈತೇ ವಿನಿಯೋಜಯಂತಿ**
**ದಾತುಃ ಪಿತೄನ್ಸರ್ವಗತಾನ್ಮಹೀಪ** ॥ ೧೪ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಪಿತೃಸ್ವರ್ಗನರಕನಿವಾಸಹೇತುನಿರ್ಣಯೋ ನಾಮಾಷ್ಟತ್ರಿಂಶದುತ್ತರ ಶತತಮೋಽಧ್ಯಾಯಃ**



ಗಳಿರುವರೋ ಅವರುಗಳಿಗೆಲ್ಲಾ ಆಶೀರ್ವಾದಮಾಡುವಂತೆ ಕಲ್ಪಿಸಿ, ತಾವೂ ಸಹ ತೃಪ್ತಿಹೊಂದುತ್ತಾರೆ

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಪಿತೃಗಳ ಸ್ವರ್ಗನರಕನಿವಾಸ ಹೇತು ನಿರ್ಣಯವೆಂಬ ಹೆಸರಿನ ಒಂದುನೂರ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕೋನಚತ್ವಾರಿಂಶದುತ್ತರ ಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ವೈವಸ್ವತೇಽಂತರೇ ಪ್ರಾಪ್ತೇ ಪ್ರಥಮೋ ಭೃಗುನಂದನ ।
ಶ್ರಾದ್ಧಂ ಪ್ರದರ್ಶಿತಂ ಕೇನ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಹಿರಣ್ಯಾಕ್ಷವಧೇ ಪೂರ್ವಂ ಯದಾ ತ್ಯಕ್ತ್ವಾ ಧರಾಧರಾಃ ।
ಧರಾಂ ಸಪಕ್ಷಾ ಖಗವಾಃ ಖಂ ಗತಾ ಮನುಜೇಶ್ವರ ॥ ೨ ॥

ಧರಾಧರಪರಿತ್ಯಕ್ತಾ ತದಾ ಚಲಿತಬಂಧನಾ ।
ಧರಾ ಸ್ಥಾನಾಚ್ಚ್ಯುತಾ ವೇಗಾತ್ಪ್ರವಿವೇಶ ರಸಾತಲಂ ॥ ೩ ॥

ಹಿರಣ್ಯಾಕ್ಷಂ ತದಾ ಹತ್ವಾ ನೃವರಾಹೋ ಜನಾರ್ದನಃ ।
ಪ್ರೋಥೇನ ಚ ಕರಾಭ್ಯಾಂ ಚ ವಿಧಾರ್ಯ ವಸುಧಾಂ ಬಲಾತ್ ॥ ೪ ॥

---

### ಒಂದುನೂರ ಮೂವತ್ತೊಂಭತ್ತನೆಯ ಅಧ್ಯಾಯವು.

೧ ವಜ್ರಮಹಾರಾಜನು ಪ್ರಶ್ನೆಮಾಡುತ್ತಾನೆ —ಎಲೈ ಮಾರ್ಕಂಡೇಯನೆ! ಪೂರ್ವದಲ್ಲಿ ವೈವಸ್ವತ ಮನ್ವಂತರವು ಆರಂಭವಾದಾಗ ಮೊದಲು ಶ್ರಾದ್ಧವನ್ನು ಕಂಡು ಹಿಡಿದವರಾರು ? ಈ ಪ್ರಶ್ನೆಗೆ ಉತ್ತರವನ್ನು ಕೊಡು

೨-೧೩ ಪೂರ್ವದಲ್ಲಿ ಹಿರಣ್ಯಾಕ್ಷನ ವಧೆಯಾದ ನಂತರದಲ್ಲಿ ಪರ್ವತಗಳೆಲ್ಲವೂ ಭೂಮಿಯನ್ನು ಬಿಟ್ಟು ಹಕ್ಕಿಗಳಂತೆ ಆಕಾಶಕ್ಕೆ ಹಾರಿಹೋದವು. ಯಾವಾಗ ಬೆಟ್ಟಗಳು ಭೂಮಿಯನ್ನು ಬಿಟ್ಟು ಹೊರಟುಹೋದುವೋ ಆಗ ಭೂಮಿಗೆ ಬೆಸಗೆ

ಸಂಪೂಜ್ಯಮಾನಸ್ತ್ರಿದಶೈಃ ಪ್ರವಿವೇಶ ರಸಾತಲಂ ।
ರಸಾತಲತಲಂ ಗತ್ವಾ ಶೇಷಮೂರ್ತೌ ಸ್ವಕೇ ಸ್ಥಿತಃ ॥ ೫ ॥

ದಂಷ್ಟ್ರಾಗ್ರೇಣ ಸಮುದ್ಧೃತ್ಯ ಮಹೀಂ ದಧ್ರೇ ತದಾ ಭುಜೇ ।
ವಾಮಬಾಹುನಿವಿಷ್ಟಾಂ ತಾಂ ಕೃತ್ವಾ ತ್ರಿದಶಪುಂಗವಃ ॥ ೬ ॥

ಉಜ್ಝಹಾರ ಮಹಾತೇಜಾ ಲೋಕಾನಾಂ ಹಿತಕಾಮ್ಯಯಾ ।
ರತ್ನಜ್ವಾಲಾವಲೀಪುಂಜದುರ್ನಿರ್ಭಾವ್ಯಮುಖಾಂಬುಜಃ ॥ ೭ ॥

ಶೇಷಸ್ತುಷ್ಟಾವ ದೇವೇಶಂ ತಸ್ಮಿನ್ಕಾಲೇ ಜಗದ್ಗುರುಂ ।
ಪುರಂಧ್ರಿವೇಷಾ ವಸುಧಾ ದೇವಂ ತದ್ಬಾಹುಸಂಸ್ಥಿತಾ ॥ ೮ ॥

ತದಾ ತುಷ್ಟಾವ ಭೂಪಾಲ ರಮಣೀಯತಮಾಕೃತಿಃ ।
ಉದ್ಧೃತ್ಯ ವಸುಧಾಂ ಸ್ಥಾನೇ ಸ್ಥಾಪಯಿತ್ವಾ ತಥಾ ಸ್ವಕೇ ॥ ೯ ॥

ಜಗಾಮ ಭೂಮೌ ಧರ್ಮಜ್ಞ ವರಾಹಂ ನಾಮ ಪರ್ವತಂ ।
ಕಲ್ಪಾರಂಭೇ ವರಾಹಸ್ಯ ಪರಮೂರ್ತೇಃ ಸಶೈಲತಾಂ ॥ ೧೦ ॥

ತಾಂ ಸಮಾಸಾದ್ಯ ಧರ್ಮಾತ್ಮಾ ದೇವಃ ಸರ್ವಗತಃ ಪ್ರಭುಃ ।
ದಂಷ್ಟ್ರಾಗ್ರಲಗ್ನಂ ಮೃತ್ಪಿಂಡಂ ಗೃಹೀತ್ವಾ ದಕ್ಷಿಣೇ ಕರೇ ॥ ೧೧ ॥

---

ಬಿಟ್ಟಂತಾಗಿ ಹಗುರವಾಗಿ ಹೋದ್ದರಿಂದ ಭೂಮಿಯು ಅಲ್ಲಾಡುತ್ತಾ ಅಲ್ಲಾಡುತ್ತಾ ಪಾತಾಳಲೋಕಕ್ಕೆ ಮುಳುಗಿ ಹೋಗಿಬಿಟ್ಟಿತು ಆಗ ಮಹಾವಿಷ್ಣುವು ವರಾಹಾವತಾರವನ್ನು ಮಾಡಿ ತನ್ನ ಮೂತಿಯಿಂದ ಭೂಮಿಯನ್ನು ಮೇಲಕ್ಕೆತ್ತಿ ಯಥಾ ಸ್ಥಳದಲ್ಲಿರಿಸಿದನು ಈ ರೀತಿ ದೇವತಾಸಾರ್ವಭೌಮನು ಮಾಡಿದುದನ್ನು ನೋಡಿ ಆದಿಶೇಷನು ಆ ದೇವನನ್ನು ಬಹಳವಾಗಿ ಸ್ತೋತ್ರಮಾಡಿದನು ಆಗ ಸ್ವಾಮಿಯು ಆ ಸ್ತೋತ್ರಕ್ಕೆ ಮೆಚ್ಚಿ ಆ ಭೂಮಿಯನ್ನು ಇಟ್ಟಬಳಿಕ ಆ ಭೂಮಿಯ ಮೇಲೆ ವರಾಹ ಪರ್ವತವೆಂಬ ಒಂದು ಪರ್ವತವನ್ನು ಸ್ಥಾಪಿಸಿದನು ಕಲ್ಪಾದಿಯಲ್ಲಿ ಪರಮಾತ್ಮನು ವರಾಹಾವತಾರ ಮಾಡಿದ ನೆನಪಿಗಾಗಿ ವರಾಹಮೂರ್ತಿಯೇ ಪರ್ವತರೂಪದಲ್ಲಿ ಈಗಲೂ ನಿಂತಿದೆ ಈರೀತಿ ಆ ವರಾಹಪರ್ವತವನ್ನು ಹೊಂದಿ ಆ ಸರ್ವಗತನಾದ ಪ್ರಭುವು ತನ್ನ ಕೋರೆದಾಡೆಯ ಮೇಲೆ ನಿಂತಿದ್ದ ಒಂದು ಮಣ್ಣಿನ ಉಂಡೆಯನ್ನು ಬಲಗೈಯಲ್ಲಿ ಹಿಡಿದುಕೊಂಡು ತನ್ನ ಬೆವರನ್ನೇ ಎಳ್ಳನ್ನಾಗಿಮಾಡಿಕೊಂಡು, ರೋಮ

ಪ್ರಸ್ವೇದಾಚ್ಚ ತಿಲಾನ್ಕೃತ್ವಾ ದರ್ಭಾರ್ರೋಮಭ್ಯ ಏವ ಚ ।
ಜಲಪ್ರಸ್ರವಣಾಭ್ಯಾಶೇ ತಸ್ಮಿನ್ಗಿರಿವರೇ ತದಾ ॥ ೦೨ ॥

ದಕ್ಷಿಣಾಗ್ರಾಂಸ್ತು ವಿನ್ಯಸ್ಯ ದರ್ಭಾಂಸ್ತಾನ್ಮಧುಸೂದನಃ ।
ನೃತ್ಪಿಂಡಾನ್ಸತಿಲಾಂಸ್ತೇಷು ದತ್ತವಾಂಸ್ತ್ರೀನ್ನರಾಧಿಪಃ ॥ ೧೩ ॥

ದತ್ವಾ ಚ ಗಂಧಪುಷ್ಪಾದ್ಯೈಃ ಪೂಜಯಾಮಾಸ ಧಾರ್ಮಿಕಃ ।
ಪೂಜಯಿತ್ವಾ ಚ ಮರ್ಯಾದಾಂ ಕೃತವಾನ್ಸ ನರಾಧಿಪ ॥ ೧೪ ॥

ಅದ್ಯಪ್ರಭೃತಿ ಲೋಕೇಷು ಪ್ರೇತಾನುದ್ದಿಶ್ಯ ವೈ ಪಿತೄನ್ ।
ಯೇ ತು ಶ್ರಾದ್ಧಂ ಕರಿಷ್ಯಂತಿ ತೇಷಾಂ ಪುಷ್ಟಿರ್ಭವಿಷ್ಯತಿ ॥ ೧೫ ॥

ಶ್ರಾದ್ಧಕಾಲೇ ತಥಾ ಯೇನ ಪಿಂಡನಿರ್ವಪಣಂ ತಥಾ ।
ಪಿತೄಣಾಂ ಯೇ ಕರಿಷ್ಯಂತಿ ತೇಷಾಂ ಪುಷ್ಟಿರ್ಭವಿಷ್ಯತಿ ॥ ೧೬ ॥

ಪಿತಾಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।
ಪೂಜಯಾ ತೇ ಭವಿಷ್ಯಂತಿ ಸ್ವಯಂ ಪಿಂಡೇಷು ನಿತ್ಯದಾ ॥ ೧೭ ॥

---

ಗಳನ್ನೇ ದರ್ಭೆಗಳನ್ನಾಗಿಮಾಡಿಕೊಂಡು ಆ ಪರ್ವತದ ಬಳಿ ಇದ್ದ ಒಂದು ನೀರು ಹರಿಯುತ್ತಿದ್ದ ನದಿಯ ತೀರದಲ್ಲಿ ಕುಳಿತು ಆ ರೋಮರೂಪವಾದ ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹರಡಿ ಅದರ ಮೇಲೆ ಎಳ್ಳು-ನೀರನ್ನು ಬಿಟ್ಟು ಅದರ ಮೇಲೆ ಮೂರು ಮೃತ್ಪಿಂಡಗಳನ್ನು ಹರಡಿದನು

೧೪-೧೭ ಆ ಪರಮಾತ್ಮನು ಗಂಧಪುಷ್ಪಾಕ್ಷತೆಗಳಿಂದ ಆ|ಪಿಂಡಗಳನ್ನು ಕಲ್ಪನೆ ಮಾಡಿದನು, ಮತ್ತು ಹೇಳಿದನೇನೆಂದರೆ —ಈ ಸಮಯದಿಂದಾರಂಭಿಸಿ ಇನ್ನು ಮುಂದೆ ಪ್ರೇತಗಳನ್ನಾಗಲೀ ಪಿತೃಗಳನ್ನಾಗಲೀ ಉದ್ದೇಶಮಾಡಿಕೊಂಡು ಯಾರು ಶ್ರಾದ್ಧವನ್ನು ಮಾಡುತ್ತಾರೆಯೋ ಅಂಥವರ ಪಿತೃಗಳು ತೃಪ್ತರಾಗಿ ಶ್ರಾದ್ಧಕರ್ತೃವಿಗ ಪುಷ್ಟಿಯನ್ನುಂಟುಮಾಡುತ್ತಾರೆ ಹಾಗೂ ಶ್ರಾದ್ಧಕಾಲದಲ್ಲಿ ಯಾರು ಪಿಂಡಪ್ರದಾನ ಮಾಡುವರೋ ಅವರ ಪಿತೃಗಳಿಗೆ ತೃಪ್ತಿಯುಂಟಾಗುತ್ತದೆ ಆ ಮೂರು ಪಿಂಡಗಳಲ್ಲಿ ತಂದೆ-ತಾತ-ಮುತ್ತಾತ ಈ ಮೂವರೂ ಸನ್ನಿಹಿತರಾಗಿದ್ದುಕೊಂಡು ತಮಗೆ ಮಾಡಿದ ಪೂಜೆಯಿಂದ (ಪಿಂಡಪೂಜೆಯಿಂದ) ತೃಪ್ತಿಹೊಂದುವರು

**ತೇಷಾಂ ತ್ರಯಂ ಪೂಜಿತಾಶ್ಚ ಭವಿಷ್ಯಂತಿ ತಥಾಽಗ್ನಯಃ ।**
**ತ್ರಯೋ ಲೋಕಾಸ್ತ್ರಯೋ ದೇವಾಸ್ತಥೈವ ಚ ಯುಗತ್ರಯಂ ॥ ೧೮ ॥**

**ಪೂಜಿತಾಶ್ಚ ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।**
**ಪೂಜಿತೈಸ್ತೈರ್ಭವಿಷ್ಯಾಮಿ ಚತುರಾತ್ಮಾ ತಥಾಽಪ್ಯಹಂ ॥ ೧೯ ॥**

**ಪಿತುಃ ಪೈತಾಮಹಃ ಪಿಂಡೋ ವಾಸುದೇವಃ ಪ್ರಕೀರ್ತಿತಃ ।**
**ಪೈತಾಮಹಶ್ಚ ನಿರ್ದಿಷ್ಟಸ್ತಥಾ ಸಂಕರ್ಷಣಃ ಪ್ರಭುಃ ॥ ೨೦ ॥**

**ಪಿತೃಪಿಂಡಶ್ಚ ವಿಜ್ಞೇಯಃ ಪ್ರದ್ಯುಮ್ನಶ್ಚಾಪರಾಜಿತಃ ।**
**ಆತ್ಮಾಽನಿರುದ್ಧೋ ವಿಜ್ಞೇಯಃ ಪಿಂಡನಿರ್ವಪಣಂ ಬುಧೈಃ ॥ ೨೧ ॥**

---

೧೮-೨೧ ಈರೀತಿ ಪಿತೃಪಿತಾಮಹ-ಪ್ರಪಿತಾಮಹರುಗಳನ್ನು ಆ ಪಿಂಡಗಳಲ್ಲಿ ಯಾರು ಪೂಜೆಮಾಡುವರೋ ಆ ಪೂಜೆಯಿಂದ ದಕ್ಷಿಣಾಗ್ನಿ-ಗಾರ್ಹಪತ್ಯ-ಆಹವನೀಯ ಗಳೆಂಬ ಮೂರು ಅಗ್ನಿಗಳೂ ಪೂಜಿತರಾಗಿ ತೃಪ್ತರಾಗುವರು ಮತ್ತು ಸ್ವರ್ಗ-ಮರ್ತ್ಯ-ಪಾತಾಳಗಳೆಂಬ ಮೂರು ಲೋಕಗಳನ್ನೂ, ದೇವತಾತ್ರಯವನ್ನೂ, ಯುಗತ್ರಯ ವನ್ನೂ ಪೂಜಿಸಿದಂತಾಗುವುದು ಮೂರು ದೇವತೆಗಳೆಂದರೆ ಬ್ರಹ್ಮ-ವಿಷ್ಣು-ಮಹೇಶ್ವರರು ಮೂರು ಮಂದಿಯೂ ಪೂಜಿತರಾಗುವರೆಂದು ತಿಳಿಯಬೇಕು ಈರೀತಿ ಅವರು ಮಾಡುವ ಪಿಂಡಪೂಜೆಯಿಂದ ಚತುರಾತ್ಮಸ್ವರೂಪನಾದ ನಾನೂ ಸಹ ಪೂಜಿತ ನಾಗಿ ತೃಪ್ತಿಹೊಂದುವೆನು ತನ್ನ ತಂದೆಯ ತಾತನ (ಮುತ್ತಜ್ಜ) ಪಿಂಡವು ವಾಸು ದೇವಸ್ವರೂಪವೆಂದು ಹೇಳಲ್ಪಡುವುದು ತನ್ನ ಅಜ್ಜನ ಪಿಂಡವು ಪ್ರಭುವಾದ ಸಂಕರ್ಷಣಮೂರ್ತಿಯ ಸ್ವರೂಪವೆನಿಸಲ್ಪಡುವುದು ತನ್ನ ತಂದೆಯ ಪಿಂಡವಾದರೋ ಮಹಾಪರಾಕ್ರಮಶಾಲಿಯಾದ ಪ್ರದ್ಯುಮ್ನನ ಸ್ವರೂಪವೆಂದರಿಯಬೇಕು. ಪಿಂಡವನ್ನು ನಿರ್ವಪಣ (ಹಾಕುವ) ಮಾಡುವ ತನ್ನನ್ನು ಅನಿರುದ್ಧನೆಂದು ತಿಳಿಯಬೇಕೆಂದು ತಿಳಿದ ಪ್ರಾಜ್ಞರು ಹೇಳುವರು. ಈ ರೀತಿ ಶ್ರಾದ್ಧದಲ್ಲಿ ನಾಲ್ಕು ವಿಧವಾದ ವೈಷ್ಣವ ತೇಜಸ್ಸಿನಿಂದ ಭಗವಂತನು ತೃಪ್ತನಾಗುವುದರಿಂದ ವೈಷ್ಣವ ತೇಜಸ್ಸಿಲ್ಲವೆ ಹೋದರೆ ಶಾದ್ಧಮಾಡುವುದು ಸಾಧ್ಯವಿಲ್ಲವೆಂದು ತಿಳಿಯಬೇಕು. ಈರೀತಿ ನಾನು ವಾಸುದೇವ

ಶ್ರಾದ್ಧಂ ಕರ್ತುಂ ಕಥಂ ಶಕ್ಯಂ ವಿನಾ ವೈಷ್ಣವತೇಜಸಾ ।
ಏವಂ ಸಂಪೂಜಿತಸ್ತೇನ ಚತುರಾತ್ಮಾತ್ವಹಂ ಸ್ಥಿತೇ ॥ ೨೦ ॥

ಭವಿಷ್ಯಾಮಿ ಪ್ರದಾಸ್ಯಾಮಿ ತಸ್ಯ ಕಾಮಾನ್ಯಥೇಪ್ಸಿತಾನ್ ।
ಚತ್ವಾರಃ ಪೂಜಿತಾ ವೇದಾಶ್ಚತ್ವಾರಶ್ಚ ಸಥ್ಯಾಗ್ನಯಃ ॥ ೨೧ ॥

ಚತ್ವಾರಶ್ಚ ಯುಗಾಸ್ತೇನ ಚತಸ್ರಶ್ಚ ದಿಶಸ್ತಥಾ ।
ಚತ್ವಾರಶ್ಚ ತಥಾ ವರ್ಣಾಶ್ಚತ್ವಾರಶ್ಚ ತಥಾಽಶ್ರಮಾಃ ॥ ೨೪ ॥

ಚತ್ವಾರೋ ಲೋಕಪಾಲಾಶ್ಚ ಭವಿಷ್ಯಂತೀಹ ಪೂಜಿತಾಃ ।
ಏವಂ ಕೃತ್ವಾ ಸ ಮರ್ಯಾದಾಂ ತತ್ರೈವಾಂತರಧೀಯತ ॥ ೨೫ ॥

ಸ್ವರ್ಗಂ ಚ ಮೋಕ್ಷಂ ಚ ಯಶಃ ಸುಖಾನಿ
ರಾಜ್ಯಂ ಚ ಪುತ್ರಾನಥ ಭೂಮಿಪಾಲ ।

---

ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧರೆಂಬ ಹೆಸರಿನ ಚತುರಾತ್ಮನಾಗಿ ಶ್ರಾದ್ಧದಲ್ಲಿ ಪೂಜೆಯನ್ನು ಸ್ವೀಕರಿಸುತ್ತೇನೆ ಈ ರೀತಿ ಮಾಡಿದ ಪಿಂಡಪೂಜೆಯಿಂದ ನಾನು ತೃಪ್ತನಾಗಿ, ಶ್ರಾದ್ಧಮಾಡುವನಿಗೆ ಅವನು ಕೇಳಿದ ಇಷ್ಟಾರ್ಥಗಳನ್ನೆಲ್ಲಾ ಕೊಡುತ್ತೇನೆ ಈರೀತಿ ನಾನು ತೃಪ್ತನಾದ ಬಳಿಕ ನಾಲ್ಕು ವಿಧವಾದ ವೇದಗಳೂ ನಾಲ್ಕು ವಿಧವಾದ ಅಗ್ನಿಗಳೂ, ನಾಲ್ಕು ವಿಧವಾದ ಯುಗಗಳೂ, ನಾಲ್ಕು ದಿಕ್ಕುಗಳೂ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳೂ, ಬ್ರಹ್ಮಚಾರೀ, ಗೃಹೀ, ವಾನಪ್ರಸ್ಥ, ಸನ್ಯಾಸವೆಂಬ ನಾಲ್ಕು ಆಶ್ರಮಗಳೂ ನಾಲ್ಕು ಮಂದಿ ಲೋಕಪಾಲಕರೂ ಸಹ ತೃಪ್ತರಾಗಲು ಅಡ್ಡಿಯಿಲ್ಲ ಈ ರೀತಿ ಆ ಪರಮಾತ್ಮನು ಲೋಕದಲ್ಲಿ ಈ ವಿಧವಾದ ಶ್ರಾದ್ಧ ಮರ್ಯಾದೆಯನ್ನು ಉಂಟುಮಾಡಿದವನಾಗಿ ಕೂಡಲೇ ಅಲ್ಲಿಯೋ ಅಂತರ್ಧಾನವಾದನು ಆ ಬಳಿಕ ಆ ಕಾಲದಿಂದ ಹಿಡಿದು ಇಲ್ಲಿಯವರಿಗೆ ಸಜ್ಜನರಿಂದ ಏರ್ಪಡಿಸಲ್ಪಟ್ಟ ಆ ಶ್ರಾದ್ಧಮರ್ಯಾದಯು ನಡೆದುಕೊಂಡು ಬರುತ್ತಲಿದೆ ಈರೀತಿಯಾಗಿ ಯಾರು ಭಕ್ತಿಯಿಂದ ಶ್ರಾದ್ಧವನ್ನು ಮಾಡುವರೋ ಅಂತಹ ಪುಣ್ಯಶಾಲಿಗಳಿಗೆ ಸರ್ವೇಶ್ವರನಾದ್ದ ದೇವೇಶ್ವರನು ಸ್ವರ್ಗವನ್ನೂ, ಮೋಕ್ಷವನ್ನೂ, ಯಶಸ್ಸನ್ನೂ, ಸುಖಗಳನ್ನೂ, ರಾಜ್ಯವನ್ನೂ, ಸತ್ಪುತ್ರರನ್ನೂ, ಒಳ್ಳೆಯ ಹೆಂಡತಿಯರನ್ನೂ, ಬೇಕು ಬೇಕಾದ

ಸ್ತ್ರಿಯಶ್ಚ ಮುಖ್ಯಾ ವಿವಿಧಾಂಶ್ಚ
ಕಾಮಾರ್ದೇವೇಶ್ವರಃ ಶ್ರಾದ್ಧ ಕೃತೋ ವಿಧತ್ತೇ ॥೨೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರಾದ್ಧೋತ್ಪತ್ತಿರ್ನಾಮೈಕೋನಚತ್ವಾರಿಂ
ಶದುತ್ತರ ಶತತಮೋಽಧ್ಯಾಯಃ

ಭಾಗ್ಯಗಳನ್ನು ಸಹ ಕೊಟ್ಟು ಕಾಪಾಡುವನೆಂದು ಮಾರ್ಕಂಡೇಯಮಹರ್ಷಿಗಳು ವಜ್ರ ಮಹಾರಾಜನಿಗೆ ಹೇಳಿದರು.

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಶ್ರಾದ್ಧೋತ್ಪತ್ತಿನಾಮಕ ಒಂದುನೂರ
ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವಂಚ್ಛ್ರೋತುಮಿಚ್ಛಾಮಿ ಕಥ್ಯಮಾನಮಹಂ ತ್ವಯಾ ।
ವಿಧಿಂ ಶ್ರಾದ್ಧಸ್ಯ ಧರ್ಮಜ್ಞ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ವಕ್ಷ್ಯಮಾಣಗುಣಾನ್ವಿಪ್ರಾನ್ಪೂರ್ವೇದ್ಯುರುಪಮಂತ್ರಯೇತ್ ।
ಕರ್ತಾ ಸಮೇತೈಸ್ತೈರ್ಭಾವ್ಯಂ ಸಂಯತೈಶ್ಚ ನಿಮಂತ್ರಿತೈಃ ॥ ೨ ॥

ಶ್ರಾದ್ಧಾಹೇಪ್ರಯತಃ ಸ್ನಾತಃ ಸ್ವಾಚಾಂತಃ ಸುಸಮಾಹಿತಃ ।
ಶುಕ್ಲವಾಸಾಃ ಸಮಭ್ಯರ್ಚ್ಯ ನೃವರಾಹಂ ಜನಾರ್ದನಂ ॥ ೩ ॥

### ಒಂದು ನೂರ ನಲವತ್ತನೆಯ ಅಧ್ಯಾಯವು.

೧ ವಜ್ರಮಹಾರಾಜನು ಹೇಳುತ್ತಾನೆ —ಸ್ವಾಮಿ, ಮಾರ್ಕಂಡೇಯ ಮಹರ್ಷಿಗಳೇ! ನಿಮ್ಮ ಬಾಯಿಯಿಂದ ಶ್ರಾದ್ಧವಿಧಿಯನ್ನು ಕೇಳಬೇಕೆಂದು ಅಪೇಕ್ಷೆಯುಂಟಾಗಿದೆ ಅದನ್ನು ನನಗೋಸ್ಕರವಾಗಿ ದಯವಿಟ್ಟು ತಿಳಿಸಬೇಕು

೨ ಮಾರ್ಕಂಡೇಯರು ಹೇಳುತ್ತಾರೆ —ನಾನು ಮುಂದೆ ಹೇಳುವ ಗುಣಗಳನ್ನು ಹೊಂದಿರುವ ಬ್ರಾಹ್ಮಣರನ್ನು ಶ್ರಾದ್ಧದ ಹಿಂದಿನ ದಿವಸವೇ ನಿಮಂತ್ರಣಕ್ಕೆ (ಶ್ರಾದ್ಧದ ಊಟಕ್ಕೆ) ಹೇಳಬೇಕು ಆರೀತಿ ನಿಮಂತ್ರಿತರಾದ ಬ್ರಾಹ್ಮಣರನ್ನು ಜತೆ ಮಾಡಿಕೊಂಡು ಕರ್ತೃವು ಶ್ರಾದ್ಧವನ್ನು ಮಾಡಬೇಕು

೩-೪ ಶ್ರಾದ್ಧದಿವಸದಲ್ಲಿ ಪರಿಶುದ್ಧಮನಸ್ಸಿನಿಂದ ಸ್ನಾನಮಾಡಿ ಆಚಮನವನ್ನು ಮಾಡಿದ ಬಳಿಕ ಮಡೀ (ಶುಭ್ರ) ಪಂಚೆಗಳನ್ನುಟ್ಟುಕೊಂಡು ಶ್ರಾದ್ಧಾರಾಧ್ಯ

**ಸ್ತ್ರಿಯಶ್ಚ ಮುಖ್ಯಾ ವಿವಿಧಾಂಶ್ಚ**
**ಕಾಮಾರ್ಮಾದೇವೇಶ್ವರಃ ಶ್ರಾದ್ಧ ಕೃತೋ ವಿಧತ್ತೇ** ॥೨೬॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶ್ರಾದ್ಧೋತ್ಪತ್ತಿರ್ನಾಮೈಕೋನಚತ್ವಾರಿಂಶದುತ್ತರ ಶತತಮೋಽಧ್ಯಾಯಃ**

---

ಭಾಗ್ಯಗಳನ್ನು ಸಹ ಕೊಟ್ಟು ಕಾಪಾಡುವನೆಂದು ಮಾರ್ಕಂಡೇಯಮಹರ್ಷಿಗಳು ವಜ್ರ ಮಹಾರಾಜನಿಗೆ ಹೇಳಿದರು.

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದ ರೂಪವಾದ ಶ್ರಾದ್ಧೋತ್ಪತ್ತಿನಾಮಕ ಒಂದುನೂರ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವಂಚ್ಛ್ರೋತುಮಿಚ್ಛಾಮಿ ಕಥ್ಯಮಾನಮಹಂ ತ್ವಯಾ ।
ವಿಧಿಂ ಶ್ರಾದ್ಧಸ್ಯ ಧರ್ಮಜ್ಞ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ವಕ್ಷ್ಯಮಾಣಗುಣಾನ್ವಿಪ್ರಾನ್ಪೂರ್ವೇದ್ಯುರುಪಮಂತ್ರಯೇತ್ ।
ಕರ್ತಾ ಸಮೇತೈಸ್ತೈರ್ಭಾವ್ಯಂ ಸಂಯತೈಶ್ಚ ನಿಮಂತ್ರಿತೈಃ ॥ ೨ ॥

ಶ್ರಾದ್ಧಾಹೇಪ್ರಯತಃ ಸ್ನಾತಃ ಸ್ವಾಚಾಂತಃ ಸುಸಮಾಹಿತಃ ।
ಶುಕ್ಲವಾಸಾಃ ಸಮಭ್ಯರ್ಚ್ಯ ನೃವರಾಹಂ ಜನಾರ್ದನಂ ॥ ೩ ॥

### ಒಂದು ನೂರ ನಲವತ್ತನೆಯ ಅಧ್ಯಾಯವು.

೧ ವಜ್ರಮಹಾರಾಜನು ಹೇಳುತ್ತಾನೆ --ಸ್ವಾಮಿ, ಮಾರ್ಕಂಡೇಯ ಮಹರ್ಷಿಗಳೇ! ನಿಮ್ಮ ಬಾಯಿಯಿಂದ ಶ್ರಾದ್ಧವಿಧಿಯನ್ನು ಕೇಳಬೇಕೆಂದು ಅಪೇಕ್ಷೆಯುಂಟಾಗಿದೆ ಅದನ್ನು ನನಗೋಸ್ಕರವಾಗಿ ದಯವಿಟ್ಟು ತಿಳಿಸಬೇಕು

೨ ಮಾರ್ಕಂಡೇಯರು ಹೇಳುತ್ತಾರೆ —ನಾನು ಮುಂದೆ ಹೇಳುವ ಗುಣಗಳನ್ನು ಹೊಂದಿರುವ ಬ್ರಾಹ್ಮಣರನ್ನು ಶ್ರಾದ್ಧದ ಹಿಂದಿನ ದಿವಸವೇ ನಿಮಂತ್ರಣಕ್ಕೆ (ಶ್ರಾದ್ಧದ ಊಟಕ್ಕೆ) ಹೇಳಬೇಕು ಆರೀತಿ ನಿಮಂತ್ರಿತರಾದ ಬ್ರಾಹ್ಮಣರನ್ನು ಬರ ಮಾಡಿಕೊಂಡು ಕರ್ತೃವು ಶ್ರಾದ್ಧವನ್ನು ಮಾಡಬೇಕು

೩-೪ ಶ್ರಾದ್ಧದಿವಸದಲ್ಲಿ ಪರಿಶುದ್ಧಮನಸ್ಸಿನಿಂದ ಸ್ನಾನಮಾಡಿ ಆಚಮನವನ್ನು ಮಾಡಿದ ಬಳಿಕ ಮಡೀ (ಶುಭ್ರ) ಪಂಚೆಗಳನ್ನುಟ್ಟುಕೊಂಡು ಶ್ರಾದ್ಧಾರಾಧ್ಯ

**ಆಮಶ್ರಾದ್ಧೇಷು ಕಾಮ್ಯೇಷು ಹುತ್ವಾ ಪ್ರಥಮಪಂಚಕಂ ।**
**ಮಧ್ಯಮಂ ಪಂಚಕಂ ಹುತ್ವಾ ಪಶುಶ್ರಾದ್ಧೇಷ್ವಸಂಶಯಂ ॥ ೪ ॥**

**ಅಮಾವಾಸ್ಯಾಸು ಸರ್ವಾಸು ಹುತ್ವಾ ಚೋತ್ತಮಪಂಚಕಂ ।**
**ಹುತ್ವಾ ಚ ಪಂಚಕಾನೇತಾನಷ್ಟಕಾತ್ರಿತಯಂ ಕ್ರಮಾತ್ ॥ ೫ ॥**

**ಅನ್ವಷ್ಟಕಾಸು ಚ ತಥಾ ಭೋಜಯೇತ್ಪ್ರಯತೋ ದ್ವಿಜಾನ್ ।**
**ದ್ವೌ ದೈವೇ ಪ್ರಾಕ್ ತ್ರಯಃ ಪಿತ್ರ್ಯೇ ಚೈಕೈಕಮುಭಯತ್ರ ವಾ ॥ ೬ ॥**

**ಉದಙ್ಮುಖಾಂಶ್ಚ ಪಿತ್ರರ್ಥೇ ಸ್ಥಾನಾನ್ವಿಂದ್ಯಾದ್ಗುಣಕ್ರಮಾತ್ ।**
**ಬಲಿವರ್ಗಾವಕೀರ್ಣೇಷು ಚಾಸನೇಷೂಪವೇಶಯೇತ್ ॥ ೭ ॥**

**ಪಿತೄನಾವಾಹಯಾಮೀತಿ ಸ್ವಯಮುಕ್ತ್ವಾ ಸಮಾಹಿತಃ ।**
**ಆವಾಹಯಸ್ವೇತಿ ತತೋ ದ್ವಿಜೈರುಕ್ತೋಽಥ ತನ್ಮನಾಃ ॥ ೮ ॥**

---

ದೇವತೆಯಾದ ನೃವರಾಹಮೂರ್ತಿಯನ್ನು ಭಕ್ತಿಯಿಂದ ಮೊದಲು ಪೂಜಿಸಬೇಕು ಶ್ರಾದ್ಧಗಳಲ್ಲಿ ಆಮಶ್ರಾದ್ಧ (ಅಕ್ಕಿ-ಹೆಸರು ಮುಂತಾದ ಹಸೀ ಪದಾರ್ಥಗಳನ್ನು ಬ್ರಾಹ್ಮಣರಿಗೆ ಕೊಟ್ಟು ಮಾಡುವ ಶ್ರಾದ್ಧ), ಕಾಮ್ಯಶ್ರಾದ್ಧ (ಮಂಗಳ ಕರ್ಮಗಳಲ್ಲಿ ಮೊದಲು ಮಾಡುವ ನಾಂದೀಶ್ರಾದ್ಧ), ಅಷ್ಟಕಾಶ್ರಾದ್ಧ (ಕ್ಷೇತ್ರಗಳಲ್ಲಿ ಮಾಡುವ ತೀರ್ಥ ಶ್ರಾದ್ಧ) ಗಳೆಂದು ಮೂರು ಬಗೆಯುಂಟು ಈ ಮೂರು ವಿಧವಾದ ಶ್ರಾದ್ಧಗಳಲ್ಲಿಯೂ ಐದೈದು ಮಂದಿ ಬ್ರಾಹ್ಮಣರುಗಳನ್ನು (ತೃಪ್ತಿಪಡಿಸಿ) ಭೋಜನಮಾಡಿಸಬೇಕು ವಿಶ್ವೇದೇವರ ಸ್ಥಾನಕ್ಕೆ ಇಬ್ಬರು, ಪಿತೃಸ್ಥಾನಕ್ಕೆ ಮೂವರು (ಮೂವರು ಪಿತೃಗಳೂ) ಬ್ರಾಹ್ಮಣರೂ ಸೇರಿ, ಒಟ್ಟು ಐದು ಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು ವಿಶ್ವೇದೇವರನ್ನು ಪೂರ್ವಾಭಿಮುಖವಾಗಿಯೂ (ಪೂರ್ವದಿಕ್ಕಿಗೂ), ಪಿತೃಗಳನ್ನು ಉತ್ತರಾಭಿಮುಖವಾಗಿಯೂ ಕೂರಿಸಬೇಕು ಪಿತೃಸ್ಥಾನಾವಾಹಿತ ಬ್ರಾಹ್ಮಣರನ್ನು ಎಳ್ಳು ದರ್ಭೆಗಳನ್ನೆರಚಿದ ಆಸನಗಳ (ಮಣೆ) ಮೇಲೆ ಕುಳ್ಳಿರಿಸಬೇಕು

೮-೯ ಎಲೈ ಬ್ರಾಹ್ಮಣರುಗಳಿರಾ! ನಿಮ್ಮಲ್ಲಿ ನಮ್ಮ ಪಿತೃಗಳನ್ನು ಆವಾಹನೆ ಮಾಡುತ್ತೇನೆಂದು ಕರ್ತೃವು ಸಮಾಧಾನದಿಂದ ಹೇಳಿದ ಬಳಿಕ, ಆ ನಿಮಂತ್ರಿತ ಬ್ರಾಹ್ಮಣರು ಹಾಗೇ ಮಾಡು, ನಮ್ಮಲ್ಲಿ ನಿಮ್ಮ ಪಿತೃಗಳನ್ನು ಆವಾಹನೆಮಾಡಬಹು

**ಅಪಯಾಂತ್ವಸುರಾ ದ್ವಾಭ್ಯಾಂ ಯಾತುಧಾನವಿಸರ್ಜನಂ।**
**ತಿಲೈಃ ಕುರ್ಯಾತ್ಪ್ರಯತ್ನೇನ ತ್ವಥವಾ ಗೌರಸರ್ಷಪೈಃ ॥ ೯ ॥**

ದೆಂದು ಉತ್ತರ ಹೇಳಿದ ಬಳಿಕ, ಒಂದೇ ಮನಸ್ಸಿನಿಂದ ಶ್ರಾದ್ಧಕರ್ಮಕ್ಕೆ ಆರಂಭಿಸ ಬೇಕು. (ಕರ್ತೃವು ತಾನು ಮಾಡುವ ಶ್ರಾದ್ಧಕರ್ಮಗಳನ್ನು ಬ್ರಾಹ್ಮಣರಿಂದ ಪ್ರತಿಕ್ಷಣವೂ ಪ್ರತಿ ವಚನವನ್ನು ಪಡದೇ ಮಾಡಬೇಕೆಂದು ವಿಧಿಯು ವಿಧಿಸಿದೆ )

ಟಿಪ್ಪಣಿ —ಶ್ರಾದ್ಧಕರ್ಮವು ಪಿತೃಗಳಿಗಾಗಿಯೂ, ಯಜ್ಞಕರ್ಮಗಳು ದೇವತ ಗಳ ತೃಪ್ತಿಗಾಗಿಯೂ. ಋಷಿಗಳಿಂದ ವಿಧಿಸಲ್ಪಟ್ಟ ವಿಹಿತಕರ್ಮಗಳು ಈ ಎರಡು ಕರ್ಮಗಳಲ್ಲಿಯೂ ಮಂತ್ರಗಳನ್ನು ಹೇಳಿ ದೇವಪಿತೃಗಳನ್ನು ಕರೆದು ಅಗ್ನಿಯಲ್ಲಿ ಅವರುಗಳಿಗಾಗಿ ಹೋಮದ್ರವ್ಯ (ಹವಿಸ್ಸು) ಗಳನ್ನು ಸಮರ್ಪಿಸಿದರೆ, ಆ ಆಹುತಿಗಳನ್ನು ಅಗ್ನಿಯು ಆಯಾ ದೇವತೆಗಳಿಗೂ ಪಿತೃಗಳಿಗೂ ಸಮರ್ಪಿಸುವನು. ಹೀಗೆ ಕೊಡುವ ಆಹುತಿಗಳನ್ನು ದೇವತಗಳ ಮತ್ತು ಪಿತೃಗಳ ಕೈತಪ್ಪಿಸಿ ತಾವು ಕಿತ್ತುಕೊಂಡು ತಿನ್ನು ವುದಕ್ಕಾಗಿ ರಾಕ್ಷಸರು ಹೊಂಚು ಹಾಕುತ್ತಲೇ ಇರುತ್ತಾರೆ ಆದ್ದರಿಂದ ಕರ್ಮಾರಂಭ ಮಾಡುವ ಕಾಲದಲ್ಲಿ ರಾಕ್ಷಸರನ್ನೂ, ಪಿಶಾಚಿಗಳನ್ನೂ, ಇತರ ವಿಘ್ನಕಾರಿಭೂತ ಗಳನ್ನೂ ಆ ಸ್ಥಳದಲ್ಲಿ ನಿಲ್ಲದಂತ ಓಡಿಸಬೇಕಾದುದು ಮುಖ್ಯ ಕರ್ತವ್ಯವಾದ್ದರಿಂದ, ದೇವತಾಕಾರ್ಯಗಳಲ್ಲಿ ಮೊದಲು ಘಂಟೆಯನ್ನು ಬಾರಿಸಬೇಕೆಂದೂ, ಪಿತೃಕಾರ್ಯ ಗಳಲ್ಲಿ ಎಳ್ಳನ್ನು ಮಂತ್ರ ಹೇಳಿ ಎರಚಬೇಕೆಂದೂ ವಿಧಿಯುಂಟು. ಆದ್ದರಿಂದಲೇ ದೇವತಾರ್ಚನೆಗೆ ಮುಂಚೆ,

ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ ॥

ಪೂಜೆಯಾಗುವಾಗ ದೇವತಗಳೆಲ್ಲರೂ ಬನ್ನಿರಿ ! ರಾಕ್ಷಸರೆಲ್ಲರು ಓಡಿರಿ ! ಎಂಬ ಗುರ್ತಿನ ಸೂಚನೆಗಾಗಿ ಘಂಟೆ ಬಾರಿಸಬೇಕು ಇದು ದೇವತಾರ್ಚನೆಯ ಮಾತಾ ಯಿತು ಇದೇ ಮೇರೆ ಪಿತೃಗಳನ್ನು ಆವಾಹಿಸಿದ ಬಳಿಕ ರಾಕ್ಷಸರನ್ನು ಓಡಿಸುವುದ ಕ್ಕಾಗಿ ಎಳ್ಳು, ದರ್ಭೆ, ನೆನೆಸಿದ ಅಕ್ಕಿಗಳನ್ನು ಬೆರೆಸಿ ಬೇರೆಬೇರೆ ಮೂಲೆಯಲ್ಲಿ ನೆಲದ ಮೇಲೆ ಹಾಕಬೇಕು ಇದನ್ನು ಶ್ರಾದ್ಧದ ದಿವಸ ಮಾಡುವುದನ್ನು ಎಲ್ಲರೂ ನೋಡಿಯೇ ಇರುತ್ತಾರೆ. ಇದನ್ನು ನೋಡಿ ರಾಕ್ಷಸರು ಓಡಿಹೋಗುತ್ತಾರೆ

ಅಪಯಾಂತ್ವಸುರಾಃ ಎಂಬೆರಡು ಮಂತ್ರಗಳಿಂದ ಎಳ್ಳನ್ನಾಗಲೀ ಬಿಳೀ ಸಾಸುವೇ ಕಾಳುಗಳನ್ನಾಗಲೀ ದಕ್ಷಿಣಕ್ಕೆ ಎರಚಿ ರಾಕ್ಷಸರನ್ನು ಓಡಿಸಬೇಕು

ಏತೇ ಪಿತರ ಇತ್ಯೇವ ಸರ್ವಾಂಸ್ತಾನಗ್ನ ಆವಹ ।
ಅಗ್ನೇಯಯಂತು ತಥೋದೀರ್ಯ ಏತದ್ವಃ ಪಿತರಸ್ತಥಾ ॥ ೧೦ ॥

ಕುಶಾಂಸ್ತಿಲಾವಮಿಶ್ರೇಣ ತಥಾ ಗಂಧಯುತೇನ ಚ ।
ಯಾಸ್ತಿಷ್ಠಂತಿ ಧಾರಯಂತಿ ಅಮೃತಾವಾಗಿತಿತ್ಯೃಚಾ ॥ ೧೧ ॥

ಯನ್ಮೇ ಮಾತೇತಿ ಚ ತಥಾ ಪಾದ್ಯಮರ್ಘ್ಯಂಚ ಕಾರಯೇತ್ ।
ನಿವೇದ್ಯ ವಿಪ್ರೇಷು ತಥಾ ಪಾದ್ಯಾರ್ಘಂ ಪ್ರಯತಃ ಕ್ರಮಾತ್ ॥ ೧೨ ॥

ಗಂಧೈರ್ವಸ್ತ್ರೈಶ್ಚ ಪುಷ್ಪೈಶ್ಚ ಧೂಪೈಶ್ಚಾಪ್ಯಥ ಭೂಷಣೈಃ ।
ಅರ್ಚಯೇದ್ಬ್ರಾಹ್ಮಣಾಭಕ್ತ್ಯಾ ಶ್ರದ್ಧಧಾನಃ ಸಮಾಹಿತಃ ॥ ೧೩ ॥

ಆದೌ ಸಮರ್ಚಯೇದ್ವಿಪ್ರಾನ್ವೈಶ್ವದೇವನಿವೇಶಿತಾನ್ ।
ನಿವೇಶಿತಾಂಶ್ಚ ಪಿತ್ರರ್ಥೇ ತತಃ ಪಶ್ಚಾತ್ಸಮರ್ಚಯೇತ್ ॥ ೧೪ ॥

ವೈಶ್ವದೇವನಿವಿಷ್ಟಾನಾಂ ಚರಮಂ ಹಸ್ತಧಾವನಂ ।
ವಿಸರ್ಜನಂ ಚ ನಿರ್ದಿಷ್ಟಂ ತೇಷು ರಕ್ಷಾ ಯತಃ ಸ್ಥಿತಾ ॥ ೧೫ ॥

---

೧೦-೧೩ ಏತೇ ಪಿತರಃ-ಸರ್ವಾಂಸ್ತಾನಗ್ನ ಆವಹ-ಅಗ್ನೇಯಯಂತು ಏತದ್ವಃ ಪಿತರಃ— ಈ ನಾಲ್ಕು ಮಂತ್ರಗಳನ್ನು ಹೇಳಿ ಎಳ್ಳಿನಿಂದಲೂ ಗಂಧದಿಂದಲೂ ಬೆರೆಸಿದ ದರ್ಭೆಗಳನ್ನು ಬ್ರಾಹ್ಮಣರ ಕೈಗೆ ಕೊಡಬೇಕು ಆ ಬಳಿಕ ಅಮೃತಾವಾಕ್-ಯನ್ಮೇ ಮಾತಾ ಎಂಬ ಮಂತ್ರಗಳನ್ನು ಹೇಳಿ ಪಾದ್ಯವನ್ನೂ ಅರ್ಘ್ಯವನ್ನೂ ಕೊಡಬೇಕು. ಪಾದ್ಯಾರ್ಘ್ಯಗಳಾದ ಮೇಲೆ ಬ್ರಾಹ್ಮಣರಿಗೆ ಗಂಧ, ವಸ್ತ್ರ, ಪುಷ್ಪ, ಧೂಪಗಳನ್ನು ಸಮರ್ಪಿಸಿ ಅವರನ್ನು ಯಥಾಶಕ್ತಿಯಾಗಿ ಪೂಜಿಸಿ ಅವರ ಮನಸ್ಸಂತೋಷವನ್ನುಂಟು ಮಾಡಬೇಕು

೧೪-೧೫ ಮೊದಲು ವಿಶ್ವೇದೇವಸ್ಥಾನದಲ್ಲಿ ಕುಳಿತಿರುವ ಬ್ರಾಹ್ಮಣರನ್ನು ಪೂಜೆಮಾಡಿಯಾದ ಬಳಿಕ, ಪಿತೃಸ್ಥಾನದಲ್ಲಿ ಆವಾಹಿತರಾದ ಬ್ರಾಹ್ಮಣರನ್ನು ಪೂಜೆ ಮಾಡಬೇಕು. ವಿಶ್ವೇದೇವಸ್ಥಾನದಲ್ಲಿರುವ ಬ್ರಾಹ್ಮಣರನ್ನು ಪೂಜಿಸಿ ಕೊನೆಯು ಹಸ್ತೋದಕವನ್ನು ಕೊಟ್ಟ ಒಳಿಕ ಆ ಜಾಗವನ್ನು ಬಿಟ್ಟು, ಪಿತೃಗಳನ್ನು ಗಂಧಪುಷ್ಪಾದಿ ಗಳಿಂದ ಅರ್ಚಿಸಬೇಕು ಅರ್ಚನೆ ಮುಗಿದ ಬಳಿಕ ಆದಿತ್ಯನನ್ನೂ, ವಸುಗಳನ್ನೂ, ರುದ್ರರನ್ನೂ ಆ ಬ್ರಾಹ್ಮಣರಲ್ಲಿ ಚೆನ್ನಾಗಿ ಆವಾಹಿಸಿ ಧ್ಯಾನಿಸಬೇಕು. ಬಳಿಕ ವಸು

ಸರ್ವಮನ್ಯತ್ಪ್ರದಾತವ್ಯಮಾದೌ ತೇಷಾಂ ನರಾಧಿಪ ।
ಸಂಪೂಜ್ಯ ಗಂಧಪುಷ್ಪೈಶ್ಚ ಬ್ರಾಹ್ಮಣಾನ್ಪ್ರಯತಸ್ತದಾ ॥ ೧೬ ॥

ಆದಿತ್ಯಾ ವಸವೋ ರುದ್ರಾ ದ್ವಿಜಾನ್ವೀಕ್ಷ್ಯ ತತೋ ಜಪೇತ್ ।
ಅಗ್ನೌ ಚ ಕರವಾಣೀತಿ ತೈರುಕ್ತಂ ಚ ಕುರುಷ್ವಿತಿ ॥ ೧೭ ॥

ಪರಿಸ್ತೀರ್ಯ ತತೋ ವಹ್ನಿಮಗ್ನಿಮುದ್ಧೃತ್ಯ ಸರ್ವತಃ ।
ಆಹಿತಾಗ್ನಿಸ್ತು ಜುಹುಯಾದ್ದಕ್ಷಿಣಾಗ್ನೌ ಸಮಾಹಿತಃ ॥ ೧೮ ॥

ಅನಾಹಿತಾಗ್ನಿಶ್ಚೌಪಸದೇ ಅಗ್ನ್ಯಭಾವೇ ತಥಾಪ್ಸುವಾ ।
ಸೋಮಾಯಾದೌ ಪಿತೃಮತೇ ಕವ್ಯವಾಹಾಯ ಚಾಗ್ನಯೇ ॥ ೧೯ ॥

ಯಮಾಯ ಚೈವಾಂಗಿರಸೇ ಹುತ್ವಾ ಪ್ರಯತಮಾನಸಃ ।
ಯೇ ಮಾಮಕಾಶ್ಚ ಪಿತರ ಏತದ್ವಃ ಪಿತರಸ್ತಥಾ ॥ ೨೦ ॥

ಅಯಂ ಯಜ್ಞಸ್ತಥೈವೇತಿ ಏಷಾ ವೋ ಗೀತಿರಪ್ಯಥ ।
ಪ್ರಯತಸ್ತನ್ಮನಾಃ ಕೃತ್ವಾ ರಾಜಂಶ್ಚೈವಾಭಿಮಂತ್ರಣಂ ॥ ೨೧ ॥

---

...ದ್ರಾದಿತ್ಯಸ್ವರೂಪರಾದ ದ್ವಿಜರನ್ನು ಕುರಿತು, 'ಅಗ್ನೌ ಹೋಮಂಕರವಾಣಿ''—ಅಗ್ನಿಯಲ್ಲಿ ಹೋಮವನ್ನು ಮಾಡುತ್ತೇನೆಂದು ಕೇಳಿ, ಅವರ ಬಾಯಿಂದ "ಕುರುಷ್ವ"—ಮಾಡು ಎಂದು ಪ್ರತಿವಚನವನ್ನು ಪಡೆದು ಹೋಮಕ್ಕಾರಂಭಿಸಬೇಕು ಬಳಿಕ ಅಗ್ನಿಯ ಬಳಿಗೆ ಒಂದು ಪರಿಸ್ತರಣವನ್ನು ಹಾಕಿ, ಚೆನ್ನಾಗಿ ಜ್ವಲನಗೊಳಿಸಿ ಹೋಮ ಮಾಡಬೇಕು ಆಹಿತಾಗ್ನಿಯಾದರೆ ದಕ್ಷಿಣಾಗ್ನಿಯಲ್ಲಿ ಹೋಮಮಾಡಬೇಕು ಅನಾಹಿತಾಗ್ನಿಯಾದರೆ (ಅಗ್ನಿಯನ್ನು ದಿನವೂ ಪೂಜಿಸದಿದ್ದವನು) ಗೃಹ್ಯಾಗ್ನಿ (ಮನೆಯ ಒಲೆಯಲ್ಲಿರುವ ಕೆಂಡ) ಯಲ್ಲಿಯೇ ಹೋಮಮಾಡಬೇಕು. ಅಗ್ನಿಯೇ ಇಲ್ಲದ ಹೋದರೆ ನೀರಿನಲ್ಲಿ ಹೋಮಮಾಡತಕ್ಕದ್ದು

೧೯-೨೪ ಮೊದಲನೇ ಆಹುತಿಯನ್ನು "ಸೋಮಾಯ ಪಿತೃಮತೇ ಸ್ವಧಾ ನಮಃ'' ಎಂಬ ಮಂತ್ರದಿಂದಲೂ, ಎರಡನೆಯ ಆಹುತಿಯನ್ನು "ಅಗ್ನಯೇ ಕವ್ಯವಾಹನಾಯ ಸ್ವಧಾ ನಮಃ'' ಎಂಬ ಮಂತ್ರದಿಂದಲೂ, ಮತ್ತೊಂದಾಹುತಿಯನ್ನು 'ಯಮಾಯಾಂಗಿರಸೇ ಸ್ವಧಾನಮಃ' ಎಂಬ ಮಂತ್ರದಿಂದಲೂ ಹೋಮಮಾಡಬೇಕು ಹೋಮಾನಂತರದಲ್ಲಿ "ಅಯಂ-ಯಜ್ಞಸ್ತವೈವೇತಿ'' ಎಂಬ ಪೂರ್ಣ

**ಆಮಾ ಸುಪಕ್ವೇತಿ ತತೋ ಘೃತಂ ವಾಪ್ಯಥವಾ ಪಯಃ ।**
**ನಿಷಿಚ್ಯ ರೌಪ್ಯಪಾತ್ರೇಷು ರಜತಾಕ್ತೇಷು ಭಾವತಃ ॥ ೨೨ ॥**

**ಯಥೋಪಪನ್ನೇಷ್ವಥವಾ ತೂಷ್ಣೀಮನ್ನಂ ನಿವೇದಯೇತ್ ।**
**ನಮೋ ವಿಶ್ವೇಭ್ಯ ಇತಿ ಚ ಸತಿಲೇನೋದಕೇನ ಚ ॥ ೨೩ ॥**

**ಪ್ರಾಙ್ಮುಖೇಷು ಚ ಯದ್ದತ್ತಂ ತದನ್ನಮುಪಮಂತ್ರಯೇತ್ ।**
**ಉದಙ್ಮುಖೇಷು ಯದ್ದತ್ತಂ ನಾಮಗೋತ್ರಪ್ರಕೀರ್ತನೈಃ ॥ ೨೪ ॥**

**ಮಂತ್ರಯೇತ್ಪ್ರಯತಃ ಪ್ರಾಜ್ಞಃ ಸ್ವಧಾಂತೈಃಸುಸಮಾಹಿತಃ ।**
**ಯನ್ನೇ ಪ್ರಕಾಮಾಹೋರಾತ್ರೈರ್ಯದ್ವಾಕ್ರನ್ಯಾತ್ತಥೈವ ಚ ॥ ೨೫ ॥**

**ಇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಚಾಪ್ಯಥ ।**
**ಸಪ್ತಾರ್ಚಂ ಪರಮಂ ಮಂತ್ರಂ ಶ್ರಾವಯೇದಗ್ರತೋ ದ್ವಿಜಾನ್ ॥ ೨೬ ॥**

---

ಶ್ಲೋಕದಿಂದ ಪಿತೃಗಳನ್ನು ಪ್ರಾರ್ಥಿಸಿ, "ಆಮಾಸು ಪಕ್ವಮೈರಯ" ಎಂಬ ಮಂತ್ರದಿಂದ ತುಪ್ಪವನ್ನಾಗಲೀ, ಹಾಲನ್ನಾಗಲೀ, ಬೆಳ್ಳಿಯ ಪಾತ್ರೆಯಲ್ಲಿ ಬಡಿಸಿ, ಅದನ್ನೂ ಇತರ ಅನ್ನಾದಿದ್ರವ್ಯಗಳನ್ನೂ ಕೈಯಿಂದ ಭೋಕ್ತೃವಿನ ಬಲಗೈಯನ್ನು ಹಿಡಿದುಕೊಂಡು ಆತನ ಬಲಗೈ ಹೆಬ್ಬೆಟ್ಟಿನ ತುದಿಯಿಂದ ಭೋಜ್ಯ ಪದಾರ್ಥಗಳನ್ನೆಲ್ಲಾ ಒಂದೊಂದನ್ನಾಗಿ ಮುಟ್ಟಿಸಿ, ಈ ಕ್ರಮದಿಂದ ಬ್ರಾಹ್ಮಣರಿಗೆ ಮೊದಲು ನಿವೇದನ ಮಾಡಬೇಕು ವಿಶ್ವೇದೇವರಿಗೆ ನಿವೇದನಮಾಡುವಾಗ "ವಿಶ್ವೇಭ್ಯೋ ದೇವೇಭ್ಯೋ ನಮಃ" ಎಂದು ಹೇಳಿ ಅವರ ಕೈಗೆ ಆ ಅನ್ನವನ್ನು ಸಮರ್ಪಿಸಿ ಯವೋದಕವನ್ನು ಪೂರ್ವಾಭಿಮುಖವಾಗಿ ಕೊಡಬೇಕು ಪಿತೃಗಳಿಗೆ ಉತ್ತರಾಭಿಮುಖವಾಗಿ ಅನ್ನಾಭಿಮರ್ಶನವನ್ನು ಮಾಡಿಸಿದ ಬಳಿಕ ತಿಲೋದಕವನ್ನು ಕೈಗೆ ಕೊಡಬೇಕು

೨೫-೩೧ ಪಿತೃಗಳಿಗೆ ದತ್ತಮಾಡುವಾಗಲೆಲ್ಲಾ ಸ್ವಧಾ ಎಂದು ಉಚ್ಚರಿಸಬೇಕು

ಟಿಪ್ಪಣಿ —ಯಜ್ಞಕಾಲದ ಹವಿರ್ಭಾಗವನ್ನು ದೇವತೆಗಳಿಗೆ ಕೊಡುವಾಗಲೆಲ್ಲಾ ಅಗ್ನಯೇ ಸ್ವಾಹಾ, ಇಂದ್ರಾಯ ಸ್ವಾಹಾ ಎಂಬುದಾಗಿ ಸ್ವಾಹಾಂತ್ಯವಾಗಿ ಉಚ್ಚರಿಸಿ ಹವಿರ್ದಾನವನ್ನು ಮಾಡಬೇಕು. ಪಿತೃಗಳಿಗೆ ಕೊಡುವ ಹವಿಸ್ಸಿಗೆ ಕವ್ಯ ಎಂದು ಹೆಸರು. ಜನರು ರೂಢಿಯಾಗಿ ಹೇಳುವ ಹವ್ಯಕವ್ಯಗಳೆನ್ನುವ ಮಾತಿಗೆ

**ದಕ್ಷಿಣಾಗ್ರಾಂಸ್ತತೋ ದರ್ಭಾಂಲ್ಲೂನಾಂಶ್ಚೈವೋಪಮೂಲತಃ ।**
**ಮಂತ್ರಿತಾನ್ಬ್ರಹ್ಮಮಂತ್ರೇಣ ವಿಕಿರೇತ್ಸು ಸಮಾಹಿತಃ ॥ ೨೭ ॥**

**ಪಿಂಡನಿರ್ವಪಣಂ ಕುರ್ಯಾತ್ತೇಷು ದರ್ಭೇಷ್ವ ಸಂಶಯಂ ।**
**ಮಧ್ವಾಜ್ಯತಿಲಮಿಶ್ರೇಣ ಚಾನ್ನೇನಾಗ್ರೇಣ ಯಾದವ ॥ ೨೮ ॥**

**ಪಿತೃಪಿಂಡೇ ಭವೇನ್ಮಂತ್ರಃ ಪೃಥಿವೀ ದರ್ವಿರಕ್ಷಿತಾ ।**
**ಪೈತಾಮಹೇ ಭವೇನ್ಮಂತ್ರಸ್ತ್ವಂತರಿಕ್ಷೇತಿ ಪಾರ್ಥಿವ ॥ ೨೯ ॥**

**ಪ್ರಪಿತಾಮಹಕೇ ಮಂತ್ರಂ ದ್ಯೌರ್ದರ್ವಿರಿತಿ ಕೀರ್ತಯೇತ್ ।**
**ಯೆ ತತ್ರ ಪಿತರಃ ಪ್ರೇತಾ ಮಂತ್ರೇಣಾನೇನ ಧರ್ಮವಿತ್ ॥ ೩೦ ॥**

**ಸೂತ್ರಂ ನಿವೇದಯೇದ್ಭಕ್ತ್ಯಾ ಕ್ಷೀರಾನ್ನಂ ಚ ನಿವೇದಯೇತ್ ।**
**ಊರ್ಜಂ ವಹಂತೀತಿ ತತಃ ಸ್ನಾನಂ ದದ್ಯಾದಧೋದಕಂ ॥ ೩೧ ॥**

---

ದೇವ (ಹವ್ಯ) ಕಾರ್ಯ, ಪಿತೃ (ಕವ್ಯ) ಕಾರ್ಯಗಳಿಂದ ಮುಖ್ಯಾರ್ಥ ಆದ್ದರಿಂದ ಅಗ್ನಿಯನ್ನು ದೇವಕಾರ್ಯಗಳಲ್ಲಿ ಹವ್ಯವಾಹನನೆಂದೂ ಪಿತೃಕಾರ್ಯಗಳಲ್ಲಿ ಕವ್ಯವಾಹನನೆಂದೂ ಹೇಳುವರು

ಬ್ರಾಹ್ಮಣರಿಗೆ ಆಪೋಶನ ಹಾಕಿದ ಬಳಿಕ "ಈಶಾನ ವಿಷ್ಣು ಕಮಲಾಸನ ಕಾರ್ತಿಕೇಯ" ಎಂಬ ಮಂತ್ರದಿಂದ ದತ್ತಮಂತ್ರವನ್ನು ಹೇಳಿ ಬ್ರಾಹ್ಮಣರನ್ನು ಭೋಜನಕ್ಕೆ ಕೂರಿಸಬೇಕು ಬ್ರಾಹ್ಮಣ ಭೋಜನಮಾಡುವಾಗ ಅವರ ಮುಂದೆ ಕುಳಿತು ಇತಿಹಾಸ ಪುರಾಣ ಧರ್ಮಶಾಸ್ತ್ರ ಸಪ್ತಋಙ್ಮಂತ್ರಗಳನ್ನೂ ಹೇಳಬೇಕು ಬ್ರಾಹ್ಮಣ ಭೋಜನವಾದ ಮೇಲೆ ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹಾಕಿ, ಅದರ ಮೇಲೆ ತಿಲೋದಕಗಳನ್ನು ಬಿಟ್ಟು, ಅದರ ಮೇಲೆ ಪಿತೃ-ಪಿತಾಮಹ-ಪ್ರಪಿತಾಮಹರಿಗೆ ಮೂರು ಪಿಂಡಗಳನ್ನು ಇಡಬೇಕು ಈ ಮೂರು ಪಿಂಡಗಳಿಗೂ ಕ್ರಮವಾಗಿ, "ಪೃಥಿವೀ ದರ್ವಿರಕ್ಷಿತಾ, ಅಂತರಿಕ್ಷೇತಿ, ದ್ಯೌರ್ದರ್ವೀತಿ" ಮಂತ್ರಗಳನ್ನು ಉಚ್ಚರಿಸಿ ಇಡಬೇಕು ಆ ಬಳಿಕ "ಯೇ ತತ್ರ ಪಿತರಃ ಪ್ರೇತಾ" ಎಂಬ ಮಂತ್ರವನ್ನು ಹೇಳಬೇಕು ಬಳಿಕ ಆ ಪಾರ್ವಣಪಿಂಡಗಳಿಗೆ ಕ್ಷೀರಾನ್ನವನ್ನು ನಿವೇದಿಸಬೇಕು ಆಬಳಿಕ ಅಪಸವ್ಯದಿಂದ (ಜನಿವಾರವನ್ನು ಎಡಕ್ಕೆ ಹಾಕಿಕೊಂಡು) "ಊರ್ಜಂ ವಹಂತೀ ವ್ಮೃತಂ ಘೃತಂ ಪಯಃ" ಎಂಬ ಮಂತ್ರವನ್ನು ಹೇಳಿಕೊಂಡು ವಿಕಿರಾನ್ನ (ಮೊಸರನ್ನ) ವನ್ನು ಆ ಪಿಂಡಗಳ ಸುತ್ತಲೂ ಹಾಕಬೇಕು ಆಮೇಲೆ ಪಾರ್ವಣಪಿಂಡ ಪೂಜೆ ಮಾಡಬೇಕು.

**ಅಪಸವ್ಯೇನ ಪಿಂಡೇಷು ಶ್ರದ್ಧಯಾ ಪರಯಾ ಯುತಃ ।**
**ಗಂಧೈಃ ಪುಷ್ಪೈಸ್ತಥಾ ಧೂಪೈರ್ದೀಪೈರ್ಭಕ್ಷ್ಯೈಶ್ಚ ಭೋಜನೈಃ ॥ ೩೨ ॥**

**ಪಾನೈಃ ಸಮರ್ಚಯೇತ್ಪಿಂಡಾನ್ಸಾದರಃ ಪ್ರಯತಃ ಸದಾ ।**
**ಯತ್ಕಿಂಚಿತ್ಪಚ್ಯತೇ ಗೇಹೇ ಭಕ್ಷ್ಯಂ ವಾ ಭೋಜ್ಯಮೇವ ವಾ ॥ ೩೩ ॥**

**ಅನಿವೇದ್ಯ ನ ಭೋಕ್ತವ್ಯಂ ತಸ್ಮಿನ್ನಾಯತನೇ ಸದಾ ।**
**ಭುಕ್ತವತ್ಸ್ವಥ ವಿಪ್ರೇಷು ವಿಧಿಂ ಮೇ ಗದತಃ ಶೃಣು ॥ ೩೪ ॥**

**ಅನ್ನಂ ಸತೃಣಮಭ್ಯುಕ್ಷ್ಯ ಮಾಮೇಕ್ಷಿಷ್ಯೇತಿ ಯತ್ನತಃ ।**
**ಉದಙ್ಮುಖಾನಾಂ ವಿಪ್ರಾಣಾಂ ಪುರತಃ ಸೋದಕಂ ತತಃ ॥ ೩೫ ॥**

**ಅನ್ನಂ ತು ವಿಕಿರೇದ್ಭಕ್ತ್ಯಾ ಪಿತೃಭಾಗಸ್ತು ಸಃ ಸ್ಮೃತಃ ।**
**ಪ್ರಷ್ಟವ್ಯಾ ಬ್ರಾಹ್ಮಣಾ ಭಕ್ತ್ಯಾ ಭೂನಿವಿಷ್ಟೇನ ಜಾನುನಾ ॥ ೩೬ ॥**

೩೨-೩೪ ಆ ಪಿಂಡಗಳಲ್ಲಿ ಪರಮ ಭಕ್ತಿಯುಳ್ಳವ ಜನಿವಾರವನ್ನು ಎಡಗಡೆಗೆ ಹಾಕಿಕೊಂಡು ಗಂಧ-ಪುಷ್ಪ-ಧೂಪ-ದೀಪ-ಭಕ್ಷ್ಯ-ನಿವೇದನಾಗಳಿಂದಲೂ ಪಾನಾದಿಗಳಿಂದಲೂ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಆದಿನ ಮನೆಯಲ್ಲಿ ಏನೇನು ಭಕ್ಷ್ಯಭೋಜ್ಯಾದಿಗಳನ್ನೂ ಇನ್ನೇನೇನು ಪಾಕವನ್ನು ಮಾಡಿದ್ದರೂ ಸಹ ಅವುಗಳನ್ನು ಪಿಂಡರೂಪ ಪಿತೃಗಳಿಗೆ ನೈವೇದ್ಯಮಾಡದೆ ಊಟಮಾಡಬಾರದು

ಬ್ರಾಹ್ಮಣರಿಗೆ ಸಂಪೂರ್ಣವಾಗಿ ಭೋಜನವಾದೊಡನೆ ಮಾಡಬೇಕಾದ ಕರ್ಮಗಳನ್ನು ಹೇಳುತ್ತೇನೆ, ಕೇಳು. ಒಂದುದೊನ್ನೆಯಲ್ಲಿ ಕುಶೋದಕದಿಂದ ಮಿಶ್ರವಾದ ಅನ್ನವನ್ನಿಟ್ಟು ಅದನ್ನು "ಆಪೋಹಿಷ್ಠಾ ಮಯೋಭುವಃ" ಎಂಬ ಮಂತ್ರದಿಂದ ಪ್ರೋಕ್ಷಣೆಮಾಡಿ ಉತ್ತರಾಭಿಮುಖವಾಗಿ ಕುಳಿತಿರುವ ಪಿತೃಸ್ಥಾನದ ಬ್ರಾಹ್ಮಣರೆದುರಿಗೆ ಆ ದೊನ್ನೆಯ ಅನ್ನವನ್ನು ಬಲಗೈಯಲ್ಲೂ, ಎಡಗೈಯಲ್ಲಿ ಕಲಶವನ್ನೂ ಹಿಡಿದು ಎಡಮೊಣಕಾಲನ್ನೂರಿ ನಿಂತುಕೊಂಡು, ಆ ಬ್ರಾಹ್ಮಣರನ್ನು ಕುರಿತು, 'ಸ್ವಾಮಿ! ತಾವು ತೃಪ್ತಿಯಾಗುವಂತೆ ಊಟಮಾಡಿರುವಿರಾ? ನಿಮಗೆ ಇನ್ನೇನಾದರೂ ಬೇಕಾಗಿದೆಯೋ? (ತೃಪ್ತಾಃಸ್ಥ?= ತೃಪ್ತರಾದಿರಾ?)' ಎಂದು ಪ್ರಶ್ನೆಮಾಡಿ ಅವರ ಬಾಯಿಂದ ತೃಪ್ತಾಃಸ್ಮಃ—ತೃಪ್ತಿಯಾಗಿ ಊಟಮಾಡಿದ್ದೇವೆ, ಇನ್ನೇನೂ ಬೇಡವೆಂಬ ಉತ್ತರವನ್ನು ಪಡೆದು, ಆ ಬಳಿಕ "ದೇವಾಶ್ಚಪಿತರಃ—ಮಧು ಮಧುಸಂಪನ್ನಂ" ಎಂದು ಪುನಃ ಪ್ರಶ್ನೆಮಾಡಿ ಅವರ ಬಾಯಿಂದ 'ಸುಸಂಪನ್ನಂ' ಚೆನ್ನಾಗಿ ತೃಪ್ತಿ

ತೃಪ್ತಾ ಭವಂತಃ ಸಂಪನ್ನೋ ಭವತಾಂ ಕಚ್ಚಿದೇವ ತು ।
ತೃಪ್ತಾಃ ಸ್ಮೇತಿ ಚ ತೈರುಕ್ತಃ ಸಂಪನ್ನಮಿತಿ ಚಾಪ್ಯಥ ॥ ೩೭ ॥

ದದ್ಯಾದಾಚಮನಂ ಭಕ್ತ್ಯಾ ಶ್ರದ್ಧಧಾನಃ ಸಮಾಹಿತಃ ।
ಯನ್ಮೇ ರಾಮಶ್ಚ ಶಕ್ರಶ್ಚ ಇತಿ ಕೃತ್ವಾ ಪ್ರದಕ್ಷಿಣಾಂ ॥ ೩೮ ॥

ಪ್ರತ್ಯೇಕಂ ತರ್ಪಯೇದ್ವಿದ್ವಾನ್ದಕ್ಷಿಣಾಭಿಃ ಸಶಕ್ತಿತಃ ।
ಭವಂತೋಽಭಿರಮನ್ತ್ವಿತಿ ವಾಚ್ಯಾ ವಿಪ್ರಾಸ್ತ್ವನಂತರಂ ॥ ೩೯ ॥

ತೈರುಕ್ತೋಽಭಿರತಾಃ ಸ್ಮೇತಿ ದ್ವಿಜಾನಾಂ ಪುರತಃ ಸ್ಥಿತಃ ।
ದೇವಾಶ್ಚ ಪಿತರಶ್ಚೇತಿ ಜಪೇನ್ಮಂತ್ರಮತಂದ್ರಿತಃ ॥ ೪೦ ॥

ಪಿತ್ರ್ಯಾಣಾಂ ನಾಮಗೋತ್ರೇಣ ಜಲಂ ದೇಯಮನಂತರಂ ।
ಬ್ರಾಹ್ಮಣಾನಾಂ ದ್ವಿಜೈರ್ವಾಚ್ಯಂ ಚಾಕ್ಷಯಂ ಮನುಜೇಶ್ವರ ॥ ೪೧ ॥

ತತಸ್ತು ಪ್ರಾರ್ಥನಾ ಕಾರ್ಯಾ ಮಂತ್ರೇಣಾನೇನ ಭೂಮಿಪ ।
ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ॥ ೪೨ ॥

---

ಯೆಂಬ ದೃಢವಾದ ಉತ್ತರವನ್ನು ವಿಶ್ವೇದೇವರಿಂದಲೂ ಪಿತೃಗಳಿಂದಲೂ ಪಡೆದು ಆ ಬಳಿಕ ಅವರಿಗೆ ಉತ್ತರಾಪೋಶನವನ್ನು ಹಾಕಬೇಕು ಊಟವಾದ ಮೇಲೆ ಬ್ರಾಹ್ಮಣರನ್ನು “ಯನ್ಮೇ ರಾಮಶ್ಚ ಶಕ್ರಶ್ಚ' ಎಂಬ ಮಂತ್ರದಿಂದ ಪ್ರದಕ್ಷಿಣೆಮಾಡಿ ಪ್ರತ್ಯೇಕ ಪ್ರತ್ಯೇಕವಾಗಿ ಅವರಿಗೆಲ್ಲರಿಗೂ ದಕ್ಷಿಣಾ-ತಾಂಬೂಲಗಳನ್ನು ಕೊಟ್ಟು ತೃಪ್ತಿಪಡಿಸಬೇಕು ತೃಪ್ತರಾದ ಬ್ರಾಹ್ಮಣರನ್ನು ಕುರಿತು, “ಭವಂತೋಭಿರಮಂತು ನೀವು ಸುಖವಾಗಿ ವಿಶ್ರಾಂತಿಯನ್ನು ಪಡೆದು ಸಂತೋಷಪಡಿರಿ” ಎಂದು ಹೇಳಿ, ಅವರಿಂದ “ಅಭಿರತಾಃ ಸ್ಮ—ಸಂತೋಷವಾಗಿ ವಿಶ್ರಮಿಸಿಕೊಳ್ಳುತ್ತೇವೆ” ಎಂದು ಪ್ರತ್ಯುತ್ತರ ಪಡೆದು, ಆ ಬಳಿಕ ಪಿತೃಗಳ ನಾಮಗೋತ್ರಗಳನ್ನುಚ್ಚಾರಮಾಡಿ ಆ ಬ್ರಾಹ್ಮಣರುಗಳ ಕೈಗೆ ಯವೋದಕ-ತಿಲೋದಕಗಳನ್ನು ಕೊಡಬೇಕು. ಆ ಕಾಲದಲ್ಲಿ “ಅಸ್ಮತ್ಪಿತೃಣಾಂ ಅನೇನಶ್ರಾದ್ಧೇನ ಅಕ್ಷಯ್ಯ ತೃಪ್ತಿದ್ವಾರಾಶಾಶ್ವತ ಬ್ರಹ್ಮಲೋಕಾವಾಪ್ತಿರಸ್ತ್ವಿತಿ ಭವಂತೋ ಬ್ರುವಂತು” ಎಂದು ಹೇಳಬೇಕು ಆ ಮಾತಿಗೆ “ಶಾಶ್ವತ ಬ್ರಹ್ಮಲೋಕಾವಾಪ್ತಿರಸ್ತು” ಎಂದು ಬ್ರಾಹ್ಮಣರು ಉತ್ತರ ಹೇಳಬೇಕು.

೪೨-೪೪. ಅನಂತರ ಈ ಕೆಳಗೆ ಹೇಳುವ ಮಂತ್ರದಿಂದ (ದಾತಾರೋನೋಭ

ಶ್ರದ್ಧಾ ಚನೋ ಮಾವ್ಯಗಮದ್ಬಹು ದೇಯಂ ಚ ನೋಸ್ತ್ವಿತಿ ।
ವಾಜೇವಾಜೇತಿ ತೂತ್ಥಾಪ್ಯ ಕೃತ್ವಾ ಚೈಷಾಂ ಪ್ರದಕ್ಷಿಣಾಂ ॥ ೪೩ ॥

ಜಾನುಭ್ಯಾಮವನಿಂ ಗತ್ವಾ ಪ್ರಣಿಪತ್ಯ ವಿಸರ್ಜಯೇತ್ ।
ಅಪಸವ್ಯೇನ ಕರ್ತವ್ಯಂ ಪಿತೃಕಾರ್ಯಂ ನರಾಧಿಪ ॥ ೪೪ ॥

ಬ್ರಾಹ್ಮಣೇನ್ನೈವ ವಕ್ತವ್ಯಾ ಯದಿ ಪೃಷ್ಟಾ ಹವಿರ್ಗುಣಾಃ ।
ಯಾವದೂಷ್ಮಾ ಭವತ್ಯನ್ನೇ ಯಾವದಶ್ನಂತಿ ವಾಗ್ಯತಃ ॥ ೪೫ ॥

---

ವರ್ಧಂತಾಂ) ಬ್ರಾಹ್ಮಣರನ್ನು ಪ್ರಾರ್ಥನೆಮಾಡಬೇಕು. ಈ ಶ್ಲೋಕ(ಮಂತ್ರ)ವನ್ನು ಮೇಲೆ ಬರೆದಿದೆ ಅದರ ತಾತ್ಪರ್ಯವೇನೆಂದರೆ— ನಾವು ಔದಾರ್ಯಗುಣವುಳ್ಳವರಾಗಿ ಅಭಿವೃದ್ಧಿ ಹೊಂದುವಂತೆಯೂ, ನಮ್ಮ ಸಂತತಿಯು ಚೆನ್ನಾಗಿ ಬೆಳಯುವಂತೆಯೂ, ನಮಗೆ ಕರ್ಮಶ್ರದ್ಧೆಯು ದೃಢವಾಗಿರುವಂತೆಯೂ, ನಾವು ಇನ್ನೊಬ್ಬರಿಗೆ ಯಥೇಚ್ಛವಾಗಿ ದಾನಮಾಡುವಂತೆಯೂ, ಸಂಪತ್ಸಮೃದ್ಧಿಯಾಗಲೆಂದೂ ಅದರ ತಾತ್ಪರ್ಯ ಅದಕ್ಕೆ "ದಾತಾರೋನೋಭಿ ವರ್ಧಂತಾಂ" ನಿಮ್ಮ ಇಷ್ಟದಂತೆ ನೀವೆಲ್ಲರೂ ಉದಾರಿಗಳಾಗಿ ಸಾರೋದ್ಧಾರವಾಗಿ ಬಾಳಿರಿ, ಎಂಬುದಾಗಿ ಬ್ರಾಹ್ಮಣರು ಉತ್ತರರೂಪವಾಗಿ ಆಶೀರ್ವಾದಮಂತ್ರವನ್ನು ಹೇಳುತ್ತಾರೆ ಈ ಕಲಾಪವು ನಡೆದೊಡನೆ, 'ವಾಜೇ ವಾಜೇ ಉತವಾಜಿನಃ—ತೃಪ್ತಾಯಾಥ ಪಥಿಭಿರ್ದೇವಯಾನೈಃ' ಎಂಬ ಮಂತ್ರದಿಂದ ಆ ಬ್ರಾಹ್ಮಣರಲ್ಲರನ್ನೂ ಕೈಹಿಡಿದೆಬ್ಬಿಸಿ ಪ್ರದಕ್ಷಿಣೆಮಾಡಿ ಸಾಷ್ಟಾಂಗ ನಮಸ್ಕಾರ ಮಾಡಿ, ಅವರೆಲ್ಲರನ್ನೂ ಮನೆಗೆ ಕಳುಹಿಸಿಕೊಡಬೇಕು ಎಲೈ ರಾಜಶ್ರೇಷ್ಠನೇ, ಕೇಳು ಪಿತೃಕಾರ್ಯವನ್ನು ಮಾಡುವಾಗಲೆಲ್ಲಾ ಯಜ್ಞೋಪವೀತವನ್ನು ಎಡಗಡೆಗೆ ಹಾಕಿಕೊಂಡಿರಬೇಕು

ಟಿಪ್ಪಣಿ —ಸಾಮಾನ್ಯ ದಿನಗಳಲ್ಲಿ ಹಬ್ಬ ಹರಿದಿನಗಳಲ್ಲಿ ಔತನೋಪಚಾರ ಕಾಲಗಳಲ್ಲಿ ಅತಿಥಿಗಳು ಮನೆಗೆ ಹೋಗುವಾಗ ಮನೆಗೆ ಹೋಗಿ ಬರುತ್ತೇನೆಂದು ಹೇಳುವ ಸಂಪ್ರದಾಯವುಂಟು. ಶ್ರಾದ್ಧಭೋಜನವನ್ನು ಮಾಡಿದವರು ಮಾತ್ರ ಆ ರೀತಿ ಯಜಮಾನನೊಡನೆ ಹೇಳಕೂಡದು ಹೇಳದೆ ಕೇಳದೆ ಮನೆಗೆ ಹೊರಟು ಹೋಗಬೇಕು.—ಇವೆಲ್ಲಾ ಪೂರ್ವಿಕರಾದ ಋಷಿಗಳು ಮಾಡಿರುವ ಕಟ್ಟಲೆಗಳು (ಸಂಪ್ರದಾಯ)

೪೫-೫೧ ಅಡಿಗೆ ಚೆನ್ನಾಗಿದೆಯೋ? ಹೇಗಿದೆ? ಯಾವುದಕ್ಕೆ ಉಪ್ಪು ಸಾಲದು? ಇವೇ ಮೊದಲಾದ ಅಡಿಗೆಮಾಡಿರುವ ಪದಾರ್ಥಗಳ ಗುಣಗಳನ್ನು

ತಾವದಶ್ನಂತಿ ಪಿತರೋ ಯಾವನ್ನೋಕ್ತಾ ಹವಿರ್ಗುಣಾಃ
ಉಚ್ಛಿಷ್ಟಮಾರ್ಜನಂ ಯಾವನ್ನ ಕೃತಂ ನೃಪಸತ್ತಮ ॥ ೪೬ ॥

ತಾವದಶ್ನಂತಿ ಪಿತರಃ ಸ್ವಧಾರಸವಿಮಿಶ್ರಿತಂ ।
ಹಸ್ತದತ್ತಾನಿ ಲೇಹ್ಯಾನಿ ಲವಣಂ ವ್ಯಂಜನಾನಿ ಚ ॥ ೪೭ ॥

ದಾತಾರಂ ನೋಪತಿಷ್ಠಂತಿ ಭೋಕ್ತಾ ಭುಂಕ್ತೇ ಚ ಕಿಲ್ಬಿಷಂ ।
ಸೌವರ್ಣರಾಜತಾಭ್ಯಾಂತು ಫಲ್ಗುಪಾತ್ರೇಣ ಚಾಪ್ಯಥ ॥ ೪೮ ॥

ದತ್ತಮಕ್ಷಯತಾಂ ಯಾತಿ ಖಡ್ಗೇನೌದುಂಬುರೇಣ ವಾ ।
ಮಾಷಂ ನಾಶ್ನಾತಿ ಯಃ ಪಂಕ್ತ್ಯಾಂ ಯಥಾವದ್ವಿನಿಯೋಜಿತಂ ॥ ೪೯ ॥

ಸಪ್ರೇತ್ಯ ನರಕಂ ಯಾತಿ ನಾತ್ರಕಾರ್ಯಾ ವಿಚಾರಣಾ । ॥ ೫೦ ॥

ಶ್ರಾದ್ಧೇ ದಾತಾ ಚ ಭೋಕ್ತಾ ಚ ಮೈಥುನಂ ಯದಿ ಗಚ್ಛತಃ ।
ತನ್ಮಾಂಸಂ ಪಿತರಸ್ತಸ್ಯ ಭುಂಜತೇ ರೇತಸಾ ಯುತಂ ।
ಏವಂ ಶ್ರಾದ್ಧಂ ತಥಾ ಕಾರ್ಯಂ ಶೂದ್ರೇಣಾಪಿ ನರಾಧಿಪ ॥ ೫೧ ॥

---

ಕುಳಿತು, ಬ್ರಾಹ್ಮಣರು ಊಟಮಾಡುತ್ತಿರುವಾಗ ಪ್ರಶ್ನೆಮಾಡಲೇ ಕೂಡದು. ಹಾಗೂ ಪ್ರಶ್ನೆಮಾಡಿದಾಗ್ಯೂ ಊಟಕ್ಕೆ ಕುಳಿತಿರುವ ಬ್ರಾಹ್ಮಣರು ಆ ಅಡಿಗೆಯ ರುಚಿ (ಹವಿರ್ಗುಣ) ಗಳನ್ನು ಯಾರಿಗೂ ಹೇಳದ ಮೌನವಾಗಿ ಊಟಮಾಡಬೇಕು ಇದು ಭೋಜನ ನಿಯಮ. ಇದನ್ನಾರಾದರೂ ಉಲ್ಲಂಘಿಸಿ ಅಡಿಗೆಯ ರುಚಿಗಳನ್ನು ಹೇಳಿ ಬಿಟ್ಟರೆ ಆ ಆಹಾರಗಳು ಶ್ಲೇಷ್ಮರೂಪವಾಗಿ ಪರಿಣಮಿಸಿ ಅದನ್ನು ಪಿತೃಗಳು ಬಿಟ್ಟು ಹೊರಟುಹೋಗುತ್ತಾರೆ ತಿಂದು ಮಿಕ್ಕ ಎಂಜಲನ್ನಕ್ಕೆ ಪ್ರೋಕ್ಷಣೆಮಾಡಕೂಡದು. ಈ ನಿಯಮಗಳನ್ನುಲ್ಲಂಘಿಸಿ ನಡೆದರೆ ಪಿತೃಗಳು ಸ್ವಧಾರಸವಿಮಿಶ್ರವಾಗಿ ಉಣ್ಣುತ್ತಲಿದ್ದ ಅನ್ನವನ್ನು ತ್ಯಾಗಮಾಡಿ ಹೊರಟುಹೋಗುತ್ತಾರೆ ಮತ್ತು ಚಟ್ನಿ-ಗೊಜ್ಜು ಬಜ್ಜಿ ಇವುಗಳನ್ನೂ, ಉಪ್ಪು-ಹುಳಿ-ಕೂಟು ಮುಂತಾದ ಯಾವ ಲೇಹ್ಯ ಪದಾರ್ಥಗಳನ್ನೂ ಕೈಯಿಂದ ಬಡಿಸಬಾರದು. ಮಿಳ್ಳೆ-ಸೌಟು-ಚಮಚಗಳಲ್ಲಿ ಬಡಿಸಬೇಕು. ಚಿನ್ನ ಬೆಳ್ಳಿ ಪಾತ್ರೆಗಳಲ್ಲಾಗಲಿ ಮರಗಿಗಳಲ್ಲಾಗಲೀ ಪದಾರ್ಥಗಳನ್ನು ತಂದು ಬಡಿಸಬೇಕು ಅತ್ತೀಮರದ ಮರಗಿಗಳು ಶ್ರೇಷ್ಠವೆನಿಸುವುವು ಈರೀತಿ ಬಡಿಸಿದರೆ ಅಕ್ಷಯ ತೃಪ್ತಿಯನ್ನು ಪಡೆದು ಪಿತೃಗಳು ಹರಸುವರು. ಉದ್ದಿನ ಒಡೆಯನ್ನು ಎಲೆಯಲ್ಲಿ ಬಡಿಸಿದರೆ ಅದನ್ನು ಚೆಲ್ಲದೆ ಯಾರು ತಿನ್ನುತ್ತಾರೋ ಅದರಿಂದ ಪಿತೃಗಳು ತೃಪ್ತರಾಗುವರು ಹಾಗೆ ತಿನ್ನದೆ ಬಿಟ್ಟುಬಿಟ್ಟವನು ನರಕಕ್ಕೆ ಹೋಗುತ್ತಾನೆ

ಟಿಪ್ಪಣಿ —ಇಲ್ಲಿ ಮೂಲ ಪುಸ್ತಕದಲ್ಲಿ ಮಾಂಸಂ ಎಂದು ಬರೆದಿದೆ ನಾವು ಅದನ್ನು ಮಾಷಂ ಎಂದು ಕಂಸ (—) ಗಳಲ್ಲಿ ಬರೆದಿದೇವೆ ಮಾಂಸವನ್ನು ಬಡಿಸ ಬೇಕೆಂದೂ ತಪ್ಪಿದರೆ ದೋಷವೆಂದೂ ಹೇಳಿದ ಹಾಗಾಯಿತು ಇದನ್ನು ಸ್ವಲ್ಪ ಯೋಚಿಸುವುದಾದರೆ ಯುಗಾಂತರಮಾತೆಂದು ನಾವು ತಿಳಿದುಕೊಳ್ಳಬೇಕಾಗುವುದು ಇಂತಹ ಕಲಿಯುಗದಲ್ಲಿ ಯಾರೂ ಶ್ರಾದ್ಧದಲ್ಲಿ ಮಾಂಸವನ್ನು ಬೇಯಿಸಿ ಹಾಕುವುದಿಲ್ಲ ಅದಕ್ಕಾಗಿಯೇ ಪರಾಶರರು ಧರ್ಮಶಾಸ್ತ್ರಗಳನ್ನು ಬರೆಯುವಾಗ (ತಮ್ಮ ಮಗ ವ್ಯಾಸರ ಅಭಿಪ್ರಾಯವನ್ನು ಒಪ್ಪದೆ) ಒಂದು ಶ್ಲೋಕವನ್ನು ಬರೆದಿದ್ದಾರೆ ಅದನ್ನು ಇಲ್ಲಿ ವಿವರಿಸುವೆವು

ಅಶ್ವಾಲಂಭಂ ಗವಾಲಂಬಂ ಸನ್ಯಾಸಂ ಪಲ ಪೈತ್ರಕಂ ।
ದೇವರೇಣ ಸುತೋತ್ಪತ್ತಿಂ ಕಲೌ ಪಂಚ ವಿವರ್ಜಯೇತ್ ॥

ಯಾಗಗಳನ್ನೂ, ಸನ್ಯಾಸ, ಮಾಂಸ ಶ್ರಾದ್ಧಗಳನ್ನೂ, ಮೈದುನನಿಂದ ಸಂತಾನ ಪಡೆಯುವುದನ್ನೂ ನಿಷೇಧಿಸಿ ಬರೆದಿದ್ದಾರೆ ಆದ್ದರಿಂದ ನಾವು ಅದನ್ನು ಅನುಸರಿಸಿ ಶಾಕ ಪಾಕಗಳಿಂದಲೇ ಶ್ರಾದ್ಧವನ್ನು ಮಾಡುತಲಿದೇವೆಯಾಗಿ, ಅದನ್ನು ಅವಲಂಬಿಸಿಯೇ ಶ್ರಾದ್ಧಪ್ರಕರಣದ ಮುಂದಿನ ಭಾಗವನ್ನೂ ಸಹ ಬರೆದಿದೇವೆ. ಯಾರೂ ಇದನ್ನು ಆಕ್ಷೇಪಿಸದೆ ಪರಾಶರ ವಚನ ಪ್ರಮಾಣದಂತೆ ಸಸ್ಯಾಹಾರಾದಿ ಕ್ರಮದಂತೆ ನಡೆಯಬೇಕೆಂದು ಪ್ರಾರ್ಥಿಸುತ್ತೇವೆ ಹಾಗಲ್ಲದೆ ಈ ಪುರಾಣವು ಸುಳ್ಳೋ ? ಇದನ್ನು ನಂಬಬೇಡವೋ ? ಇದನ್ನನುಸರಿಸಿ ನಡೆಯಬೇಡವೋ ? ಎಂದು ಆಕ್ಷೇಪಿಸುವವರ ಮನಸ್ತೃಪ್ತಿಗಾಗಿಯೇ ಈ ಟಿಪ್ಪಣಿಯನ್ನಿಲ್ಲಿ ಬರೆದಿದೇವೆ ನಮ್ಮ ಈ ಮಾತನ್ನು ಮತ್ತೊಂದಾವರ್ತಿ ದೃಢಪಡಿಸಿಕೊಳ್ಳುವುದಕ್ಕಾಗಿ ಮುಂದಿನ ೧೪೧ ನೇ ಅಧ್ಯಾಯದಲ್ಲಿ ಬರುವ ಮಾಂಸಾಹಾರದ ಪ್ರಕರಣದ ಶ್ಲೋಕಗಳ ಮೂಲವನ್ನು ಮಾತ್ರ ಬರೆದು, ಅದರ ವ್ಯಾಖ್ಯಾನವನ್ನು ಸಂಪೂರ್ಣವಾಗಿ ಬಿಟ್ಟಿರುತ್ತೇವೆ ನಾವು ರಾಜಾಜ್ಞೆಯಿಂದ ಈ ಮಹಾಪುರಾಣದ ಭಾಷಾಂತರವನ್ನು ಬರೆದಿರುವುದರಿಂದಲೂ, ಈ ಭಾಷಾಂತರದ ಟಿಪ್ಪಣಿಯ ಸರ್ವಾಧಿಕಾರವೂ ಲೇಖನ ಧ್ಯೇಯವೂ ನಮ್ಮ ಸ್ವಂತ ಸಿದ್ಧವಾದ ಹಕ್ಕಾಗಿರುವುದರಿಂದ ಇಷ್ಟು ದೂರ ಧೈರ್ಯವಾಗಿ ಟಿಪ್ಪಣಿಯನ್ನು ಬರೆದಿರುತ್ತೇವೆ ಧರ್ಮಸೂಕ್ಷ್ಮವನ್ನು ತಿಳಿದು ವಾಚಕರು ಸಾತ್ವಿಕರೀತಿಯಲ್ಲಿ ನಡೆದುಕೊಳ್ಳಬೇಕೆಂದೂ, ಪುರಾಣದ ವಾಕ್ಯಗಳಿಗೆ ಮನ್ನಣೆಕೊಡಬೇಕೆಂದೂ, ಕಾಲಾನುಸಾರವಾಗಿ ಅದನ್ನು ಸತ್ವಗುಣದಿಂದ ಪರಿವರ್ತಿಸಿಕೊಳ್ಳಬೇಕೆಂದೂ ಮತ್ತೊಮ್ಮೆ ವಾಚಕರಲ್ಲಿ ಕ್ಷಮೆ ಬೇಡುವೆವು.

ಇನ್ನು ಮುಂದಿನ ಪುರಾಣ ಸರಣಿಯನ್ನನುಸರಿಸೋಣ—

ಶ್ರಾದ್ಧಮಾಡುವ ಯಜಮಾನನೂ ಶ್ರಾದ್ಧಭೋಜನಮಾಡಿದ ಬ್ರಾಹ್ಮಣನೂ

**ಮಂತ್ರವರ್ಜ್ಯಂ ಹಿ ಶೂದ್ರಸ್ಯ ಸರ್ವಮೇತದ್ವಿಧೀಯತೇ ।**
**॥ ವಜ್ರ ಉವಾಚ**
**ಯಸ್ಯ ಜೀವೇತ್ಪಿತಾ ಶ್ರಾದ್ಧಂ ಕಸ್ಯಾಸೌ ಕರ್ತುಮರ್ಹತಿ ॥ ೫೨ ॥**

**ತ್ವಮೇವ ಸಂಶಯಚ್ಛೇತ್ತಾ ಸಂಶಯಂ ಛಿಂಧಿ ಮೇ ದ್ವಿಜ ।**
**॥ ಮಾರ್ಕಂಡೇಯ ಉವಾಚ ॥**
**ಯೇಷಾಂ ಶ್ರಾದ್ಧಂ ಪಿತಾ ಕುರ್ಯಾತ್ತೇಷಾಮೇವ ಸ ಕಾರಯೇತ್ ।**
**ಮಂತ್ರಹೀನಂ ಪ್ರಕರ್ತವ್ಯಂ ತೇನ ಶ್ರಾದ್ಧಂ ಯಥಾವಿಧಿ ॥ ೫೩ ॥**

**ಮಾತಾಮಹಾನಾಂ ಶ್ರಾದ್ಧಂ ತು ಮಂತ್ರಹೀನಂ ಚ ಕಾರಯೇತ್ ।**
**ಶ್ರಾದ್ಧಂ ಚ ಸುಹೃದಾಂ ಕುರ್ಯಾತ್ಸ್ತ್ರೀಣಾಂ ಚಾಕ್ಷಯವಾಚಕಂ ॥೫೪॥**

---

ನಹ ಆಗಿನ ಸ್ತ್ರೀಸಂಭೋಗಮಾಡಕೂಡದು ಹಾಗೇನಾದರೂ ಮಾಡಿದರೆ ಅವನ ಮಾಂಸವನ್ನೂ ವೀರ್ಯವನ್ನೂ ಪಿತೃಗಳು ಭುಜಿಸುತ್ತಾರೆ ಈರೀತಿ ನಿಯಮ ವನ್ನನುಸರಿಸಿ ಚಾತುರ್ವರ್ಣ್ಯದವರೂ ಶ್ರಾದ್ಧವನ್ನು ಮಾಡಬೇಕು ಶೂದ್ರನಿಗೆ ಮಾತ್ರ ಮಂತ್ರಾಧಿಕಾರವಿಲ್ಲವಾದ್ದರಿಂದ ತಂತ್ರದಿಂದಲೇ ಅನುಮಾದಿಗಳಿಂದ ಶ್ರಾದ್ಧ ಮಾಡಬೇಕು

೫೨ ವಜ್ರರಾಜನು ಪ್ರಶ್ನೆಮಾಡುತ್ತಾನೆ —ಮಾರ್ಕಂಡೇಯ ಋಷಿಗಳೆ! ನನಗೊಂದು ಸಂಶಯವುಂಟಾಗಿದೆ ಅದನ್ನು ಪರಿಹರಿಸಿ ಮುಂದಿನ ವಿಚಾರವನ್ನು ಹೇಳಿರಿ ಅದೇನೆನ್ನುವಿರೋ—ಯಾವನಿಗಾದರೂ ತಂದೆಯು ಬದುಕಿದ್ದರೆ ಅಂತಹ ವನು ಯಾರಿಗೆ ಶ್ರಾದ್ಧಮಾಡಬೇಕು? ಅದನ್ನಿಷ್ಟು ದಯಮಾಡಿ ತಿಳಿಸಿರಿ

೫೩-೫೪ ಯಾರ ಶ್ರಾದ್ಧವನ್ನು ತನ್ನ ತಂದೆಯು ಮಾಡುವನೋ ಅದೇ ಶ್ರಾದ್ಧವನ್ನು ಮಗನೂ ಮಾಡಬೇಕು ಆದರೆ ಅಂತಹ ಪ್ರೀತಿಶ್ರಾದ್ಧದಲ್ಲಿ ಮಂತ್ರಗಳ ನ್ನೇನೂ ಉಚ್ಚರಿಸಬೇಕಾದ ಪ್ರಕೃತವಿಲ್ಲ ತನಗಿಷ್ಟರಾದ ಜನರಿಗೆ ಹೇಳಿಕೊಂಡು, ಬೇಕಾದ ಅಡಿಗೆಯನ್ನು ಮಾಡಿಸಿ, ತಂದೆ ಬದುಕಿದ್ದ ಕಾಲದಲ್ಲೂ ಸಹ (ಸಂಪಾದಿಸುವ ಶಕ್ತಿಯುಳ್ಳ) ಮಗನು ಶ್ರಾದ್ಧವನ್ನು ಅಜ್ಜನ ಹೆಸರಿನಲ್ಲಿ ಮಾಡಬಹುದು. ಇದರಂತೆ ತನ್ನ ತಾಯಿಯ ತಂದೆ, ಸನ್ಮಿತ್ರರು, ಸ್ತ್ರೀಯರೇ ಮುಂತಾದವರ ಶ್ರಾದ್ಧಗಳನ್ನು ಮಂತ್ರದ ತಂಟೆಗೆ ಹೋಗದೆ ಉಪಚಾರದಿಂದಲೂ ಪ್ರೀತಿಯಿಂದಲೂ ಮಾಡಿದರೆ ಅವ ರಿಗೆ ಅಕ್ಷಯ ತೃಪ್ತಿಯಾಗುವುದು

**॥ ವಜ್ರ ಉವಾಚ ॥**

**ಪಿತಾ ಪಿತಾಮಹಶ್ಚೈವ ಜೀವೇತಾಂ ಯಸ್ಯ ದೇಹಿನಃ ।**
**ತೇನ ಶ್ರಾದ್ಧಂ ಕಥಂ ಕಾರ್ಯಂ ತನ್ಮಮಾಚಕ್ಷ್ವ ಪೃಚ್ಛತಃ ॥ ೫೫ ॥**

**॥ ಮಾರ್ಕಂಡೇಯ ಉವಾಚ ॥**

**ಯೇಷಾಂ ಪಿತಾಮಹಃ ಕುರ್ಯಾತ್ತೇಷಾಂ ಶ್ರಾದ್ಧಂ ನರಾಧಿಪ ।**
**ತೇನ ಕಾರ್ಯಂ ಮಹಾಪ್ರಾಜ್ಞ ಯಥಾವದನುಪೂರ್ವಶಃ ॥ ೫೬ ॥**

**॥ ವಜ್ರ ಉವಾಚ ॥**

**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।**
**ಯಸ್ಯ ಜೀವಂತಿ ಕರ್ತವ್ಯಂ ತೇನ ಶ್ರಾದ್ಧಂ ಕಥಂ ದ್ವಿಜ ॥ ೫೭ ॥**

**॥ ಮಾರ್ಕಂಡೇಯ ಉವಾಚ ॥**

**ತೇನ ಶ್ರಾದ್ಧಂ ನ ಕರ್ತವ್ಯಂ ವಿಧಿಲೋಪಂ ತು ಯಾದವ ।**
**ಪೂಜನೀಯಶ್ಚ ಪಿತರಃ ಪಿತಾಮಹಪಿತುಃ ಸ್ವಯಂ ॥ ೫೮ ॥**

---

ಟಿಪ್ಪಣಿ --ಈ ಕ್ರಮವು ನಾವು ನೋಡಿದಂತೆ ಈ ದೇಶದಲ್ಲಿ ಸಂಪ್ರದಾಯ ದಲ್ಲಿ ಬಂದಿಲ್ಲ ದೇಶಾಂತರಗಳಲ್ಲಿ ಈ ಸಂಪ್ರದಾಯವು ನಡೆಯುವುದೋ ? ಏನೋ ?

೫೫ ವಜ್ರರಾಜನು ಪುನಃ ಪ್ರಶ್ನೆಮಾಡುತ್ತಾನೆ—ಯಾವ ಮನುಷ್ಯನಿಗೆ ತಂದೆಯೂ ತಾತನೂ ಬದುಕಿರುವರೋ ಆ ಮನುಷ್ಯನು ಹೇಗೆ ಶ್ರಾದ್ಧವನ್ನು ಮಾಡ ಬೇಕೆಂಬುದನ್ನು ತಿಳಿಸು

೫೬ ಮಾರ್ಕಂಡೇಯನು ಹೇಳುತ್ತಾನೆ.—ಯಾವ ಮನುಷ್ಯನ ತಾತನು ತಂದೆಯ ಶಾದ್ಧವನ್ನು ಮಾಡುವನೋ ಅದೇ ಶ್ರಾದ್ಧವನ್ನು ಅವನ ಮೊಮ್ಮಗನೂ ಸಹ ಹಿಂದೆ ಹೇಳಿದಂತೆ ಅಮಂತ್ರಕವಾಗಿ ಮಾಡಬೇಕು.

೫೭ ವಜ್ರಮಹಾರಾಜನು ಹೇಳುತ್ತಾನೆ —ಎಲೈ ಮಾರ್ಕಂಡೇಯನೇ ! ಯಾವ ಮನುಷ್ಯನಿಗೆ ತಂದೆ-ತಾತ-ಮುತ್ತಾತ ಈ ಮೂರು ಮಂದಿಯೂ ಬದುಕಿರು ವರೋ ಅಂತಹವನು ಶ್ರಾದ್ಧವನ್ನು ಮಾಡುವುದೆಂತು ?

೫೮ ಮಾರ್ಕಂಡೇಯನು ಹೇಳುವನು —ಅಂತಹವನು ಶ್ರಾದ್ಧವನ್ನು ಮಾಡಬೇಕಾದುದಿಲ್ಲ ಆದರೆ ತನ್ನ ಪಿತೃ-ಪಿತಾಮಹ-ಪ್ರಪಿತಾಮಹರನ್ನು ಪ್ರತಿ ದಿನವೂ ಭಕ್ತಿಯಿಂದ ಪೂಜೆಮಾಡುತ್ತಲಿರಬೇಕು

॥ ವಜ್ರ ಉವಾಚ ॥
ಜೀವೇತ್ಪಿತಾಮಹೋ ಯಸ್ಯ ಪಿತುಶ್ಚೈವ ಪಿತಾಮಹಃ ।
ಪಿತಾ ಪ್ರೇತಸ್ತಥಾ ಯಸ್ಯ ತಸ್ಯ ಶ್ರಾದ್ಧವಿಧಿಂ ವದ ॥ ೫೯ ॥

॥ ಮಾರ್ಕಂಡೇಯ ಉವಾಚ ॥
ಪಿಂಡನಿರ್ವಪಣಂ ಕೃತ್ವಾ ಸ ಪಿತುರ್ಮನುಜೇಶ್ವರ ।
ಪಿತುಃ ಪಿತಾಮಹಾದೂರ್ಧ್ವಂ ದ್ವಾಭ್ಯಾಂ ಪಿಂಡಂ ನಿವೇದಯೇತ್ ॥ ೬೦ ॥

॥ ವಜ್ರ ಉವಾಚ ॥
ಪಿತಾ ಪಿತಾಮಹೌ ಪ್ರೇತೌ ಯಸ್ಯ ಸ್ಯಾತಾಂ ದ್ವಿಜೋತ್ತಮ ।
ಪಿತುಃ ಪಿತಾಮಹೋ ಜೀವೇತ್ತಸ್ಯ ಶ್ರಾದ್ಧವಿಧಿಂ ವದ ॥ ೬೧ ॥

॥ ಮಾರ್ಕಂಡೇಯ ಉವಾಚ ॥
ಪಿತ್ರೇ ಸಪಿತ್ರೇ ಕೃತ್ವಾ ತು ಪಿಂಡನಿರ್ವಪಣಂ ತತಃ ।
ಪಿಂಡನಿರ್ವಪಣಂ ಕುರ್ಯಾತ್ಪಿತಾಮಹಪಿತಾಮಹೇ ॥ ೬೨ ॥

---

೫೯ ವಜ್ರರಾಜನು ಪುನಃ ಕೇಳುತ್ತಾನೆ —ಯಾವ ಮನುಷ್ಯನಿಗೆ ತಂದೆಯು ಸತ್ತುಹೋಗಿ ತಾತ-ಮುತ್ತಾತಂದಿರು ಬದುಕಿದ್ದರೆ ಅವನು ಹೇಗೆ ಶ್ರಾದ್ಧಮಾಡಬೇಕೋ ತಿಳಿಸು

೬೦ ಮಾರ್ಕಂಡೇಯನು ಹೇಳುತ್ತಾನೆ —ಅಂತಹವನು ತಂದೆಯ ಪಾರ್ವಣಪಿಂಡವನ್ನು ಹಾಕಿದ ಬಳಿಕ ತಾತ-ಮುತ್ತಾತಂದಿರಿಬ್ಬರನ್ನು ಬಿಟ್ಟು ಮುಂದಿನ ವೃದ್ಧಪ್ರಪಿತಾಮಹರಿಗೋಸ್ಕರ ಉಳಿದ ಎರಡು ಪಿಂಡಗಳನ್ನೂ ನಿವೇದನ ಮಾಡಬೇಕು

೬೧ ವಜ್ರಮಹಾರಾಜನು ಪುನರಪಿ ಪ್ರಶ್ನೆಮಾಡುತ್ತಾನೆ —ಯಾವ ಮನುಷ್ಯನಿಗೆ ತಂದೆ-ತಾತಂದಿರಿಬ್ಬರೂ ಸತ್ತುಹೋಗಿ ಮುತ್ತಾತನು ಮಾತ್ರ ಬದುಕಿದ್ದರೆ ಆ ಶ್ರಾದ್ಧವನ್ನು ಹೇಗೆ ಮಾಡಬೇಕು ?--

೬೨ ಮಾರ್ಕಂಡೆಯನು ಹೇಳುತ್ತಾನೆ —ತಂದೆಯೊಡನೆ ಕೂಡಿದ ತನ್ನ ತಂದೆಗೆ (ತಂದೆ ಮತ್ತು ತಾತನಿಗೆ) ಪಿಂಡನಿರ್ವಪಣೆಯನ್ನು ಮಾಡಿದ ಬಳಿಕ ಉಳಿದ ಮತ್ತೊಂದು ಪಿಂಡವನ್ನೂ ಸಹ ತಾತನ ತಾತನಿಗೆ (ಪ್ರಪ್ರಪಿತಾಮಹ-ಮುತ್ತಜ್ಜನ ತಂದೆಗೆ) ಕೊಡಬೇಕು

॥ ವಜ್ರ ಉವಾಚ ॥
ಪ್ರೇತಃ ಪಿತಾ ಭವೇದ್ಯಸ್ಯ ಪಿತುಶ್ಚೈವ ಪಿತಾಮಹಃ ।
ತೇನ ಕಾರ್ಯಂ ಕಥಂ ಶ್ರಾದ್ಧಂ ತನ್ಮಮಾಚಕ್ಷ್ವ ಪೃಚ್ಛತಃ ॥ ೬೩ ॥

॥ ಮಾರ್ಕಂಡೇಯ ಉವಾಚ ॥
ಸ ತು ದತ್ವಾ ಪಿತುಃ ಪಿಂಡಂ ತತ ಊರ್ಧ್ವಂ ಪಿತಾಮಹಾತ್ ।
ದ್ವಾಭ್ಯಾಂ ದದ್ಯಾತ್ಸದಾ ಪಿಂಡಂ ಏವಮಾಹುರ್ಮನೀಷಿಣಃ ॥ ೬೪ ॥

॥ ವಜ್ರ ಉವಾಚ ॥
ಪ್ರೇತಃ ಪಿತಾಮಹೋ ಯಸ್ಯ ಪಿತಾ ಜೀವೇತ್ದ್ವಿಜೋತ್ತಮ ।
ಪಿತುಃ ಪಿತಾಮಹೋ ಜೀವೇತ್ತಸ್ಯ ಶ್ರಾದ್ಧವಿಧಿಂ ವದ ॥ ೬೫ ॥

॥ ಮಾರ್ಕಂಡೇಯ ಉವಾಚ ॥
ದತ್ವಾ ಪಿತಾಮಹೇ ಪಿಂಡಂ ಸ ತೂರ್ಧ್ವಂ ಪ್ರಪಿತಾಮಹಾತ್ ।
ಪಿಂಡನಿರ್ವಪಣಂ ಕುರ್ಯಾತ್ದ್ವಾಭ್ಯಾಂ ನಿತ್ಯಮತಂದ್ರಿತ ॥ ೬೬ ॥

೬೩ ವಜ್ರಮಹಾರಾಜನು ಕೇಳುತ್ತಾನ —ಯಾವ ಮನುಷ್ಯನ ತಂದಯೂ ಮತ್ತು ಮುತ್ತಾತನೂ ಸಹ ಸತ್ತು, ತಾತನೊಬ್ಬನು ಮಾತ್ರ ಬದುಕಿರುವನೋ ಅಂತಹ ಶ್ರಾದ್ಧವನ್ನು ಮಾಡುವುದೆಂತು ?

೬೪ ಮಾರ್ಕಂಡೇಯನು ಹೇಳುತ್ತಾನೆ – ಅಂತಹನನು ತಂದೆಯು ಪಿಂಡವನ್ನು ನಿರ್ವಪನ ಮಾಡಿದ ಬಳಿಕ ಪಿತಾಮಹನ ಆಚೆ ಇರುವ ಮುತ್ತಜ್ಜ-ಮರಿಯಜ್ಜ (ಪ್ರಪಿತಾಮಹ-ಪ್ರಪ್ರಪಿತಾಮಹ) ರಿಗೆ ಪಿಂಡಗಳನ್ನು ಹಾಕಬೇಕೆಂದು ವಿದ್ವಾಂಸರಾದವರು ಹೇಳುವರು

೬೫. ವಜ್ರರಾಜನು ಪುನಃ ಕೇಳುತ್ತಾನೆ —ಯಾವನ ತಾತನು ಸತ್ತು ತಂದೆಯು ಬದುಕಿರುವನೋ ಮತ್ತು ತಂದೆಯ-ತಾತನು ಬದುಕಿರುವನೋ ಅಂತಹ ಶ್ರಾದ್ಧವನ್ನು ಮಾಡುವುದು ಹೇಗೆ?

೬೬ ಮಾರ್ಕಂಡೇಯನು ಹೇಳುತ್ತಾನೆ —ತಾತನಿಗೆ ಮೊದಲು ಪಿಂಡವನ್ನು ಹಾಕಿ ಆ ಬಳಿಕ ಪಿತಾಮಹನ ಆಚೆ ಇರುವ ಪ್ರಪಿತಾಮಹನಿಗೆ (ಮುತ್ತಜ್ಜನಿಗೇ) ಎರಡು ಪಿಂಡವನ್ನು ಹಾಕಬೇಕು

॥ ವಜ್ರ ಉವಾಚ ॥

ಸಪ್ತಾರ್ಚಿಷಮಹಂ ಮಂತ್ರಂ ಶ್ರೋತುಮಿಚ್ಛಾಮಿ ಭಾರ್ಗವ ।
ಶ್ರಾದ್ಧಕಾಲೇಷು ನಿಯತಂ ರಕ್ಷೋಘ್ನಂ ಯಸ್ಯ ಕೀರ್ತಿತಂ ॥ ೬೭ ॥

॥ ಮಾರ್ಕಂಡೇಯ ಉವಾಚ ॥

ಪಾಪಾಪಹಂ ಪಾವನೀಯಮಶ್ವಮೇಧಸಮಂ ತಥಾ ।
ಮಂತ್ರಂ ವಕ್ಷ್ಯಾಮ್ಯಹಂ ತಸ್ಮಾದಮೃತಂ ಬ್ರಹ್ಮನಿರ್ಮಿತಂ ॥ ೬೮ ॥

ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ಭವಂತ್ವಿಹ ॥ ೬೯ ॥

ಆದ್ಯೇಽವಸಾನೇ ಶ್ರಾದ್ಧಸ್ಯ ತ್ರಿವಾರಂ ತು ಜಪೇತ್ಸದಾ ।
ಅಶ್ವಮೇಧಫಲಂ ಹ್ಯೇತದ್ದ್ವಿಜೈಃ ಸತ್ಕೃತಿಪೂಜಿತಂ ॥ ೭೦ ॥

ಪಿಂಡನಿರ್ವಪಣೇ ಚಾಪಿ ಜಪೇದೇತತ್ಸಮಾಹಿತಃ ।
ಪಿತರಃ ಕ್ಷಿಪ್ರಮಾಯಾಂತಿ ರಾಕ್ಷಸಾಃ ಪ್ರದ್ರವಂತಿ ಚ ॥ ೭೧ ॥

---

೬೭ ವಜ್ರಮಹಾರಾಜನು ಕೇಳುತ್ತಾನೆ - ಸಪ್ತಾರ್ಚಿಸ ಮಂತ್ರವನ್ನೂ, ರಕ್ಷೋಘ್ನ ಮಂತ್ರವನ್ನೂ ಶ್ರಾದ್ಧಕಾಲದಲ್ಲಿ ಪಠಿಸಬೇಕೆಂದು ಹೇಳಿದೆಯಷ್ಟೆ? ಆ ಮಂತ್ರಗಳನ್ನು ಕೇಳಬೇಕೆಂದು ಆಶೆಯುಂಟಾಗಿದೆ ಅದನ್ನು ನನ್ನೊಡನೆ ಹೇಳಿ ಭೃಗುಕುಲೋತ್ಪನ್ನ ಮಾರ್ಕಂಡೇಯನೇ!

೬೮. ಮಾರ್ಕಂಡೇಯನು ಹೇಳುತ್ತಾನ --ನೀನು ಕೇಳಿದ ಈ ಮಂತ್ರವು ಬ್ರಹ್ಮನಿಂದ ನಿರ್ಮಿತವಾಗಿ ಅಮರತ್ವವನ್ನು ಕೊಡತಕ್ಕ ಶಕ್ತಿಯುಳ್ಳದು. ಪಾಪಪರಿಹಾರಕವಾಹುದಾಗಿ ಪರಮಪವಿತ್ರವೆನಿಸಿದ ಮಂತ್ರವಿದು ಈ ಮಂತ್ರೋಚ್ಚಾರಣೆಯಿಂದ ಅಶ್ವಮೇಧಯಜ್ಞ ಸಮನಾದ ಫಲವುಂಟು

೬೯-೭೧ ಆ ಮಂತ್ರವಾವುದೆಂದರೆ—ದೇವತಾಭ್ಯಃ ಪಿತೃಭ್ಯಶ್ಚ
ನಮೋನಮಃ ಇದನ್ನು ಶ್ರಾದ್ಧದ ಆದಿಯಲ್ಲೂ ಕಡೆಯಲ್ಲೂ ಮೂರಾವರ್ತಿ ಜಪಮಾಡಬೇಕು. ಈರೀತಿ ಯಾರು ಮಾಡುತ್ತಾರೆಯೋ ಅವರು ಅಶ್ವಮೇಧಯಾಗ ಫಲವನ್ನು ಹೊಂದುವರು ಈ ಮಂತ್ರವನ್ನು ಪಿಂಡನಿರ್ವಪಣ ಕಾಲದಲ್ಲೂ ಸಹ ಉಚ್ಚರಿಸಬೇಕು ಈ ಮಂತ್ರವು ಉಚ್ಚಾರವಾದೊಡನೆಯೇ ದೇವತೆಗಳೂ ಪಿತೃಗಳೂ ಬಹುಬೇಗ ಓಡಿಯೋಡಿ ಬರುವರು ರಕ್ಕಸರು ಬಲು ಬೇಗ

ಪಿತೄಂಶ್ಚ ತ್ರಿಷುಲೋಕೇಷು ಮಂತ್ರೋಽಯಂ ತಾರಯತ್ಯುತ ।
ಪಠ್ಯಮಾನಃ ಸದಾಶ್ರಾದ್ಧೇ ನಿಯತೈರ್ಬ್ರಹ್ಮವಾದಿಭಿಃ ॥ ೭೨ ॥

ರಾಜ್ಯಕಾಮೋ ಜಪೇದೇತತ್ಸದಾ ಮಂತ್ರಮತಂದ್ರಿತಃ ।
ವೀರ್ಯಸರ್ವಾರ್ಥಶೌರ್ಯಾದಿಹ್ಯಾಯುರ್ಬುದ್ಧಿವಿವರ್ಧನಂ ॥ ೭೩ ॥

ಪ್ರೀಯಂತೇ ಪಿತರೋಽನೇನ ಜಪೇನ ನಿಯಮೇನ ಚ ।
ಸಪ್ತಾರ್ಚಿಷಂ ಪ್ರವಕ್ಷ್ಯಾಮಿ ಸರ್ವಕಾಮಪ್ರದಂ ಶುಭಂ ॥ ೭೪ ॥

ಅಮೂರ್ತಾನಾಂ ಸಮೂರ್ತಾನಾಂ ಪಿತೄಣಾಂ ದೀಪ್ತತೇಜಸಾಂ ।
ನಮಸ್ಯಾಮಿ ಸದಾ ತೇಷಾಂ ಧ್ಯಾಯಿನಾಂ ಯೋಗಚಕ್ಷುಷಾಂ ॥ ೭೫ ॥

ಇಂದ್ರಾದೀನಾಂ ಚ ನೇತಾರೋ ದಕ್ಷಮಾರೀಚಯೋಸ್ತಥಾ ।
ಸಪ್ತರ್ಷೀಣಾಂ ಪಿತೄಣಾಂ ಚ ತಾನ್ನಮಸ್ಯಾಮಿ ಕಾಮದಾನ್ ॥ ೭೬ ॥

ಮನ್ವಾದೀನಾಂ ಚ ನೇತಾರಃ ಸೂರ್ಯಾಚಂದ್ರಮಸೋಸ್ತಥಾ ।
ತಾನ್ನಮಸ್ಕೃತ್ಯ ಸರ್ವಾನ್ವೈ ಪಿತೄನಪ್ಸ್ವರ್ಣವೇಷು ಚ ॥ ೭೭ ॥

ನಕ್ಷತ್ರಾಣಾಂ ಗ್ರಹಾಣಾಂ ಚ ವಾಯ್ವಗ್ನಿ ಪಿತರಸ್ತಥಾ ।
ದ್ಯಾವಾಪೃಥಿವ್ಯೋಶ್ಚ ತಥಾ ನಮಸ್ಯೇ ತಾನ್ಕೃತಾಂಜಲಿಃ ॥ ೭೮ ॥

ಆ ಸ್ಥಳವನ್ನು ಬಿಟ್ಟು ತೊಲಗುವರು ಈ ಮಂತ್ರವು ಮೂರು ಲೋಕದಲ್ಲಿಯೂ ಪಿತೃಗಳನ್ನು ಉದ್ಧಾರಮಾಡುವುದು ಬ್ರಹ್ಮವಾದಿಗಳಿಂದ ಈ ಮಂತ್ರವು ಬಹಳ ಭಕ್ತಿಯಿಂದ ಪಾರಾಯಣಮಾಡಲ್ಪಡಬೇಕು ರಾಜ್ಯಕಾಮನಾದವನು ಈ ಮಂತ್ರವನ್ನು ಶಾಂತಿಯಿಂದ ಸರ್ವದಾ ಜಪಮಾಡುತ್ತಲಿರಬೇಕು ಹೀಗೆ ಜಪಮಾಡುತ್ತ ಬಂದರೆ ವೀರ್ಯವನ್ನೂ, ಸಕಲ ಇಷ್ಟಾರ್ಥಗಳನ್ನೂ, ಶೌರ್ಯವನ್ನೂ, ಆಯುಷ್ಯವನ್ನೂ ಹೊಂದುವರು ಇದನ್ನು ನಿಯಮದಿಂದ ಜಪಮಾಡಿದರೆ ಪಿತೃಗಳು ತೃಪ್ತಿ ಹೊಂದುವರು ಇನ್ನು ಮುಂದೆ ಸಕಲ ಇಷ್ಟಾರ್ಥಗಳನ್ನೂ ಕೊಡಬಲ್ಲ, ಸಪ್ತಾರ್ಚಿಷ ಮಂತ್ರವನ್ನು ತಿಳಿಸುತ್ತೇನೆ, ಕೇಳು.

೭೫-೮೨ ೭೫ನೇ ಶ್ಲೋಕ (ಮಂತ್ರ) ವಾದ ಅಮೂರ್ತಾನಾಂ ಎಂಬುದರಿಂದ ಹಿಡಿದು ೮೧ನೇ ಶ್ಲೋಕ ಪ್ರಾತಿರ್ಯಾಸ್ತ ಬ್ರಹ್ಮಣೇ ಲೋಕ ಚಕ್ಷುಷೇ ಎಂಬ ಏಳು ಮಂತ್ರಗಳಿಗೆ ಸಪ್ತಾರ್ಚಿ ಮಂತ್ರಗಳೆಂದು ಹೆಸರು ಇವುಗಳನ್ನು ಪಠಿಸಿ ಇವರ ಅರ್ಥ

**ದೇವರ್ಷೀಣಾಂ ಚ ನೇತಾರಃ ಸರ್ವಲೋಕನಮಸ್ಕೃತಾಃ ।**
**ತ್ರಾತಾರಃ ಸರ್ವಭೂತಾನಾಂ ನಮಸ್ಯೇ ತಾನ್ಪಿತಾಮಹಾನ್ ॥ ೭೯ ॥**

**ಪ್ರಜಾಪತೇರ್ಗಣಾನಾಂ ವಹ್ನೇಃ ಸೋಮಾಯ ಚ ಯಮಾಯ ಚ ।**
**ಯೋಗೇಶ್ವರೇಭ್ಯಶ್ಚ ತಥಾ ನಮಸ್ಯೇ ತಾನ್ಕೃತಾಂಜಲಿಃ ॥ ೮೦ ॥**

**ಪಿತುರ್ಗಣೇಭ್ಯಃ ಸಪ್ತಭ್ಯೋ ನಮೋ ಲೋಕೇಷು ಸಪ್ತಸು ।**
**ಸ್ವಯಂಭುವೇ ನಮಸ್ಕೃತ್ಯ ಬ್ರಹ್ಮಣೇ ಲೋಕಚಕ್ಷುಷೇ ॥ ೮೧ ॥**

**ಏತತ್ತದುಕ್ತಂ ಸಪ್ತಾರ್ಚಿರ್ಬ್ರಹ್ಮರ್ಷಿಗಣಪೂಜಿತಂ ।**
**ಪವಿತ್ರಂ ಪರಮಂ ಹ್ಯೇತಚ್ಛ್ರೀಮದ್ರಕ್ಷೋ ವಿನಾಶನಂ ॥ ೮೨ ॥**

ನನ್ನ ತಿಳಿದುಕೊಂಡು ಆಯಾಯ ಪಿತೃಗಳನ್ನು ಧ್ಯಾನಿಸುತ್ತಲಿದ್ದರೆ ಪುಣ್ಯ ಫಲ ಸಿಗುಟು ಇದರ ಅರ್ಥ– ಯೋಗನೇತ್ರ (ಜ್ಞಾನದೃಷ್ಟಿ) ವನ್ನು ಹೊಂದಿರುವ ಸಾಕಾರ-ನಿರಾಕಾರರೂಪವಾದ, ಮಹಾಪ್ರಕಾಶಮಾನವಾದ ತೇಜಸ್ಸುಳ್ಳ ಯೋಗಿ (ಧ್ಯಾನಿ) ಗಳಾದ ಸಪ್ತಾರ್ಚಿ (ಪಿತೃ) ಗಳನ್ನು ಸರ್ವದಾ ನಮಸ್ಕರಿಸುತ್ತೇನೆ ಈ ಸಪ್ತಾರ್ಚಿ (ಪಿತೃ) ಗಣಗಳು ಇಂದ್ರಾದಿ ದೇವತೆಗಳನ್ನೂ, ದಕ್ಷಬ್ರಹ್ಮ ಮರೀಚಿ-ಬ್ರಹ್ಮ ಮೊದಲಾದ ಬ್ರಹ್ಮವೃಂದವನ್ನೂ, ಸಪ್ತರ್ಷಿಗಣವನ್ನೂ ಸಹ ಅವರವರ ಇಷ್ಟಾರ್ಥ ವನ್ನು ಕೊಟ್ಟು ಭಗವತ್ಸಾನ್ನಿಧ್ಯಕ್ಕೆ ಒಯ್ಯುವುದರಿಂದ ಆ ಜ್ಞಾನವೃಂದವನ್ನು ನಮಸ್ಕ ರಿಸುವೆನು. ಮನ್ವಂತರಾಧಿಪತಿಗಳನ್ನೂ, ಸೂರ್ಯ ಚಂದ್ರರನ್ನೂ, ನೀರು-ಹೊಳೆ-ಸಮುದ್ರಗಳ ಅಭಿಮಾನಿ ದೇವತೆಗಳನ್ನೂ, ಈರೀತಿ ಸಮಸ್ತರನ್ನೂ ಭಗವತ್ಸ್ವರೂಪ ರನ್ನಾಗಿ ಮಾಡಲಿಕ್ಕಾಗಿ ಆತ್ಮಸ್ವರೂಪದ ಕಡೆ ಒಯ್ಯುವ ಸಪ್ತಾರ್ಚಿಗಣಗಳನ್ನು ನಮಸ್ಕರಿಸುತ್ತೇನೆ

ನಕ್ಷತ್ರಗಳು-ನವಗ್ರಹಗಳು-ವಾಯು-ಅಗ್ನಿ-ಪಿತೃಗಣ-ಭೂಮಿ-ಆಕಾಶ ಇತ್ಯಾದಿ ಗಳನ್ನೆಲ್ಲಾ ಆತ್ಮಜ್ಯೋತಿಯೊಡನೆ ಸೇರಿಸಿ ಭಗವತ್ಸ್ವರೂಪರನ್ನಾಗಿ ಮಾಡಬಲ್ಲ ಸಪ್ತಾರ್ಚಿಗಳನ್ನೂ ನಮಸ್ಕರಿಸುತ್ತೇನೆ

ಸಕಲ ಲೋಕನಮಸ್ಕೃತರಾದ ದೇವಋಷಿಗಳನ್ನೂ, ಸರ್ವಭೂತಗಳನ್ನೂ ಕಾಪಾಡುವ (ಪಿತಾಮಹ) ಬ್ರಹ್ಮರನ್ನೂ ಸಹ, ಪರಮಾತ್ಮನ ಒಳಗೆ ಕೊಂಡೊಯ್ಯುವ ಸಪ್ತಾರ್ಚಿಗಳನ್ನು ನಮಸ್ಕರಿಸುತ್ತೇನೆ

**ಏತೇನ ವಿಧಿನಾ ಯುಕ್ತಃ ತ್ರೀಣ್ಯೇವಂ ಲಭತೇ ನರಃ ।**
**ಅನ್ನಮಾಯುಃ ಸುತಾಂಶ್ಚೈವ ವದಂತಿ ಪಿತರೋ ಭುವಿ ॥ ೮೩ ॥**
**ಭಕ್ತ್ಯಾ ಪರಮಯಾ ಯುಕ್ತಃ ಶ್ರದ್ಧಧಾನೋ ಜಿತೇಂದ್ರಿಯಃ ।**
**ಸಪ್ತರ್ಷಿಷಂ ಜಪೇದ್ಯಸ್ತು ನಿತ್ಯಮೇವ ಸಮಾಹಿತಃ ।**
**ಸಪ್ತದ್ವೀಪಸಮುದ್ರಾಯಾಂ ಪೃಥಿವ್ಯಾಮೇಕರಾಡ್ಭವೇತ್ ॥ ೮೪ ॥**

**॥ ವಜ್ರ ಉವಾಚ ॥**

**ಬ್ರಹ್ಮನ್ಮಂತ್ರಂ ಸಮಾಚಕ್ಷ್ವ ಸರ್ವರಕ್ಷೋ ನಿಬರ್ಹಣಂ ।**
**ಪಿಂಡನಿರ್ವಪಣೇ ಯೇನಃ ಮಂತ್ರಣೀಯಾಃ ಕುಶೋತ್ತಮಾಃ ॥ ೮೫ ॥**

---

ಪ್ರಜಾನಾಯಕರು-ಗೋವುಗಳು-ಅಗ್ನಿ-ಯಮ-ಯೋಗೇಶ್ವರರುಗಳನ್ನು ಎರಡು ಕೈಗಳನ್ನೂ ಜೋಡಿಸಿ ಧ್ಯಾನಿಸುತ್ತಾ ನಮಸ್ಕಾರಮಾಡುತ್ತೇನೆ

ಭೂಮ್ಯಾದಿ ಸಪ್ತ ಲೋಕಗಳಲ್ಲಿ ವಾಸಮಾಡುವ ಸಪ್ತಪಿತೃಗಣಗಳಿಗೂ ಲೋಕನೇತ್ರನೆನಿಸಿದ ಸ್ವಾಯಂಭುವ ಬ್ರಹ್ಮನಿಗೂ ನಮಸ್ಕಾರಮಾಡಿ ಬೇಡಿ ಕೊಳ್ಳುತ್ತೇನೆ.

ಈ ಏಳು ಸಪ್ತಾರ್ಚಿ ಮಂತ್ರಗಳೂ ಸಹ ಬ್ರಹ್ಮರ್ಷಿಗಣಗಳಿಂದಲೂ ದೇವರ್ಷಿ ಗಳಿಂದಲೂ ಪೂಜಿತವಾಗಿರುವುದರಿಂದ ಇವು ಪರಮಪವಿತ್ರ (ಶ್ರೇಷ್ಠ) ವಾದ ಮಂತ್ರ ಗಳೆಂದೂ ರಾಕ್ಷಸರಗುಂಪನ್ನು ನಾಶಪಡಿಸುವುದರಲ್ಲಿ ಮಹಾಸಾಮರ್ಥ್ಯವುಳ್ಳವುಗಳೆಂದೂ ತಿಳಿಯಬೇಕು ।

೮೩ ಪಿತೃಗಳು ಹೇಳುವುದೇನೆಂದರೆ —ಈ ಸಪ್ತಾರ್ಚಿಮಂತ್ರವಿಧಿಯಿಂದ ಕೂಡಿದವನಾಗಿ ಆದಾವನು ಪಿತೃಗಳನ್ನು ಪೂಜಿಸಿ ನಮಸ್ಕರಿಸುವನೋ ಅಂತಹ ಪುಣ್ಯಶಾಲಿಯು ಅನ್ನವನ್ನೂ ಆಯುಸ್ಸನ್ನೂ, ಮಕ್ಕಳನ್ನೂ ಸಹ ಸಮೃದ್ಧಿಯಾಗಿ ಹೊಂದುತ್ತಾನೆ.

೮೪. ಯಾವ ಮನುಷ್ಯನು ಸ್ಥಿರಚಿತ್ತದಿಂದ ಈ ಸಪ್ತಾರ್ಚಿಮಂತ್ರಗಳನ್ನು ಪ್ರತಿದಿನವೂ ಪರಮಭಕ್ತಿಯಿಂದಲೂ ಶ್ರದ್ಧೆಯಿಂದಲೂ ಜಿತೇಂದ್ರಿಯತ್ವದಿಂದಲೂ ಕೂಡಿ ಜಪಿಸುತ್ತಾ (ಪಾರಾಯಣಮಾಡುತ್ತಾ) ಬರುವನೋ ಅಂತಹ ಮನುಷ್ಯನು (ಮುಂದಿನ ಜನ್ಮದಲ್ಲಿ) ಸಪ್ತದ್ವೀಪದಿಂದಲೂ ಸುತ್ತುವರಿಯಲ್ಪಟ್ಟ ಈ ಭೂಲೋಕದಲ್ಲ ಚಕ್ರವರ್ತಿಯಾಗಿ ಜನಿಸುವನು

೮೫ ವಜ್ರಮಹಾರಾಜನು ಹೇಳುತ್ತಾನೆ —ಎಲೈ ಬ್ರಾಹ್ಮಣೋತ್ತಮನಾದ ಮಾರ್ಕಂಡೇಯನೇ! ಸಕಲ ರಾಕ್ಷಸರನ್ನೂ ಓಡಿಸುವ ಶಕ್ತಿಯುಳ್ಳ ಮಂತ್ರ

॥ ಮಾರ್ಕಂಡೇಯ ಉವಾಚ ॥

ನಿಹನ್ಮಿ ಸರ್ವಂ ಯದಮೇಧ್ಯವ-
ದ್ಭವೇದ್ಧೃತಾಶ್ಚ ಸರ್ವೇಽಸುರದಾನವಾ ಮಯಾ ।
ಯೇ ರಾಕ್ಷಸಾ ಯಕ್ಷಪಿಶಾಚಗುಹ್ಯಕಾ
ಹತಾ ಮಯಾ ಯಾತುಧಾನಾಶ್ಚ ಸರ್ವೇ ॥ ೮೬ ॥

ಏತೇನ ಮಂತ್ರೇಣ ಸುಸಂಯತಾತ್ಮಾ
ತಿಲಾನ್ಕಿರೇದ್ದಿಕ್ಷು ತಥಾ ವಿದಿಕ್ಷು ।
ಯಸ್ಮಿನ್ದೇಶೇ ಪಠ್ಯತೇ ಮಂತ್ರ ಏಷ
ತಂ ವೈ ದೇಶಂ ರಾಕ್ಷಸಾ ವರ್ಜಯಂತಿ ॥ ೮೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯವಜ್ರ
ಸಂವಾದೇ ಶ್ರಾದ್ಧವಿತರಣೋ ನಾಮ
ಚತ್ವಾರಿಂಶದುತ್ತರ ಶತತಮೋಽಧ್ಯಾಯಃ

ಾಃವುದೋ ಹೇಳು. ಪಿಂಡನಿರ್ವಪಣ ಕಾಲದಲ್ಲಿ ಯಾವ ಮಂತ್ರದಿಂದ ಕುಶ(ದರ್ಭೆ) ಗಳು ಮಂತ್ರಪೂತವಾಗಿ ಮಂತ್ರಿಸಲ್ಪಟ್ಟರೆ ರಕ್ಷೋನಿಬರ್ಹಣ ಸಾಮರ್ಥ್ಯವನ್ನು ಪಡೆಯುವುವೋ ಆ ಮಂತ್ರವನ್ನು ತಿಳಿಸು

೮೬-೮೭. ಮಾರ್ಕಂಡೇಯನು ಹೇಳುತ್ತಾನೆ -- ರಾಕ್ಷಸರನ್ನೋಡಿಸುವ ಮಂತ್ರವೇ ಇದು ಕೇಳು! ರಾಜ! ಆದಾವ ಅಸುರರೂ ದಾನವರೂ ಅಶುಚಿ ಯಾದವರಿಗೆ ಪರಮಪವಿತ್ರವಾದ ಈ ಶ್ರಾದ್ಧಕರ್ಮದ ಸಮೀಪವನ್ನು ಹೊಂದುವವ ರಾಗುವರೋ ಅವರನ್ನು ಈ ಎಳ್ಳಿನ ರಾಶಿಯೆಂಬ ಗುಂಡುಗಳು ಹೊಡೆದು ಅಟ್ಟಲಿ (ನಾಶಮಾಡಲಿ) ಯಾವ ಅಪರಿಶುದ್ಧರಾದ ರಾಕ್ಷಸರೂ - ಯಕ್ಷರೂ-ಪಿಶಾಚಗಳೂ ಗುಹ್ಯಕರೂ ಇರುವರೋ ಅವರೆಲ್ಲರೂ ಈ ಮಂತ್ರೋಚ್ಚಾರಣ ಮಾಡುವ ನನ್ನಿಂದ ಸಂಹೃತರಾಗಲಿ

ಈ ಮಂತ್ರವನ್ನು ಪರಮನಿಷ್ಠೆಯಿಂದಾವ ಮನುಷ್ಯನು ಪಠಿಸುತ್ತಾ ದಿಗ್ವಿ ದಿಕ್ಕುಗಳಲ್ಲಿ ಎಳ್ಳುಗಳನ್ನೆರಚುವನೋ, ಆ ಮಂತ್ರಪಠನೆಯಾದ ಜಾಗವನ್ನೂ ಎಳ್ಳೆರ ಚಿದ ಜಾಗವನ್ನೂ ಬಿಟ್ಟು ವಿಘ್ನಕಾರಿ ರಾಕ್ಷಸಾದಿಗಳು ಬಹುದೂರ ಓಡಿಹೋಗು ತ್ತಾರೆ ಕೇಳಯ್ಯ, ವಜ್ರಭೂಪತಿಯೆ! ಎಂದು ಮಾರ್ಕಂಡೇಯರು ಹೇಳಿದರು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಶ್ರಾದ್ಧವಿವರಣೆಯೆಂಬ ಹೆಸರಿನ
ಒಂದುನೂರ ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಚತ್ವಾರಿಂಶದುತ್ತರ ಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಕಸ್ಮಿನ್ದೇಶೇ ನ ಕರ್ತವ್ಯಂ ಶ್ರಾದ್ಧಂ ಭೃಗುಕುಲೋದ್ವಹ ।
ಕಿಂಚ ದೇಯಮದೇಯಂ ಚ ತನ್ಮೇ ಬ್ರೂಹಿ ದ್ವಿಜೋತ್ತಮ ॥ ೧ ॥

॥ ಮಾರ್ಕಂಡೇಯ ಉವಾಚ ॥

ತ್ರಿಶಂಕುಂ ವರ್ಜಯೇದ್ದೇಶಂ ಸರ್ವಂ ದ್ವಾದಶಯೋಜನಂ ।
ಉತ್ತರೇಣ ಪತಂಗಸ್ಯ ದಕ್ಷಿಣೇನ ಚ ಕೈಕಟಂ ॥ ೨ ॥

ದೇಶಸ್ತ್ರೈಶಂಕವೋ ನಾಮ ವಿವರ್ಜ್ಯಃ ಶ್ರಾದ್ಧಕರ್ಮಣಿ ।
ಕಾರಸ್ಕರಾಃ ಕಲಿಂಗಾಶ್ಚ ಸಿಂಧೋರುತ್ತರಮೇವ ಚ ॥ ೩ ॥

---

### ಒಂದುನೂರ ನಲವತ್ತೊಂದನೆಯ ಅಧ್ಯಾಯವು.

೧ ವಜ್ರಮಹಾರಾಜನು ಪುನಃ ಕೇಳುತ್ತಾನೆ — ಎಲೈ ಮಾರ್ಕಂಡೇಯ ಮಹಾಮುನಿಯೆ! ಶ್ರಾದ್ಧವನ್ನು ಯಾವ ದೇಶದಲ್ಲಿ ಮಾಡಬಾರದೆಂಬುದನ್ನೂ, ಶ್ರಾದ್ಧದಲ್ಲಿ ಕೊಡಬೇಕಾದ ಮತ್ತು ಕೊಡಲನರ್ಹವಾದ ಪದಾರ್ಥಗಳು ಯಾವುವೆಂಬುದನ್ನೂ ತಿಳಿಸು

೨-೬ ಮಾರ್ಕಂಡೇಯನು ಹೇಳುತ್ತಾನೆ — ಹನ್ನೆರಡು ಗಾವುದ ಅಳತೆಯವರೆಗೆ ಇರುವ ತ್ರಿಶಂಕುದೇಶದಲ್ಲಿ ಶ್ರಾದ್ಧವನ್ನು ಮಾಡಕೂಡದು ಈ ಪ್ರದೇಶವು ಪತಂಗದೇಶದ ಉತ್ತರಕ್ಕೂ ಕೈಕಟದೇಶದ ದಕ್ಷಿಣಕ್ಕೂ ಇರುವ ಪ್ರದೇಶವು ಈ ಪ್ರದೇಶಕ್ಕೆ ತ್ರಿಶಂಕುದೇಶವೆಂದು ಹೆಸರು. ಈ ಪ್ರದೇಶವು ಸಿಂಧೂನದಿಯ ಉತ್ತರ

ಚಾತುರ್ವರ್ಣ್ಯವಿಹೀನಾಶ್ಚ ಯೇ ಚ ದೇಶಾ ನರಾಧಿಪ ।
ಅನ್ಯೇಷ್ವಪಿ ಚ ದೇಶೇಷು ತದ್ದೇಶಜನದರ್ಶನಂ ॥ ೪ ॥

ವರ್ಜಯೇಚ್ಛ್ರಾದ್ಧಕಾಲೇ ತು ಪತಿತಾನಾಂ ವಿಶೇಷತಃ ।
ರಜಸ್ವಲಾಶ್ಚ ಷಂಡಾಶ್ಚ ಶ್ವಾನಸೂಕರಕುಕ್ಕುಟಾಃ ॥ ೫ ॥

ಯಥಾ ಶ್ರಾದ್ಧಂ ನ ಪಶ್ಯಂತಿ ತಥಾ ಕಾರ್ಯಂ ವಿಜಾನತಾ ।
ರಕ್ಷಾರ್ಥಂ ಚಾಪ್ಯಥೈತೇಷಾಂ ಗುಪ್ತಿಃ ಕಾರ್ಯಾ ನರೇಶ್ವರ ॥ ೬ ॥

ತಿಲಾವಿಕಿರಣಂ ಕಾರ್ಯಂ ಯಾತುಧಾನವಿನಾಶನಂ ।
ಪಿಂಡಾಂಶ್ಚ ಗೋಽಜವಿಪ್ರೇಭ್ಯೋ ದದ್ಯಾದಗ್ನಾವಥ ಕ್ಷಿಪೇತ್ ॥ ೭ ॥

ಮಧ್ಯಮಂ ಪುತ್ರಕಾಮಾ ವಾ ಪತ್ನೀ ಪಿಂಡಂ ಚ ಭಕ್ಷಯೇತ್ ।
ತೀರ್ಥಶ್ರಾದ್ಧೇ ಸದಾ ಪಿಂಡಾನ್ಕ್ಷಿಪೇತ್ತೀರ್ಥೇ ವಿಚಕ್ಷಣಃ ॥ ೮ ॥

---

ವಲ್ಲಿದೆ ಮತ್ತು ಸಿಂಧುವಿನ ಉತ್ತರಪ್ರದೇಶದ ಕಾರಸ್ಕರ ಮತ್ತು ಕಳಿಂಗದೇಶಗಳೂ ಸಹ ಶ್ರಾದ್ಧಮಾಡಲನರ್ಹ ಪ್ರದೇಶಗಳು. ಯಾವ ದೇಶದಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಣಾಶ್ರಮ ಧರ್ಮದ ಜನರಿಲ್ಲವೋ ಅಲ್ಲಿಯೂ ಶ್ರಾದ್ಧವನ್ನು ಮಾಡಬಾರದು ಇತರ ದೇಶಗಳಲ್ಲೂ ಸಹ ಇರುವ ಜನರ (ನಾಸ್ತಿಕರ) ದರ್ಶನವನ್ನು ನಹ ಮಾಡಬಾರದು. ಶ್ರಾದ್ಧಕಾಲದಲ್ಲಿ ಪತಿತರ (ಧರ್ಮವನ್ನು ಬಿಟ್ಟವರ) ದರ್ಶನವನ್ನಂತೂ ಖಂಡಿತವಾಗಿ ಮಾಡಲೇಕೂಡದು. ಮತ್ತು ಶ್ರಾದ್ಧಕಾಲದಲ್ಲಿ ರಜಸ್ವಲೆಯರು, ನಪುಂಸಕರು, ನಾಯಿ, ಹಂದಿ, ಕೋಳಿಗಳು ಸಹ ಶ್ರಾದ್ಧಕರ್ಮವನ್ನು ನೋಡದೆ ಇರುವಂತೆ ಬಹು ಜಾಗರೂಕರಾಗಿ ನೋಡಿಕೊಳ್ಳುತ್ತಿರಬೇಕು ಇವರುಗಳ ದರ್ಶನವಾಗದಂತೆ ಗುಟ್ಟಾದ ಪರಿಶುದ್ಧವಾದ ಸ್ಥಳದಲ್ಲಿ ಶ್ರಾದ್ಧವನ್ನು ಮಾಡಬೇಕು

೭ ರಾಕ್ಷಸ ಬಾಧಾ ನಿವೃತ್ತಿಗಾಗಿ ಎಳ್ಳನ್ನು ಎಲ್ಲ ದಿಕ್ಕುಗಳಿಗೂ ಎರಚಬೇಕು ಉಚ್ಛಿಷ್ಟ ಪಿಂಡವನ್ನು ಕಾಗೆಗೂ, ಪಾರ್ವಣ-ಪಿಂಡಗಳನ್ನು ಪಸು, ಆಡು, ಬ್ರಾಹ್ಮಣರಿಗೂ ಕೊಡಬೇಕು ಅಥವಾ ಅಗ್ನಿಯಲ್ಲಿ ಹಾಕಿ ಹುತಮಾಡಬೇಕು

೮ ಮಕ್ಕಳಿಲ್ಲದವರು ಮಧ್ಯಮ (ಪಿತಾಮಹ) ಪಿಂಡವನ್ನು ತಮ್ಮ ಪತ್ನಿಯರಿಗೆ ಕೊಟ್ಟು ತಿನ್ನಿಸಿದರೆ ಮಕ್ಕಳಾಗುವರು ಬುದ್ಧಿಶಾಲಿಯಾದವನು ಯಾವಾಗಲೂ ತೀರ್ಥಶ್ರಾದ್ಧ ಮಾಡಿದಾಗ ಪಿಂಡಗಳನ್ನು ನೀರಿನಲ್ಲಿ ಬಿಟ್ಟು ಬಿಡಬೇಕು.

**ದಕ್ಷಿಣಾಭಿಮುಖೋ ಭೂತ್ವಾ ಪೈತ್ರೀ ದಿಕ್ಸಾ ಪ್ರಕೀರ್ತಿತಾ ।**
**ಪಿಂಡನಿರ್ವಪಣಂ ಕಾರ್ಯಂ ಕುಶಾಲಾಭೇ ವಿಚಕ್ಷಣೈಃ ॥ ೯ ॥**

**ಕುಶೇಷು ರಾಜನ್ಸರ್ವೇಷು ಪವಿತ್ರೇ ತೇ ಪರೇ ಮತೇ ।**
**ಸೂತ್ರಂ ಚದೇಯಂ ವಾಸೋಽರ್ಥೇ ಕ್ಷೌಮಕಾರ್ಪಾಸ ಸಂಭವಂ ॥ ೧೦ ॥**

**ದಶಾಂ ವಿವರ್ಜಯೇತ್ಪ್ರಾಜ್ಞೋ ಯದ್ಯಪ್ಯಹತ ವಸ್ತ್ರಜಾ ।**
**ಕ್ಷೌಮಕಾರ್ಪಾಸಜಂ ತ್ಯಕ್ತ್ವಾ ಸೂತ್ರಮನ್ಯತ್ರ ದಾಪಯೇತ್ ॥ ೧೧ ॥**

**ಘೃತೇನ ದೀಪೋ ದಾತವ್ಯಸ್ತ್ವಥವಾಪ್ಯೌಷಧೀರಸೈಃ ।**
**ವಸಾಮೇದೋದ್ಭವಂ ದೀಪಂ ಪ್ರಯತ್ನೇನ ವಿವರ್ಜಯೇತ್ । ೧೨ ॥**

**ಚಂದನಾಗರುಕರ್ಪೂರಕುಂಕುಮಾಂಶ್ಚ ಪ್ರದಾಪಯೇತ್ ।**
**ಅಶ್ವಮೇಧಸಮಾ ಹ್ಯೇತೇ ಪಿತೄಣಾಮನುಲೇಪನಾಃ ॥ ೧೩ ॥**

**ನ ದಾತವ್ಯಂ ಮನುಷ್ಯೇಂದ್ರ ಯದನ್ಯಚ್ಚಾನುಲೇಪನಂ ।**
**ಧೂಪೋ ಗುಗ್ಗುಲುಜೋ ದೇಯಸ್ತಥಾ ಚಂದನ ಸಾರಜಂ ॥ ೧೪ ॥**

---

೯-೧೧ ದಕ್ಷಿಣದಿಕ್ಕಿಗೆ ಪೈತ್ರೀದಿಕ್ ಎಂದು ಹೆಸರು ಈ ದಿಕ್ಕಿಗ ಕು-ತು ಕೊಂಡು ಪಿಂಡನಿರ್ವಪಣ ಮಾಡಬೇಕು ದರ್ಭೆ ದೊರೆಯದಿದ್ದರೆ ಈ ದಿಕ್ಕಿಗೆ ಕುಳಿತು ಪಿಂಡಹಾಕಿದರೂ ಸಾಕು ಸಕಲ ಕರ್ಮಗಳಲ್ಲಿಯೂ ದರ್ಭೆಯು ಪರಮ ಶ್ರೇಷ್ಠವಾದುದು. ಬ್ರಾಹ್ಮಣರಿಗೆ ವಸ್ತ್ರದ ಜಾಗದಲ್ಲಿ ಪಟ್ಟೇ ಮಗುಟವನ್ನು ತಗೆದು ಕೊಡಬೇಕು. ಅಥವಾ ಯಜ್ಞೋಪವೀತವನ್ನು ಕೊಡಬಹುದು ಶ್ರಾದ್ಧಮಾಡುವಾಗ ಮಗುಟವನ್ನು ಪಯೋಗಿಸಕೂಡದು

೧೨-೧೩ ತುಪ್ಪದ ದೀಪವನ್ನು ಪಿತೃಗಳ ಮುಂದೆ ಹಚ್ಚಿರಬೇಕು ಅಥವಾ ಒಷಧಿ ರಸಗಳ ದೀಪವಾದರೂ ಸರಿಯೆ ಕೊಬ್ಬಿನ ದೀಪವನ್ನು ಮಾತ್ರ ಹತ್ತಿಸ ಬಾರದು ಬ್ರಾಹ್ಮಣರಿಗೆ ಚಂದನ, ಆಗರು, ಕರ್ಪೂರ, ಕುಂಕುಮಕೇಸರಿ ಇವು ಗಳನ್ನು ಕೊಡಬೇಕು ಈ ಅನುಲೇಪನ (ಗಂಧ) ದಾನದಿಂದ ಅಶ್ವಮೇಧಯಾಗ ಮಾಡಿದ ಫಲವು ಬರುವುದು.

೧೪-೧೫ ಇದು ವಿನಹ ಬೇರೆ ತರಹ ಗಂಧವನ್ನು ಕೊಡಕೂಡದು ಗುಗ್ಗುಲುವಿನಿಂದ ಉತ್ಪತ್ತಿಯಾದ ಧೂಪ ಅಥವಾ ಗಂಧದ ಹುಡಿಯ ಧೂಪ, ಅಗರು

**ಅಗುರುಂ ಚ ಸಕರ್ಪೂರಂ ತುರುಷ್ಕಂ ಚ ಪ್ರದಾಪಯೇತ್ ।**
**ಅತೋಽನ್ಯದಪಿ ಯತ್ಕಿಂಚಿದ್ಧೂಪಾರ್ಥೇ ತದ್ವಿವರ್ಜಯೇತ್ ॥ ೧೫ ॥**

**ಸಘೃತಂ ಗುಗ್ಗುಲಂ ಧೂಪಂ ಧೂಪಾರ್ಥೇ ಯಃ ಪ್ರಯಚ್ಛತಿ ।**
**ಅಶ್ವಮೇಧಫಲಂ ತಸ್ಯ ಧೂಪದಾತುಸ್ತಥೈವ ಚ ॥ ೧೬ ॥**

**ಜಾತ್ಯಶ್ಚ ಸರ್ವಾ ದಾತವ್ಯಾ ಮಲ್ಲಿಕಾ ಶ್ವೇತಯೂಥಿಕಾ ।**
**ಜಲೋದ್ಭವಾನಿ ಸರ್ವಾಣಿ ಕುಸುಮಾನಿ ವಿವರ್ಜಯೇತ್ ॥ ೧೭ ॥**

**ಯಾನಿ ಕಂಟಕಿಜಾತಾನಿ ನ ದೇಯಾನಿ ನರಾಧಿಪ ।**
**ಯಾನಿ ಕಂಟಕಿತಾಗ್ರಾಣಿ ಶುಕ್ಲಾನಿ ಸುರಭೀಣಿ ಚ ॥ ೧೮ ॥**

**ತಾನಿ ರಾಜೇಂದ್ರ ದೇಯಾನಿ ಲತಾಜಾನಿ ವಿಶೇಷತಃ ।**
**ರಕ್ತಾನಿ ಜಲ ಜಾತಾನಿ ತಥಾ ದೇಯಾನಿ ಯಾದವ ॥ ೧೯ ॥**

**ವಿಪುಲಾಂ ಶ್ರಿಯಮಾಪ್ನೋತಿ ಪಿತೄನ್ಪುಷ್ಪೈಃ ಸಮರ್ಚಯನ್ ।**
**ಅಭಕ್ಷ್ಯಾಣಿ ವಿವರ್ಜ್ಯಾನಿ ಶ್ರಾದ್ಧೇ ನಿತ್ಯಮತಂದ್ರಿತೈಃ ॥ ೨೦ ॥**

---

ಧೂಪ ಹಾಲುಮಡ್ಡಿ ಧೂಪಗಳ ಹೊಗೆಯನ್ನು ಹಾಕಬೇಕು. ಇದು ವಿನಾ ಇನ್ನಾವ ವಿಧವಾದ ಧೂಪವನ್ನೂ ಉಪಯೋಗಿಸಕೂಡದು. ಯಾರು ಘೃತ ಸಹಿತ ವಾದ ಗುಗ್ಗುಲು ಧೂಪವನ್ನು ಧೂಪಕ್ಕಾಗಿ ಉಪಯೋಗಿಸುವರೋ ಅಂಥವರು ಅಶ್ವ ಮೇಧಯಾಗಮಾಡಿದ ಫಲವನ್ನು ಹೊಂದುವರು.

೧೭-೨೦ ಮಲ್ಲಿಗೆ ಹೂವಿನ ಮತ್ತು ಬಿಳೀಸೇವಂತಿಗೆ ಹೂವಿನ ಸಂಬಂಧ ವಾದ ಎಲ್ಲಾ ಜಾತಿಯ ಹೂವುಗಳನ್ನು ಪೂಜಿಸಬಹುದು. ನೀರಿನಲ್ಲಿ ಹುಟ್ಟಿದ ಹೂವು ಗಳನ್ನು ಪೂಜಿಸಬಾರದು. ಮುಳ್ಳುಗಿಡದಲ್ಲಿ ಹುಟ್ಟಿದ ಯಾವ ವಿಧವಾದ ಹೂವನ್ನೂ ಪೂಜಿಸಬಾರದು. ಯಾವುವು ಬೆಳ್ಳಗಿವೆಯೋ, ಯಾವ ಹೂಗಳು ಸುವಾಸನೆಯನ್ನು ಬೀರುತ್ತಿರುವುವೋ ಅಂತಹ ಹೂಗಳನ್ನು ಪೂಜಿಸಬೇಕು. ಮತ್ತು ಬಳ್ಳಿಯೊಳಗೆ ಬಿಟ್ಟ ಹೂವುಗಳನ್ನೂ, ನೀರಿನಲ್ಲಿ ಬಿಟ್ಟ ತಾವರೆ ಹೂವನ್ನೂ ಪೂಜಿಸಬಹುದು. ಈರೀತಿ ಯಾರು ಪಿತೃಗಳನ್ನು ಪುಷ್ಪಗಳಿಂದ ಪೂಜಿಸುವರೋ ಅಂತಹವರು ವಿಶೇಷ ವಾದ ಐಶ್ವರ್ಯವನ್ನು ಹೊಂದುತ್ತಾರೆ. ಶ್ರಾದ್ಧದಲ್ಲಿ ತಿನ್ನದೇ ಇರತಕ್ಕ ಪದಾರ್ಥ ಗಳನ್ನು ಈಗ ವಿವರಿಸುವೆವು.

ಭಕ್ಷ್ಯೇಷ್ವಪಿ ನ ದೇಯಾನಿ ಯಾನಿ ತಾನಿ ನಿಬೋಧ ಮೇ ।
ಭೂಸ್ತೃಣಂ ಸುಮುಖಂ ಶಿಗ್ರುಂ ಪಾಲಕ್ಯಂ ತಂಡಲೀಯಕಂ ॥ ೨೧ ॥

ಕೂಷ್ಮಾಂಡಾಲಾಬುವೃಂತಾಕ ಪಿಪ್ಪಲೀ ಮರಿಚಾನಿ ಚ ।
ಶ್ರಾದ್ಧೇಷು ನಾಗರಂ ದೇಯಂ ಲವಣಂ ಸೈಂಧವಂ ತಥಾ ॥ ೨೨ ॥

ಸೈಂಧವವ್ಯತಿರೇಕೇಣ ಲವಣಾನಿ ಚ ದಾಪಯೇತ್ ।
ನಕ್ತಂ ಗೃಹೀತಮುದಕಂ ತಥಾ ಪಲ್ವಲಸಂಭವಂ ॥ ೨೩ ॥

ಶ್ರಾದ್ಧಕಾಲೇ ವಿವರ್ಜ್ಯಂ ಚ ಮಾಹಿಷಂ ಕ್ಷೀರಮೇವ ಚ ।
ರಾಜಮಾಷಾಮಸೂರಾಶ್ಚ ಚಣಕಾಃ ಕೋರದೂಷಕಾಃ ॥ ೨೪ ॥

ವರ್ಜ್ಯಾಶ್ಚಾಭಿಷವೋ ನಿತ್ಯಂ ಶತಪುಷ್ಪಂ ಗವೇಧುಕಂ ।
ಕರಂಭಾಣಿ ಕುಸುಂಭಂ ಚ ಪಟೋಲಂ ಬೃಹತೀ ಫಲಂ ॥ ೨೫ ॥

ಕರೀರಸುರಭೀ ಚೋಭೌ ಪೂತಿಗಂಧೀ ಚ ಯದ್ಭವೇತ್ ।
ಜಂಬೀರಜಫಲಂ ವರ್ಜ್ಯಂ ಕೋವಿದಾರಂ ಚ ಪಾರ್ಥಿವ ॥ ೨೬ ॥

ವಸ್ತುಸಂದರ್ಶನಂ ಶಸ್ತಂ ಶ್ರಾದ್ಧೇ ನಿತ್ಯಮರಿಂದಮ ।
ಕುತಪಸ್ಯ ಚ ಸಾನ್ನಿಧ್ಯಂ ತಥಾ ಕೃಷ್ಣಾಜಿನಸ್ಯ ಚ ॥ ೨೭ ॥

---

೨೧-೨೬ ತಿನ್ನುವ ಪದಾರ್ಥಗಳಲ್ಲಿ ಯಾವುದು ನಿಷಿದ್ಧವಾದುವೆಂಬುದನ್ನು ಈಗ ಹೇಳುತ್ತೇನೆ, ಕೇಳು, ಹುಲ್ಲುಗಳಿಂದ ಬೆಳೆಯುವ ಹೂವುಗೊನೆಸೊಪ್ಪು ಮತ್ತು ಬೆರಕೆಸೊಪ್ಪುಗಳು, ಅವಕ್ಕೆ ಸಂಸ್ಕೃತದಲ್ಲಿ ಭೂಸ್ತೃಣವೇ ಮುಂತಾದ ಹೆಸರುಗಳಿವೆ ಅಂದರೆ ಶ್ರಾದ್ಧದಲ್ಲ ವಿಶೇಷವಾಗಿ ಸೊಪ್ಪುಗಳನ್ನು ಬೇಯಿಸಕೂಡದು ಕುಂಬಳಕಾಯಿ ಸೋರೆಕಾಯಿ, ಬದನೇಕಾಯಿ, ಹಿಪ್ಪಲಿ ಇವುಗಳನ್ನು ಉಪಯೋಗಿಸಕೂಡದು. ಸೈಂಧವಲವಣ ವಿನಹ ಇತರ ವಿಧವಾದ ಉಪ್ಪುಗಳನ್ನು ಉಪಯೋಗಿಸಕೂಡದು ಹಿಂದಿನ ರಾತ್ರಿ ತುಂಬಿಟ್ಟ ನೀರು ಶ್ರಾದ್ಧಕ್ಕೆ ಶ್ರೇಷ್ಠವಿಲ್ಲ ಮತ್ತು ಸಣ್ಣ ಕುಂಟಗಳ ನೀರನ್ನು ತರಕೂಡದು ಮತ್ತು ಎಮ್ಮೆಯ ಹಾಲನ್ನು ಉಪಯೋಗಿಸಬಾರದು ಹಲಸಂದೆ, ಕಡಲೆ, ಹಾರಕ, ಪಸೆಬೆಲ್ಲ, ಕಾಡುಗೋಧಿ, ಕುಸುಬೆ, ಪಡವಲ, ಬಿದಿರು ಕಡಲೆ, ಮುಳ್ಳು ತರಕಾರಿ ಇವುಗಳೆಲ್ಲಾ ಶ್ರಾದ್ಧನಿಷೇಧ ವಸ್ತುಗಳು

೨೭-೪೨ ಎಲೈ ರಾಜನೇ, ಕೇಳು, ಈ ಕೆಳಗೆ ಹೇಳಿರುವ ವಸ್ತುಗಳು ಶ್ರಾದ್ಧಕ್ಕೆ ಅತ್ಯವಶ್ಯಕವಾದವುಗಳು ಅದಾವುವೆನ್ನುವಿಯೋ ? ಕೇಳು, ಹೇಳುತ್ತೇನೆ

ಕೃಷ್ಣಾಜಿನಸ್ಯ ದಾನಂ ಚ ರಜತಸ್ಯ ವಿಶೇಷತಃ ।
ಕೃಷ್ಣಾಜಿನಂ ಸಕುತುಪಂ ಕೃಷ್ಣಾನಿ ಚ ತಿಲಾನಿ ಚ ॥ ೨೮ ॥

ಶ್ರಾದ್ಧಕರ್ಮಣಿ ಶಸ್ತಾನಿ ವಿಟ್ಪತಿಸ್ತತ್ಸುತಸ್ತಥಾ ।
ಸೋಮಃ ಸದೈವ ಮಾಸಾಂತೇ ರವಿಣಾ ಸಹ ಸಂಗತಃ ॥ ೨೯ ॥

ಆಪಶ್ಚೈವೋಷಧೀಶ್ಚೈವ ತದಾ ವಿಶತಿ ಪಾರ್ಥಿವ ।
ಅಮಾಯಾಂತು ಪಯಃ ಪೀತ್ವಾ ಭುಕ್ತ್ವಾ ಚೈವೋಷಧೀಃ ಶುಭಾಃ ॥ ೩೦ ॥

ಪಯಃ ಕ್ಷರಂತಿ ಯದ್ದಿವ್ಯಂ ಗಾವೋಽಮೃತರಸೋಪಮಂ ।
ತತ್ಪವಿತ್ರಂ ಪರಂ ರಾಜನ್ಕಪಿಲಂ ಚೇದ್ವಿಶೇಷತಃ ॥ ೩೧ ॥

ಹವ್ಯೇ ಕವ್ಯೇ ಚ ತದ್ರಾಜನ್ಸೋಮತುಲ್ಯಂ ಪ್ರಕೀರ್ತಿತಂ ।
ತಿಲೈರ್ವ್ರೀಹಿಯವೈರ್ಮಾಷೈರದ್ಭಿರ್ಮೂಲಫಲೇನ ಚ ॥ ೩೨ ॥

ಪ್ರಿಯಂಗುಭಿಸ್ತಥಾ ವನ್ಯೈಃ ಶೃಂಗಾಟಕಫಲೈಃ ಶುಭೈಃ ।
ಗೋಧೂಮೈಶ್ಚೇಕ್ಷುಭಿರ್ಮುದ್ಗೈಃ ಸಚೀನಚಣಕೈಸ್ತಥಾ ॥ ೩೩ ॥

ಶ್ಯಾಮಾಕೈರ್ಹಸ್ತಿಶ್ಯಾಮಾಕೈರ್ಮಧೂಕೈರ್ಹವ್ಯದಾಡಿಮೈಃ ।
ಪನಸೈರ್ನಾರಿಕೇಳೈಶ್ಚ ಖರ್ಜೂರಾಮ್ರಫಲೈಸ್ತಥಾ ॥ ೩೪ ॥

ಆಮ್ರಾತೈಶ್ಚಾಮ್ರನಾರಂಗೈರ್ಬಿಲ್ವೈರ್ದೀರ್ಘೈಶ್ಚ ಮೂಲಕೈಃ ।
ವಿದಾರ್ಯಾನಿರ್ಭರೂಟೈಶ್ಚ ವಿಶೇಷೈಶ್ಚ ವರಾಟಕೈಃ ॥ ೩೫ ॥

---

ಮಧ್ಯಾಹ್ನ (ಕುತುಪ) ಕಾಲ, ಕೃಷ್ಣಾಜಿನದ ಸಾನ್ನಿಧ್ಯ (ಕೃಷ್ಣಾಜಿನ ದಾನ), ಕರಿ ಎಳ್ಳು, ಈ ಮೂರೂ ಶ್ರಾದ್ಧಕ್ಕೆ ಶ್ರೇಷ್ಠವೆಂದು ತಿಳಿಯಬೇಕು. ಅಮಾವಾಸ್ಯೆಯ ದಿನ ಸೂರ್ಯ ಚಂದ್ರರು ಸಂಗಮವಾಗುವುದರಿಂದ ಆ ದಿನ ಶ್ರೇಷ್ಠವೆನಿಸುವುದು ಹಸುಗಳು ಕಾಡಿನಲ್ಲಿರುವ ಓಷಧಿಲತೆಗಳನ್ನು ತಿಂದು ಸ್ವಚ್ಛವಾದ ನೀರನ್ನು ಕುಡಿದು ಅಮೃತರಸಕ್ಕೆ ಸಮನಾದ ಹಾಲನ್ನು ಕೊಡುವುದರಿಂದಲೂ, ಅದರಲ್ಲೂ ಕಪ್ಪಾದ ಹಸು (ಕಪಿಲೆ) ಗಳು ವಿಶೇಷವಾಗಿ ಹಾಲು ಕರೆಯುವುದರಿಂದಲೂ, ಹವ್ಯಕವ್ಯಗಳಲ್ಲಿ ಈ ಹಸುಗಳ ಹಾಲುಗಳು ಪರಮ ಪವಿತ್ರವೆನಿಸಿಕೊಂಡಿರುವುವು ಮತ್ತು ಈ ಹಾಲು ಸೋಮರಸ ತುಲ್ಯವಾದುದು. ಶುಂಠಿ, ಗೋಧಿ, ಕಬ್ಬು, ಕಬ್ಬಿನ ಹಾಲು ಹಸರು, ಉದ್ದು, ನವಣೆ, ಸಾಮೆ, ಜೇನುತುಪ್ಪ, ದಾಳಿಂಬೆಹಣ್ಣು, ಕಿತ್ತಳೇಹಣ್ಣು, ಮುಂತಾದ ನಾನಾವಿಧ ವನವೃಕ್ಷ ಫಲಗಳೂ ಸಹ ಶ್ರಾದ್ಧಕ್ಕೆ ಶ್ರೇಷ್ಠವಾದುವು ಇವುಗಳನ್ನು ಉಪಯೋಗಿಸುವುದರಿಂದ ಪಿತೃದೇವತೆಗಳು ತೃಪ್ತರಾಗುತ್ತಾರೆ

ಪಿಚುಕೈಶ್ಚ ತಥಾ ಕಂದ್ಯೈರ್ಬದರ್ಯೈಃ ಕರಕಂದುಭಿಃ ।
ಪಾಲೇವತೈ ರಾಷ್ಟ್ರಕೈಶ್ಚ ಅಕ್ಷೋಟೈಃ ಪನಸೈಸ್ತಥಾ ॥ ೩೬ ॥
ಕಾಕೋಲ್ಯೈಃ ಕ್ಷೀರಕಾಕೋಲ್ಯೈಸ್ತಥಾ ಪಿಂಡಾಲುಕೈಃ ಶುಭೈಃ ।
ಸುವರ್ಚಲಾಮಧೂಕೈಶ್ಚ ವಾಸ್ತುಕೇನ ಚ ಪಾರ್ಥಿವ ॥ ೩೭ ॥
ಸಿತಾಖಂಡಗುಡೈರ್ಮುಖ್ಯೈಃ ಫಣಿತೇನ ಚ ಸಕ್ತುಭಿಃ ।
ಲಾಜಾಭಿಶ್ಚ ಸದಾನಾಭಿಸ್ತ್ರಪುಸೈರ್ವಾರುಚೈರ್ಭಟೈಃ ॥ ೩೮ ॥
ಸರ್ಷಪಾರಾಜಶಾಕಾಭ್ಯಾಮಿಂಗುದ್ಯೈ ರಾಜಜಂಬುಭಿಃ ।
ಪ್ರಿಯಾಲಾಮಲಕೈರ್ಮುಖ್ಯೈಃ ಫಲ್ಗುಭಿಶ್ಚ ತಿಲೋದಕೈಃ ॥ ೩೯ ॥
ವೇತ್ರಾಂಕುರೈಸ್ತಾಲದಭೈಃ ಶ್ಚುಕ್ರೀಕಾಕ್ಷೀರಿಕಾಧನ್ವೈಃ ।
ಚೋಚೈಃ ಸಮೀಚೈರ್ಲಕುಚೈಸ್ತಥಾನ್ಯೈ ಬೀಜಪೂರಕೈಃ ॥ ೪೦ ॥
ಛತ್ರಾತಿಚ್ಛತ್ರಕ್ಷೀರಾಕೈಃ ಕಲಂಡುಕಕಶೇರುಕೈಃ ।
ಸುಜಾತಕೈಃ ಪದ್ಮಫಲೈರ್ಭಕ್ಷೈರ್ಭೋಜ್ಯೈಃ ಸುಸಂಸ್ಕೃತೈಃ ॥ ೪೧ ॥
ರಾಗಷಾಢವ ಚೋಷ್ಯೈಶ್ಚ ತ್ರಿಜಾತಕಸಮನ್ವಿತೈಃ ।
ದತ್ತೇನ ಮಾಸಂ ಪ್ರೀಯಂತೇ ಶ್ರಾದ್ಧೇನ ಪಿತರೋ ನೃಣಾಂ ॥ ೪೨ ॥
ದ್ವೌಮಾಸೌ ಮತ್ಸ್ಯಮಾಂಸೇನ ತ್ರೀನ್ಮಾಸಾನ್ಹಾರಿಣೇನ ತು ।
ಔರಭ್ರೇಣಾಥಾ ಚತುರಃ ಶಾಕುನೇನ ಚ ಪಂಚ ವೈ ॥ ೪೩ ॥
ಷಣ್ಮಾಸಾಂಛಾಶಿಕೇನಾಪಿ ಸಪ್ತ ಪಾರಿಶತೇನ ಚ ।
ತಥಾಷ್ಟೌ ಛಾಗಮಾಂಸೇನ ಪಯಸಾ ಪಾಯಸೇನ ಚ ॥ ೪೪ ॥
ವಾರಾಹೇಣ ನವೈವಾಹೂ ತಾರವೇಣ ತಥಾ ದಶ ।
ಮಾಸಾನೇಕಾದಶೈವಾಹುರ್ಗವಯೇನ ನರಾಧಿಪ ॥ ೪೫ ॥

---

ಟಿಪ್ಪಣಿ —ಮುಂದ ಹೇಳುವ ಒಂಭತ್ತು ಶ್ಲೋಕಗಳೂ ಶ್ರಾದ್ಧದಲ್ಲಿ ಆಯಾಯ ತಿಂಗಳಲ್ಲಿ ಇಂತಿಂತಹ ಪ್ರಾಣಿಗಳ ಮಾಂಸವನ್ನು ಪಕ್ವಮಾಡಿ ಒಡಿಸಬೇಕೆಂದು ಹೇಳಿರುತ್ತವೆ ನಾವು ೧೪೦ ನೆಯ ಅಧ್ಯಾಯದಲ್ಲಿ ಟಿಪ್ಪಣಿಯನ್ನು ಒರೆದು ಆ ಟಿಪ್ಪಣಿಯಲ್ಲಿ ಕಲಿವರ್ಜ್ಯ ಪ್ರಕರಣದಲ್ಲಿ ಮಾಂಸಶ್ರಾದ್ಧವು ನಿಷೇಧವೆಂದು ಬರೆದಿರುವುದನ್ನು ಈಗಾಗಲೇ ವಾಚಕರು ಓದಿರುವರು ಆದ್ದರಿಂದ ಮಾಂಸಾಹಾರವನ್ನು ಕುರಿತು ಒರೆದಿರುವ ಮುಂದಿನ ಒಂಭತ್ತು ಶ್ಲೋಕಗಳಿಗೂ ಕನ್ನಡದಲ್ಲಿ ಅರ್ಥವನ್ನು ಒರೆಯದ ಬಿಟ್ಟುಬಿಡುತ್ತೇವೆ ಆದರ ಪಾರಾಯಣ ಮಾಡುವ ಪುಣ್ಯಾತ್ಮರ ಪ್ರಯೋ

ಸಂವತ್ಸರಂ ತು ಗವ್ಯೇನ ಪಯಸಾ ಪಾಯಸೇನ ಚ ।
ಪಯೋವಿಕಾರೈಶ್ಚ ತಥಾ ಹೃದ್ಯೈಶ್ಚ ಮನುಜೇಶ್ವರ ॥ ೪೬ ॥

ಪಾನಕೈಶ್ಚ ತಥಾ ಹೃದ್ಯೈಸ್ತ್ರಿಸುಗಂಧೈಃ ಸುಶೀಲತೈಃ ।
ವಾಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥ ೪೭ ॥

॥ ವಜ್ರ ಉವಾಚ ॥

ವಾಧ್ರೀಣಸಮಹಂ ಬ್ರಹ್ಮಂಚ್ಛ್ರೋತುಮಿಚ್ಛಾಮಿ ತತ್ತ್ವತಃ ।
ಯಸ್ಯ ಮಾಂಸೇನ ಕಥಿತಾ ತೃಪ್ತಿರ್ದ್ವಾದಶ ವಾರ್ಷಿಕೀ ॥ ೪೮ ॥

॥ ಮಾರ್ಕಂಡೇಯ ಉವಾಚ ॥

ತ್ರಿಪಿಬಂತ್ವಿಂದ್ರಿಯಕ್ಷೀಣಂ ಯೂಥಸ್ಯಾಗ್ರಸರಂ ತಥಾ ।
ರಕ್ತವರ್ಣೇನ ರಾಜೇಂದ್ರ ಛಾಗಂ ವಾಧ್ರೀಣಸಂ ವಿದುಃ ॥ ೪೯ ॥

ಕಾಲಶಾಕಂ ಮಹಾಶಲ್ಕಂ ಖಡ್ಗಮಾಂಸಂ ತಥೈವ ಚ ।
ಆನಂತ್ಯಾಯ ಭವೇದ್ದತ್ತಂ ಸರ್ವಂ ಚ ಮಧುಸಂಯುತಂ ॥ ೫೦ ॥

ಖಡ್ಗಾ ವಿಷಾಣೈಃ ಪರಿವರ್ಜಿತಾ ಯೇ
ತೇಷಾಂ ಹಿ ಮಾಂಸೇನ ಭವತ್ಯನಂತಂ ।
ಶ್ರಾದ್ಧಂ ಮಹಾರಾಜ ತತಃ ಪ್ರದೇಯಂ
ಖಡ್ಗಸ್ಯ ಮಾಂಸೇನ ಹಿತಾಯ ತೇಷಾಂ ॥ ೫೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರಾದ್ಧಹವಿರ್ವರ್ಣನೋ ನಾಮೈಕ ಚತ್ವಾರಿಂಶ
ದುತ್ತರ ಶತತಮೋಽಧ್ಯಾಯಃ

---

ಜನಕ್ಕೋಸ್ಕರ ಸಂಸ್ಕೃತ ಮೂಲ ಗ್ರಂಥದಲ್ಲಿರುವ ಶ್ಲೋಕಗಳನ್ನು ಮಾತ್ರ ಬಿಡದ ಪೂರ್ತಿಯಾಗಿ ಒರೆದಿರುತ್ತೇವೆ

೪೩-೫೧

ಎಂಬಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದ ರೂಪವಾದ ಶ್ರಾದ್ಧಹವಿರ್ವರ್ಣನೆ ಎಂಬ ಹೆಸರಿನ
ಒಂದುನೂರ ನಲವತ್ತೊಂದನೆಯ ಅಧ್ಯಾಯವು
ಮುಗಿದುದು

|| ಶ್ರೀಃ ||

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## || ದ್ವಿಚತ್ವಾರಿಂಶದುತ್ತರ ಶತತಮೋಽಧ್ಯಾಯಃ ||

---

|| ವಜ್ರ ಉವಾಚ ||

ಶ್ರಾದ್ಧಕಾಲಂ ಸಮಾಚಕ್ಷ್ವ ಸರ್ವಧರ್ಮಭೃತಾಂ ವರ ।
ಕಸ್ಮಿನ್ಕಾಲೇ ಕೃತೇ ಶ್ರಾದ್ಧೇ ಪ್ರೀಯಂತೇ ಪಿತರೋ ನೃಣಾಂ || ೧ ||

|| ಮಾರ್ಕಂಡೇಯ ಉವಾಚ ||

ಶ್ರಾದ್ಧಕಾಲಸ್ತ್ವಮಾವಾಸ್ಯಾಂ ನಿತ್ಯಂ ಪಾರ್ಥಿವ ಸತ್ತಮ ।
ಪೌರ್ಣಮಾಸೀ ತಥಾ ಮಾಘೇ ಶ್ರಾವಣೇ ಚ ನರೋತ್ತಮ || ೨ ||

ಪ್ರೋಷ್ಠಪದ್ಯಾಮತೀತಾಯಾಂ ತಥಾ ಕೃಷ್ಣತ್ರಯೋದಶೀ ।
ಆಗ್ರಹಾಯಣ್ಯತೀತಾಯಾಂ ಕೃಷ್ಣಾಸ್ತಿಸ್ರೋಽಷ್ಟಕಾಸ್ತಥಾ || ೩ ||

---

### ಒಂದು ನಲವತ್ತೆರಡನೇ ಅಧ್ಯಾಯವು.

೧ ವಜ್ರ ಮಹಾರಾಜನು ಪುನಃ ಕೇಳುತ್ತಾನೆ —ಸಕಲ ಧರ್ಮಗಳನ್ನೂ ಬಲ್ಲ ಎಲೈ ಮಾರ್ಕಂಡೇಯನೇ! ಯಾವ ಕಾಲದಲ್ಲಿ ಶ್ರಾದ್ಧ ಮಾಡೋಣದರಿಂದ ಮನುಷ್ಯರ ಪಿತೃಗಳು ತೃಪ್ತಿಹೊಂದುತ್ತಾರೋ ಅಂತಹ ಶ್ರಾದ್ಧಕಾಲವನ್ನು ನನಗೆ ತಿಳಿಸು

೨-೩ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರಭೂಪಾಲಕನೆ! ಅಷ್ಟಕಾಶ್ರಾದ್ಧದ ವಿಷಯವನ್ನು ಮೊದಲು ತಿಳಿಸುತ್ತೇನೆ ಕೇಳು ಪ್ರತಿ ಅಮಾವಾಸ್ಯೆಯಲ್ಲೂ ಶ್ರಾದ್ಧಮಾಡತಕ್ಕದ್ದು ಮಾಘಮಾಸ-ಶ್ರಾವಣಮಾಸಗಳ ಪೂರ್ಣಿಮೆಯ ದಿವಸಗಳಲ್ಲಿಯೂ, ಭಾದ್ರಪದಮಾಸ ಮೊದಲ್ಗೊಂಡು ಪ್ರತಿ ತಿಂಗಳ ಬಹುಳ ತ್ರಯೋ

ಶಾಕೈಶ್ಚ ಪ್ರಥಮಂ ಕಾರ್ಯಾ ಮಾಂಸೈಶ್ಚ ತದನಂತರಂ ।
ತೃತೀಯಾ ಚ ತಥಾಽಪೂಪೈರ್ನಿತ್ಯಮೇವ ವಿಜಾನತಾ　　॥ ೪ ॥

ಅನ್ವಷ್ಟಕಾಸು ಚ ಸ್ತ್ರೀಣಾಂ ಶ್ರಾದ್ಧಂ ಕಾರ್ಯಂ ತಥೈವ ಚ ।
ಅಷ್ಟಕಾ ವಿಧಿನಾ ಹುತ್ವಾ ಕ್ರಮೇಣೈತಾಸ್ತು ಪಂಚಕಾಃ　　॥ ೫ ॥

ಮಾತ್ರೇ ರಾಜನ್ಪಿತಾಮಹ್ಯೈ ಶ್ರಾದ್ಧಂ ಕಾರ್ಯಂ ಯಥಾವಿಧಿ ।
ತಥೈವ ಪ್ರಪಿತಾಮಹ್ಯೈ ವಿಶ್ವೇದೇವಪುರಸ್ಸರಂ　　॥ ೬ ॥

ಪಿಂಡನಿರ್ವಪಣಂ ಕಾರ್ಯಂ ತಾಸಾಂ ಚ ಪಿತೃವನ್ನೃಪ ।
ಭುಕ್ತವತ್ಸು ಚ ವಿಪ್ರೇಷು ತತ್ರ ಕರ್ಮ ನಿಬೋಧ ಮೇ　　॥ ೭ ॥

---

ನಿ ಮೂರರಲ್ಲೂ, ಮಾರ್ಗಶಿರ ಆರಂಭಿಸಿ ಮೂರು ತಿಂಗಳ ಕಾಲ ಬಹುಳ ತ್ರಯೋದಶಿಯಲ್ಲೂ ಶ್ರಾದ್ಧವನ್ನು ಮಾಡಬೇಕು. ಇವಕ್ಕೆ ಅಷ್ಟಕಾಶ್ರಾದ್ಧ (ಎಂಟು ತಿಥಿ) ಎಂದು ಹೆಸರು.

೪-೫　ಈ ಶ್ರಾದ್ಧಗಳಲ್ಲಿ ಮೊದಲನೆಯ ಶ್ರಾದ್ಧಕ್ಕೆ ಶಾಕಗಳನ್ನೂ, ಎರಡನೆಯ ಶ್ರಾದ್ಧಕ್ಕೆ ಉದ್ದಿನ ಒಡೆಗಳನ್ನೂ, ಮೂರನೆಯದಕ್ಕೆ ಅತಿರಸ-ಸಿಕೇನುಂಡೆ ಮುಂತಾದ ಅಪೂಪಗಳನ್ನೂ ಮಾಡಬೇಕು ಅನ್ವಷ್ಟಕಾಶ್ರಾದ್ಧಗಳಲ್ಲಿ ಸ್ತ್ರೀಯರಿಗೂ ನಹ ಶ್ರಾದ್ಧವನ್ನು ಮಾಡಬೇಕು ಅಷ್ಟಕಾಶ್ರಾದ್ಧಗಳಲ್ಲಿ ಮೇಲೆ ವಿವರಿಸಿದ ಮೂರು ಮತ್ತು ಉಳಿದ ಐದು ಶ್ರಾದ್ಧಗಳಲ್ಲಿಯೂ ಅಷ್ಟಕಾವಿಧಿಯಿಂದ ಹೋಮವನ್ನು ಮಾಡಬೇಕು

೬-೭　ಹೆಂಗಸರ ಶ್ರಾದ್ಧವನ್ನು ಮಾಡಬೇಕಾದರೆ ವಿಶ್ವೇದೇವ ಪುರಸ್ಸರವಾಗಿ ಮಾತೃ-ಪಿತಾಮಹಿ-ಪ್ರಪಿತಾಮಹಿಯರ (ತಾಯಿ-ತಂದೆಯ ತಾಯಿ-ತಾತನ ತಾಯಿ) ಹೆಸರನ್ನುಚ್ಚರಿಸಿ ಶ್ರಾದ್ಧಮಾಡಬೇಕು ಈ ಮೂರು ವರ್ಗದ ತಾಯಿಯರಿಗೂ ಪಿತೃಶ್ರಾದ್ಧದಂತೆಯೇ ಪಿಂಡವನ್ನು ಹಾಕಬೇಕು. ಹೀಗೆಂದು ಹೇಳುತ್ತಿರುವಲ್ಲಿ ಮಧ್ಯೆ ವಜ್ರರಾಜನು ಬಾಯಿಹಾಕಿ ಬ್ರಾಹ್ಮಣ ಭೋಜನಾನಂತರ ಮಾಡುವ ಕಾರ್ಯವೇನೆನ್ನಲು ಮಾರ್ಕಂಡೇಯನು ಆ ವಿಚಾರವನ್ನು ತಿಳಿಸುತ್ತಾನೆ

ಪ್ರಾದೇಶಮಾತ್ರಾ ರಾಜೇಂದ್ರ ಚತುರಂಗುಲಮಾಯತಾಃ ।
ತಾವದೇವ ಸಮುತ್ಸೇಧಾಃ ಷಟ್ಕರ್ಷೂಸ್ತತ್ರ ಕಾರಯೇತ್ ॥ ೮ ॥

ಪ್ರತ್ಯೇಕಕರ್ಷೂಮೂಲೇ ತು ಪರಿಸ್ತೀರ್ಯ ಹುತಾಶನಂ ।
ಅಗ್ನೀಷೋಮಯಮಾನಾಂ ಚ ಯಾಗಂ ಕೃತ್ವಾ ಯಥಾ ಪುರಾ ॥ ೯ ॥

ಕರ್ಷೂತ್ರಿತಯಮೂಲೇ ತು ಪುರುಷಾಣಾಂ ತು ಕಾರಯೇತ್ ।
ಪಿಂಡನಿರ್ವಪಣಂ ಪ್ರಾಗ್ವದೇಕೈಕಸ್ಮಿನ್ಯಥಾವಿಧಿ ॥ ೧೦ ॥

ಕರ್ಷೂಭಿಸ್ತ್ರಿತಯಂ ತಚ್ಚ ಕ್ಷೀರಾನ್ನಾದ್ಭಿಃ ಪ್ರಪೂರಯೇತ್ ।
ಕರ್ಷೂತ್ರಿತಯಮೂಲೇ ತು ಸ್ತ್ರೀಣಾಂ ನಿರ್ವಪಣಂ ಭವೇತ್ ॥ ೧೧ ॥

ದಧ್ನಾ ಮಾಂಸೇನ ಪಯಸಾ ಕರ್ಷೂಣಾಂ ಚೈವ ಪೂರಣಂ ।
ಅನ್ನೋದಕವಿಮಿಶ್ರೇಣ ಕಾರ್ಯಂ ಮನುಜ ಪುಂಗವ ॥ ೧೨ ॥

೮-೧೨ ಒಂದು ಚೋಟು ಉದ್ದ, ನಾಲ್ಕಂಗುಲ ಅಗಲವಾದ ಪರಿಸ್ತರಣ ಪ್ರದೇಶದಲ್ಲಿ ಅಷ್ಟೇ ಎತ್ತರವಾಗಿ ಬೆರಣಿಗಳ ಬೆಂಕಿಯನ್ನು ಆರು ಕಡೆ ಹಾಕಬೇಕು (ಕರ್ಷೂ ವಾರ್ತಾ ಕರೀಷಾಗ್ನಿಃ ಎಂದು ಶಬ್ದಾರ್ಥ ಕಲ್ಪದ್ರುಮದಲ್ಲಿ ಹೇಳಿರುವುದರಿಂದ ಕರ್ಷೂಃ ಅಂದರ ಬೆರಣಿಯಿಂದ ಆದ ಬೆಂಕಿ ಎಂದು ಹೆಸರು ) ಹೀಗೆ ಮಾಡಿದ ಮೇಲೆ ಪ್ರತ್ಯೇಕ ಪ್ರತ್ಯೇಕವಾಗಿ ಇರುವ ಆ ಆರು ಬೆಂಕಿಯ ಬುಡದಲ್ಲಿಯೂ ಯಜ್ಞೇಶ್ವರನಿಗೆ ಪರಿಸ್ತರಣ ಹಾಕಬೇಕು ಬಳಿಕ ಆ ಮೊದಲ ಕರ್ಷೂತ್ರಿತಯ (ಮೂರು ಕೆಂಡದ ರಾಶಿಯ) ದಲ್ಲಿಯೂ, ಅಗ್ನಿ, ಇಂದ್ರ, ಯಮ ಈ ಮೂವರಿಗೂ ಯಥಾವಿಧಿಯಾಗಿ ಅಗ್ನಯೇಸ್ವಾಹಾ-ಇಂದ್ರಾಯಸ್ವಾಹಾ-ಯಮಾಯ ಸ್ವಾಹಾ ಎಂದು ಮೂರು ಆಹುತಿಗಳನ್ನು ಕೊಡಬೇಕು ಉಳಿದ ಮೂರು ಅಗ್ನಿಗಳಲ್ಲಿ ಗಂಡಸರಿಗೋಸ್ಕರ ಆಹುತಿಯನ್ನು ಕೊಡಬೇಕು ಈ ರೀತಿ ಹೋಮ ಮಾಡಿದ ಮೇಲೆ ಒಂದೊಂದು ಅಗ್ನಿಯ ಮುಂದುಗಡೆಯಲ್ಲೂ ಕ್ರಮವಾಗಿ ಪಿಂಡನಿರ್ವಪಣವನ್ನು ಮಾಡಿದ ಬಳಿಕ ಅವರ ಮುಂದೆ ಅನ್ನ-ನೀರು-ಭಕ್ಷ್ಯಗಳನ್ನಿಟ್ಟು ನಿಮಗೆ ತೃಪ್ತಿಯಾಗಲೆಂದು ನಿವೇದನ ಮಾಡಬೇಕು ಈ ರೀತಿಯಾಗಿ ಬ್ರಹ್ಮನು ಶ್ರಾದ್ಧಕಾಲಗಳನ್ನು ವಿಧಿಸಿರುವನು ಈ ರೀತಿ ಅಷ್ಟಕಾಶ್ರಾದ್ಧಾದಿಗಳನ್ನು ಮಾಡದಿದ್ದವನಿಗೆ ಪರಗತಿ ಇಲ್ಲ ಮುಂದೆ ವೃದ್ಧಿ (ನಾಂದೀ) ಶ್ರಾದ್ಧ ವಿಚಾರವನ್ನು ತಿಳಿಸುತ್ತೇನೆ, ಕೇಳು ಯಾವ ಮನುಷ್ಯನು

ಭವಂತೀಭ್ಯೋ ಭವತ್ಯೇತದಕ್ಷಯಂ ಪರಿಕೀರ್ತಿತಂ ।
ಏತಾನಿ ಶ್ರಾದ್ಧಕಾಲಾನಿ ನಿತ್ಯಾನ್ಯಾಹ ಪ್ರಜಾಪತಿಃ ॥ ೧೩ ॥

ಶ್ರಾದ್ಧಮೇತೇಷ್ವಕುರ್ವಾಣೋ ನರಕಂ ಪ್ರತಿಪದ್ಯತೇ ।
ವೃದ್ಧೌ ಶ್ರಾದ್ಧಂ ನರಃ ಕುರ್ವನ್ನಿತ್ಯಂ ವೃದ್ಧಿಮುಪಾಶ್ನುತೇ ॥ ೧೪ ॥

ವೃದ್ಧೌ ಸಮರ್ಚಯೇದ್ವಿದ್ವಾನ್ನಿತ್ಯಂ ನಾಂದೀಮುಖಾನ್ಪಿತೄನ್ ।
ವೃದ್ಧಿಶ್ರಾದ್ಧೇಷು ಕರ್ತವ್ಯಾಸ್ತಿಲಸ್ಥಾನೇ ಯವಾಸ್ತಥಾ ॥ ೧೫ ॥

ಕರ್ಕಂಧುದಧಿಸಂಮಿಶ್ರಾಂಸ್ತಥಾ ಪಿಂಡಾಂಶ್ಚ ನಿರ್ವಪೇತ್ ।
ಅಚ್ಛಿನ್ನನಾಭ್ಯಾಂ ಕರ್ತವ್ಯಂ ಶ್ರಾದ್ಧಂ ವೈ ಪುತ್ರಜನ್ಮನಿ ॥ ೧೬ ॥

ಆಶೌಚೋಪರಮೋ ಕಾರ್ಯಮಥವಾಪಿ ನರಾಧಿಪ ।
ವಿವಾಹ ದಿವಸೇ ಶ್ರಾದ್ಧಂ ತಥಾ ಕಾರ್ಯಂ ವಿಚಕ್ಷಣೈಃ ॥ ೧೭ ॥

ವೃದ್ಧಿಶ್ರಾದ್ಧಂ ವಿಧಾನೇನ ಚಂದ್ರೇ ಜನ್ಮರ್ಕ್ಷಮಾಶ್ರಿತೇ ।
ಶ್ರಾದ್ಧಂ ಪ್ರಯತ್ನಾತ್ಕರ್ತವ್ಯಂ ಭೂತಿಕಾಮೇನ ಪಾರ್ಥಿವ ॥ ೧೮ ॥

ಉತ್ತರಾಯನಾಚ್ಛ್ರಾದ್ಧಂ ಶ್ರೇಷ್ಠಂ ಸ್ಯಾದ್ದಕ್ಷಿಣಾಯನೇ ।
ಚಾತುರ್ಮಾಸ್ಯಂ ಚ ತತ್ರಾಪಿ ಪ್ರಸುಪ್ತೇ ಕೇಶವೇ ಹಿತಂ ॥ ೧೯ ॥

---

ಮದುವೆ, ಮುಂಜ ಮುಂತಾದ ಶುಭ ಸಮಯಗಳಲ್ಲಿ ವೃದ್ಧಿ ಅಥವಾ ನಾಂದೀಶೋಭನ ದೇವತೆಗಳ ಪ್ರೀತಿಗಾಗಿ ಶ್ರಾದ್ಧಮಾಡುವನೋ ಅಂತಹವನು ಅಭಿವೃದ್ಧಿಯನ್ನು ಹೊಂದುತ್ತಾನೆ

೧೫-೨೮ ಈ ವಿಧವಾದ ನಾಂದೀಶ್ರಾದ್ಧದಲ್ಲಿ ನಾಂದೀಮುಖರಾದ ಪಿತೃಗಳನ್ನು ಪೂಜಿಸಬೇಕು ಈ ವೃದ್ಧಿಶ್ರಾದ್ಧದಲ್ಲಿ ಎಳ್ಳಿಗೆ ಬದಲಾಗಿ ಮಂತ್ರಾಕ್ಷತೆಯನ್ನು ಉಪಯೋಗಿಸಬೇಕು ಯಲಚೀಹಣ್ಣನ್ನು ಮೊಸರಿನಲ್ಲಿ ಕಲಸಿ ಪಿಂಡಮಾಡಿ ಅದನ್ನು ಹಾಕಬೇಕು ಮಗನು ಹುಟ್ಟಿದಾಗ ಮಗುವಿನ ಹೊಕ್ಕಳು ಕುಯ್ಯುವುದರೊಳಗಾಗಿ ಈ ನಾಂದೀಶ್ರಾದ್ಧವನ್ನು ಮಾಡಬೇಕು ಅಥವಾ ಜಾತಾಶೌಚ (ವೃದ್ಧಿ-ಪುರುಡು) ಕಳೆದ ಮೇಲೆಯಾದರೂ ಮಾಡಬಹುದು ಇದೇ ಮೇರೆ ಮದುವೆಯ ದಿವಸದಲ್ಲೂ ಈ ನಾಂದೀಶ್ರಾದ್ಧವನ್ನು ಮಾಡಬೇಕು ಮತ್ತು ಚಂದ್ರನು ಜನ್ಮನಕ್ಷತ್ರಕ್ಕೆ ಬಂದ

ಪ್ರೋಕ್ತಪಕ್ಷಾದ್ಯಪರಂ ಪಕ್ಷಂ ತಥಾಪಿ ಚ ವಿಶೇಷವತ್ ।
ಪಂಚಮ್ಯೂರ್ಧ್ವಂ ಚ ತತ್ರಾಪಿ ದಶಮ್ಯೂರ್ಧ್ವಂ ತತೋಽಪ್ಯತಿ ॥ ೨೦ ॥

ಮಘಾಯುತಾ ಚ ತತ್ರಾಪಿ ಶಸ್ತಾ ರಾಜಂಸ್ತ್ರಯೋದಶೀ ।
ತತ್ರಾಕ್ಷಯ್ಯಂ ಭವೇಚ್ಛ್ರಾದ್ಧಂ ಮಧುನಾ ಪಾಯಸೇನ ಚ ॥ ೨೧ ॥

ಸರ್ವಸ್ವೇನಾಪಿ ಕರ್ತವ್ಯಂ ಶ್ರಾದ್ಧಮತ್ರ ನರಾಧಿಪ ।
ಪರಾನ್ನಭೋಜೀ ತ್ವಪಚಃ ಶ್ರಾದ್ಧಮತ್ರ ನ ಕಾರಯೇತ್ ॥ ೨೨ ॥

ಯಸ್ತು ಶ್ರಾದ್ಧಂ ಸದಾ ಕುರ್ಯಾತ್ಸೋಽಶ್ವಮೇಧಫಲಂ ಲಭೇತ್ ।
ನಿದ್ರಾಂ ತ್ಯಜತಿ ಸರ್ವಾತ್ಮಾ ಯಸ್ಮಿನ್ಕಾಲೇ ಜನಾರ್ದನಃ ॥ ೨೩ ॥

ತತ್ರ ಶ್ರಾದ್ಧಮಥಾನಂತ್ಯಂ ನಾತ್ರ ಕಾರ್ಯಾ ವಿಚಾರಣಾ ।
ಶ್ರಾದ್ಧಂ ಸಂಕ್ರಮಣೇ ಭಾನೋಃ ಕರ್ತವ್ಯಂ ಪೃಥಿವೀಪತೇ ॥ ೨೪ ॥

ಸಮಯದಲ್ಲೂ ಈ ವೃದ್ಧಿಶ್ರಾದ್ಧವನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು. ಈ ರೀತಿ ಮಾಡಿದವನು ಐಶ್ವರ್ಯವನ್ನು ಹೊಂದುತ್ತಾನೆ. ಉತ್ತರಾಯಣಕ್ಕಿಂತ ದಕ್ಷಿಣಾಯನದಲ್ಲಿ ಶ್ರಾದ್ಧಮಾಡುವುದು ಉತ್ತಮವಾದುದು. ಅದರಲ್ಲೂ ಚಾತುರ್ಮಾಸ್ಯ ಕಾಲದಲ್ಲಿ (ವಿಷ್ಣು ಮಲಗಿದ್ದ ಕಾಲದಲ್ಲಿ) ಶ್ರಾದ್ಧವನ್ನು ಮಾಡಬೇಕು. ಅದರಲ್ಲೂ ಭಾದ್ರಪದ ಬಹುಳ ಪಾಡ್ಯದಿಂದ ಅಮಾವಾಸ್ಯಾ ಪರ್ಯಂತರವೂ ಅಪರಪಕ್ಷದಲ್ಲಿ ಹದಿನೈದು ದಿವಸಮಾಡುವ ಶ್ರಾದ್ಧವು ಪಿತೃಗಳಿಗೆ ಮುಕ್ತಿಯನ್ನು ಕೊಡತಕ್ಕದಾಗಿರುವುದು. ಆದರಲ್ಲೂ ಪಂಚಮಿಯಿಂದಾಚೆ, ಹಾಗೂ ದಶಮಿಯಿಂದಾಚೆಗೆ ಅಮಾವಾಸ್ಯೆವರೆಗೆ ಶ್ರಾದ್ಧವು ಅತಿ ವಿಶೇಷವಾದುದು. ಅದರಲ್ಲೂ ಮಘಾನಕ್ಷತ್ರದಿಂದ ಕೂಡಿದ ತ್ರಯೋದಶಿಯಂತೂ ಅಕ್ಷಯ್ಯ ಪುಣ್ಯಲೋಕವನ್ನು ಕೊಡತಕ್ಕದಾಗಿರುವುದು. ಜೇನುತುಪ್ಪ, ಪಾಯಸ ಇನ್ನೂ ಬೇಕು ಬೇಕಾದ ಶ್ರಾದ್ಧೋಚಿತ ಪದಾರ್ಥಗಳಿಂದ ಆ ದಿನ ಶ್ರಾದ್ಧವನ್ನು ಮಾಡಬೇಕು. ಆದರೆ ಈ ದಿವಸದ ಅಪರಪಕ್ಷ ಸಕೃನ್ಮಹಾಲಯ ಶ್ರಾದ್ಧವನ್ನು ಪರಾನ್ನಭೋಜನಮಾಡುವವನೂ, ಶ್ವಪಚನೂ (ಆಚಾರಹೀನ ಅಥವಾ ಕ್ರಿಯಾಭ್ರಷ್ಟ) ಮಾಡಕೂಡದು. ಈರೀತಿ ಮೇಲೆ ಹೇಳಿದಂತೆ ಯಾವನು ಪರಿಶುದ್ಧ ಮನಸ್ಸಿನಿಂದ ಶ್ರಾದ್ಧವನ್ನು ಸರ್ವದಾ ಮಾಡುವನೋ ಅವನು ಅಶ್ವಮೇಧ ಯಾಗಮಾಡಿದ ಫಲವನ್ನು ನಿಸ್ಸಂಶಯವಾಗಿ ಹೊಂದುವನು. ಪ್ರಬೋಧಾನಂತರದಲ್ಲಿ

ವಿಷುವದ್ದ್ವಿತಯುಂ ತತ್ರ ಆಯನೇ ದ್ವೇ ವಿಶೇಷತಃ ।
ವ್ಯತೀಪಾತೇ ತಥಾ ಶ್ರಾದ್ಧಂ ಜ್ಞೇಯಂ ಬಹುಫಲಂ ನೃಪ ॥ ೧೫ ॥

ಅಕ್ಷಯ್ಯಂ ಚ ತಥಾ ಶ್ರಾದ್ಧಂ ವಿಜ್ಞೇಯಂ ರಾಹುದರ್ಶನೇ ।
ವ್ರೀಹಿಪಾಕೇ ಚ ಕರ್ತವ್ಯಂ ಯವಪಾಕೇ ತಥೈವ ಚ ॥ ೧೬ ॥

ನ ತಾನದ್ಯುರ್ಮಹಾರಾಜ ವಿನಾ ಶ್ರಾದ್ಧಂ ಕಥಂಚನ ।
ಆಶ್ವಿನಸ್ಯಾವರೇ ಪಕ್ಷೇ ಪ್ರಥಮೋ ಕಾರ್ತಿಕಸ್ಯ ಚ ॥ ೧೭ ॥

ಪೂರ್ವಾಹ್ಣೇ ಶುಕ್ಲಪಕ್ಷಸ್ಯ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ।
ಅಪರಾಹ್ಣೇ ತಥಾ ಕಾರ್ಯಂ ಕೃಷ್ಣಪಕ್ಷೇ ನರಾಧಿಪ ॥ ೧೮ ॥

ಸಂಧ್ಯಯೋರ್ವರ್ಜಯೇಚ್ಛ್ರಾದ್ಧಂ ತತ್ರ ರಾತ್ರೌ ನರೇಶ್ವರ ।
ರಾತ್ರಾವಪಿ ಚ ಕರ್ತವ್ಯಂ ಯದಾ ಸ್ಯಾದ್ರಾಹುದರ್ಶನಂ ॥ ೧೯ ॥

(ಮತ್ತು ಪ್ರಸಿದ್ಧಿಯಿಂದದ್ದು ಬೇಕ) ಶ್ರಾದ್ಧ ಮಾಡುವುದು ಅನಂತ ಪುಣ್ಯಲೋಕವನ್ನು ಕೊಡಬಲ್ಲುದು. ಸಂಕ್ರಾಂತಿ (ಸೂರ್ಯ ಸಂಕ್ರಮಣ) ಕಾಲಗಳಲ್ಲಿ ಮಾಡುವ ವಿಷುವತ್ಪುಣ್ಯ ಕಾಲಗಳ (ದಕ್ಷಿಣಾಯನ-ಉತ್ತರಾಯನ ಸಂಕ್ರಮಣ) ಶ್ರಾದ್ಧವೂ ವ್ಯತೀಪಾತ ದಿವಸಗಳಲ್ಲಿ ಮಾಡುವ ಶ್ರಾದ್ಧವೂ ಸಹ ಬಹು ವಿಧವಾದ ಶುಭಫಲಗಳನ್ನು ಕೊಡತಕ್ಕುದಾಗಿರುವುದು. ಗ್ರಹಣ ಕಾಲಗಳಲ್ಲೂ, ಭತ್ತ ಮನಗೆ ಬಂದಾಗಲೂ, ಯವಪಾಕ (ಹೊಸ ಅಕ್ಕಿ ಬಂದಾಗಲೂ) ಕಾಲದಲ್ಲೂ ಶ್ರಾದ್ಧವನ್ನು ಮಾಡಬೇಕು. ಹಾಗೆ ಶ್ರಾದ್ಧಮಾಡದ ಇದ್ದರೆ ಆ ಅನ್ನವನ್ನು ಪಿತೃಗಳು ಉಣ್ಣುವುದಿಲ್ಲ. ಆಶ್ವೀಜ ಬಹುಳ ಪಾಡ್ಯದ ದಿವಸ ಪೂರ್ವಾಹ್ನವೂ, ಕಾರ್ತಿಕ ಶುದ್ಧ ಪಾಡ್ಯದದಿವಸ ಅಪರಾಹ್ನವೂ ಸಹ ಶ್ರಾದ್ಧಮಾಡಬೇಕು. ಅಂದರೆ ಶುಕ್ಲಪಕ್ಷದಲ್ಲಿ ಬರುವ ಶ್ರಾದ್ಧಗಳನ್ನೆಲ್ಲಾ ಪೂರ್ವಾಹ್ನ ಕಾಲದಲ್ಲೂ, ಕೃಷ್ಣಪಕ್ಷದಲ್ಲಿ ಬರುವ ಶ್ರಾದ್ಧಗಳನ್ನು ಅಪರಾಹ್ನದಲ್ಲಿಯೂ ಮಾಡಬೇಕೆಂದು ಅಭಿಪ್ರಾಯ.

೧೯-೨೦ ಎರಡು ಸಂಧ್ಯಾಕಾಲ (ಪ್ರಾತಃಸಾಯಂ) ಗಳಲ್ಲಿಯೂ ರಾತ್ರಿ ವೇಳೆಯೂ ಶ್ರಾದ್ಧವನ್ನು ಮಾಡಬಾರದು. ಆದರಲ್ಲೂ ರಾತ್ರಿ ಚಂದ್ರಗ್ರಹಣವಾ...

ಅಕ್ಷಯ್ಯಂ ತತ್ಸಮುದ್ದಿಷ್ಟಂ ಯದ್ದತ್ತಂ ರಾಹುದರ್ಶನೇ ।
ಅತಃ ಕಾಮ್ಯಾನಿ ವಕ್ಷ್ಯಾಮಿ ಶ್ರಾದ್ಧಾನಿ ತವ ಪಾರ್ಥಿವ ॥ ೩೦ ॥

ಆರೋಗ್ಯ ಮಥ ಸೌಭಾಗ್ಯಂ ಸಮರೇ ವಿಜಯಂ ತಥಾ ।
ಸರ್ವಾನ್ಕಾಮಾಂಸ್ತಥಾ ವಿದ್ಯಾಂ ಧನಂ ಜೀವಿತಮೇವ ಚ ॥ ೩೧ ॥

ಆದಿತ್ಯಾದಿದಿನೇಷ್ವೇವಂ ಶ್ರಾದ್ಧಂ ಕುರ್ವನ್ಸದಾ ನರಃ ।
ಕ್ರಮೇಣೈತದವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ । ೩೨ ॥

ಸ್ವರ್ಗಂ ಹ್ಯಪತ್ಯಾನಿ ತಥಾ ಬ್ರಹ್ಮವರ್ಚಸಮೇವ ಚ ।
ಶ್ರಾದ್ಧೇನ ಕರ್ಮಣಾ ಸಿದ್ಧಿಂ ಭುವಂ ಪುಷ್ಟಿಂ ತಥಾ ಶ್ರಿಯಂ ॥ ೩೩ ॥

ಸರ್ವಾನ್ಕಾಮಾಂಶ್ಚ ಸೌಭಾಗ್ಯಂ ಧನಂ ಜ್ಞಾತಿಪ್ರಧಾನತಃ ।
ರೂಪಯುಕ್ತಾಂಶ್ಚ ತನಯಾನ್ವಾಣಿಜ್ಯಾದ್ಧನಸಂಪದಂ ॥ ೩೪ ॥

ಕನಕಂ ಸುಹೃದೋ ರಾಜ್ಯಂ ಸಫಲಾಂ ಚ ತಥಾ ಕೃಷಿಂ ।
ಸಮುದ್ರಯಾನಾಲ್ಲಾಭಂ ಚ ಸರ್ವಾನ್ಕಾಮಾಂಸ್ತಥೈವ ಚ ॥ ೩೫ ॥

ರಾಹುದರ್ಶನವಾದಾಗ ಮಾತ್ರಶ್ರಾದ್ಧವನ್ನು ಮಾಡಬಹುದು ಈರೀತಿ ರಾಹು ದರ್ಶನ ಕಾಲದಲ್ಲಿ ಯಾರನ್ನು ಕುರಿತು ಶ್ರಾದ್ಧಮಾಡಿದರೂ ಅದು ಅಕ್ಷಯಫಲವನ್ನು ಕೊಡುವುದು ಇನ್ನು ಮುಂದೆ ಕಾಮ್ಯಶ್ರಾದ್ಧಗಳನ್ನು ಹೇಳುತ್ತೇನೆ

೩೧-೪೧ ಯಾರು ಆರೋಗ್ಯವನ್ನು ಸೌಭಾಗ್ಯವನ್ನೂ ಯುದ್ಧದಲ್ಲಿ ವಿಜಯವನ್ನೂ, ವಿದ್ಯೆಯನ್ನೂ, ಹಣವನ್ನೂ, ಆಯುಸ್ಸನ್ನೂ ಸಕಲ ಇಷ್ಟಾರ್ಥಗಳನ್ನೂ ಹೊಂದಬೇಕೆಂದಾಶಿಸುವರೋ ಅಂಥವರು ಭಾನುವಾರ ಮೊದಲ್ಗೊಂಡು ಏಳು ವಾರಗಳು ಪ್ರತಿದಿನವೂ ತಪ್ಪದೆ ಶ್ರಾದ್ಧಮಾಡುತ್ತಿದ್ದರೆ ಇವೆಲ್ಲಾ ಫಲಗಳನ್ನೂ ಹೊಂದುವರು ಆ ಬಳಿಕ ಸ್ವರ್ಗಸುಖ, ಮಕ್ಕಳಸುಖ, ಬ್ರಹ್ಮವರ್ಚಸ್ಸು, ತಪಸ್ಸಿದ್ಧಿ, ಭೂಲಾಭ, ಪುಷ್ಟಿ, ಐಶ್ವರ್ಯ, ಸಕಲ ಕೋರಿಕೆಗಳೂ, ಜ್ಞಾತಿಗಳೆಲ್ಲರಿಗಿಂತ ತಾನೇ ಬಂಧು

ಪುಷ್ಟ್ಯಕಾಮಾಂಸ್ತಥಾ ಸರ್ವಾನ್ಬಲಮಾರೋಗ್ಯಮೇವ ಚ ।
ರೂಪ್ಯಂ ದ್ರವ್ಯಂ ಗೃಹಂ ಗಾಶ್ಚ ತುರಂಗಾಶ್ಚೈವ ಜೀವಿತಂ　॥ ೩೬ ॥

ಕೃತ್ತಿಕಾದಿಭರಣ್ಯಂತಂ ಕ್ರಮಾಸ್ತು ಬಗನೇ ನರಃ ।
ಏಕೈಕಸ್ಮಿನ್ಕ್ರಮಾತ್ಕುರ್ವಂಚ್ಛ್ರಾದ್ಧಂ ಪ್ರಾಪ್ನೋತ್ಯಸಂಶಯಂ　॥ ೩೭ ॥

ಸ್ತ್ರಿಯಃ ಸುರೂಪಾಃ ಸ್ವಗೃಹೇ ಕನ್ಯಾನಾಂ ಚ ತಥಾ ವರಾನ್ ।
ಸರ್ವಾನ್ಕಾಮಾನ್ಯಶಶ್ಚೈವ ಶ್ರಿಯಂ ದ್ಯೂತಜಯಂ ಕೃಷಿಂ　॥ ೩೮ ॥

ವಾಣಿಜ್ಯಂ ಪಶವಶ್ಚೈವ ವಾಜಿನಶ್ಚ ತಥಾ ಸುರಾನ್ ।
ಸುವರ್ಣರೌಪ್ಯಸೌಭಾಗ್ಯಂ ಪ್ರಾಪ್ನೋತಿ ಶ್ರಾದ್ಧದಃ ಕ್ರಮಾತ್　॥ ೩೯ ॥

ಪ್ರತಿಪತ್ಪ್ರಭೃತಿ ಹ್ಯೇತದ್ಯಾವದ್ರಾಚಂ ತ್ರಯೋದಶೀ ।
ಚತುರ್ದಶ್ಯಾಂ ತು ಕರ್ತವ್ಯಂ ಯೇ ನರಾಃ ಶಸ್ತ್ರಘಾತಿತಾಃ　॥ ೪೦ ॥

ತೆ ಮೇಲಾಗಿರೋಣ ರೂಪವಂತರಾದ ಮಕ್ಕಳು, ವ್ಯಾಪಾರದಲ್ಲಿ ಧನಲಾಭ, ಚಿನ್ನ, ಮಿತ್ರಸಂಪತ್ತಿ, ರಾಜ್ಯ, ಕೃಷಿಯಲ್ಲಿ ಲಾಭ, ಸಮುದ್ರಯಾನದಿಂದ ಲಾಭ, ಬಲ, ಆರೋಗ್ಯ, ಬೆಳ್ಳೀ ನಾಣ್ಯಗಳ ಸಮೃದ್ಧಿ, ಒಳ್ಳೇ ಮಾಹಡೀಮನೆ, ಹಸುಗಳು, ಕುದುರೆಗಳು ಆಯುಸ್ಸು, ಇವುಗಳೆಲ್ಲವನ್ನೂ ಅಪೇಕ್ಷಿಸುವವನು ಕೃತ್ತಿಕಾನಕ್ಷತ್ರ ಮೊದಲ್ಗೊಂಡು ಭರಣೀನಕ್ಷತ್ರ ಪೂರ್ತಿಯಾಗಿ ಇಪ್ಪತ್ತೇಳು ನಕ್ಷತ್ರಗಳಲ್ಲೂ ಒಂದೊಂದು ನಕ್ಷತ್ರಕ್ಕೂ ಬೇರೆಬೇರೆಯಾಗಿ ಶ್ರಾದ್ಧಮಾಡುತ್ತ ಬರಬೇಕು. ಪ್ರತಿ ಪಾಡ್ಯಮಿ ಮೊದಲುಗೊಂಡು ಪೂರ್ಣಿಮೆಯವರಿವಿಗೂ ಅಮೇಲೆ ಅಮಾವಾಸ್ಯೆ ತನಕ ಶ್ರಾದ್ಧ ವನ್ನು ತಪ್ಪದ ಮಾಡುವಂಥವರು ರೂಪವತಿಯರಾದ ಹೆಣ್ಣು ಮಕ್ಕಳನ್ನೂ, ಅವರಿಗೆ ಒಳ್ಳೆಯ ವರಗಳನ್ನೂ, ಸಕಲ ಇಷ್ಟಾರ್ಥಗಳನ್ನೂ, ಯಶಸ್ಸು ಐಶ್ವರ್ಯ, ಜೂಜಿನಲ್ಲಿ ಗೆಲುವು ಕೃಷಿಲಾಭ, ವಾಣಿಜ್ಯಲಾಭ, ಹಸು, ಕುದುರೆ, ಮಕ್ಕಳುಗಳ ಲಾಭ ಯಥೇಚ್ಛವಾಗಿ ಚಿನ್ನ, ಬೆಳ್ಳಿಗಳನ್ನೂ ಪಡೆ ಹೊಂದುತ್ತಾರೆ ಈರೀತಿ ಪಾಡ್ಯಮಿ ಮೊದಲುಗೊಂಡು ತ್ರಯೋದಶೀವರಿವಿಗೆ ಮಾಡಿದ ಬಳಿಕ ಚತುರ್ದಶೀ ದಿವಸ ಶಸ್ತ್ರ ದಿಂದ ಮೃತಿಹೊಂದಿದ್ದ ಜನರಿಗೋಸ್ಕರ (ಘಾತ! ಚತುರ್ದಶೀ) ತಿಥಿಯನ್ನು ಮಾಡ ಬೇಕು ಈರೀತಿಯಾಗಿ ಯಾರು ಹದಿನೈನು ತಿಥಿಗಳಲ್ಲಿಯೂ ಶ್ರಾದ್ಧವನ್ನು ಮಾಡು

ಶ್ರಾದ್ಧಂ ಸದಾ ಪಂಚದಶೇಷು ಕಾರ್ಯಂ
ಕಾಮಾನ್ಸಮಗ್ರಾಂಲ್ಲಭತೇ ಮನುಷ್ಯಃ ।
ತಸ್ಮಾತ್ಪ್ರಯತ್ನೇನ ನರೇಂದ್ರ ಕಾರ್ಯಂ
ಶ್ರಾದ್ಧಂ ಸದಾ ಪಂಚದಶೇಷು ತಜ್ಞೈಃ ॥ ೪೧

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶ್ರಾದ್ಧಕಾಲವರ್ಣನೋ ನಾಮ ದ್ವಿಚತ್ವಾರಿಂಶ
ದುತ್ತರ ಶತತಮೋಽಧ್ಯಾಯಃ

ತ್ತಾರೆಯೋ, ಅಂಥವರು ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತಾರ ಆದ್ದರಿಂದ ಈ ಹದಿನೈದು ದಿವಸಗಳೂ ತಿಥಿಗಳನ್ನು ಮಾಡಬೇಕೆಂದು ಮಾರ್ಕಂಡೇಯರು ನರಪತಿಗೆ ಹೇಳಿದರು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶ್ರಾದ್ಧಕಾಲ ವರ್ಣನೆಯೆಂಬ
ಹೆಸರಿನ ಒಂದುನೂರ ನಲವತ್ತೆರಡನೇ ಅಧ್ಯಾಯವು
ಮುಗಿದುದು



*

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಕಸ್ಮೈ ಶ್ರಾದ್ಧಂ ನ ದಾತವ್ಯಂ ಕೇನ ಭುಕ್ತಂ ಮಹಾಫಲಂ ।
ಭವತೀಹ ದ್ವಿಜಶ್ರೇಷ್ಠ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಅನೂಢಾತನಯೋ ರಾಜನ್ಯಶ್ಚ ಪೌನರ್ಭವಃ ಸುತಃ ।
ಶೂದ್ರಾಪತಿರ್ದುರಾಚಾರೋ ವಾಣಿಜ್ಯಾಯುಧಜೀವಿಕಃ ॥ ೨ ॥

ತಥಾ ವಾರ್ಧುಷಿಕೋ ಯಶ್ಚ ಶೂದ್ರಸ್ಯ ಚ ಪುರೋಹಿತಃ ।
ಪರ್ವಕಾರಸ್ತಥಾ ಸೂಚೀ ಯಸ್ಯ ಚೋಪಪತಿರ್ಗೃಹೇ ॥ ೩ ॥

### ಒಂದುನೂರ ನಲವತ್ತಮೂರನೇ ಅಧ್ಯಾಯವು.

೧ ವಜ್ರಮಹಾರಾಜನು ಕೇಳುತ್ತಾನೆ —ಎಲೈ ಮಾರ್ಕಂಡೇಯನೇ ! ಯಾರಿಗೆ ಶ್ರಾದ್ಧಭೋಜನವನ್ನು ಮಾಡಿಸಬಾರದು ? ಎಂತಹವರನ್ನು ಶ್ರಾದ್ಧಭೋಜನಕ್ಕೆ ಹೇಳಬೇಕು ? ಯಾರು ಭೋಜನಮಾಡಿದರೆ ಮಹಾಫಲವುಂಟಾಗುವುದೋ ಆ ಸಂಗತಿಯನ್ನು ನನಗೆ ಹೇಳು

೨-೧೨ ಮದುವೆಯಾಗದ ಇದ್ದವಳ ಹೊಟ್ಟೆಯಲ್ಲಿ ಹುಟ್ಟಿದ ಮಗ ಎರಡಾವರ್ತಿ ಲಗ್ನಮಾಡಿಕೊಂಡವಳ ಮಗ, ಶೂದ್ರ ಸ್ತ್ರೀಯನ್ನು ಮದುವೆಮಾಡಿಕೊಂಡ ಮನುಷ್ಯ (ಬ್ರಾಹ್ಮಣ), ದುರಾಚಾರದಲ್ಲೇ ನಿರತನಾದವನು, ವ್ಯಾಪಾರಮಾಡುವವನು, ಆಯುಧದಿಂದ ಜೀವಿಸುವವನು, ಬಡ್ಡೀಹಣದಿಂದ ಜೀವನಮಾಡುವವನು, ಶೂದ್ರನಿಗೆ ಪುರೋಹಿತಮಾಡಿಸುವವನು, ವ್ಯಭಿಚಾರಿಣಿಯ ಗಂಡ, ಜ್ಯೋತಿಷ

ಕೃತ್ವಾ ನಕ್ಷತ್ರನಿರ್ದೇಶಂ ಯಶ್ಚ ಜೀವತಿ ಪಾರ್ಥಿವ ।
ಚಿಕಿತ್ಸಿತೇನ ಚ ತಥಾ ಯಸ್ಯ ವೃತ್ತಿರ್ನರೇಶ್ವರ ॥ ೪ ॥

ವೇದವಿಕ್ರಯಕೋ ಯಶ್ಚ ವೇದನಿಂದಕ ಏವ ಚ ।
ತರ್ಕಶಾಸ್ತ್ರೇಣ ದಗ್ಧಶ್ಚ ನಾಸ್ತಿಕೋ ಧರ್ಮವರ್ಜಿತಃ ॥ ೫ ॥

ಪಿತ್ರಾ ವಿವದಮಾನಶ್ಚ ಯಶ್ಚೈವೋಪನಯೇದ್ಬಹೂನ್ ।
ಅಯಾಜ್ಯಯಾಜೀ ಸ್ತೇನಶ್ಚ ಯಶ್ಚೈ ಕಿತವ ಏವ ಚ ॥ ೬ ॥

ಶ್ವಿತ್ರೀ ಚ ಯಸ್ತಥಾ ಕಾಣೋ ಬಧಿರೋಽಂಧಃ ಕುಣಿಸ್ತಥಾ ।
ಪರಪೂರ್ವಾಪತಿಶ್ಚೈವ ಗ್ರಾಮಪ್ರೇಷ್ಯೋ ನಿರಾಕೃತಿಃ ॥ ೭ ॥

ಅವಕೀರ್ಣೀ ಕುಂಡಗೋಲೌ ಕುನಖೀ ಶ್ಯಾವದಂತಕಃ ।
ಕನ್ಯಾದೂಷ್ಯಭಿಶಸ್ತಶ್ಚ ಮಿತ್ರಧ್ರುಕ್ ಪಿಶುನಸ್ತಥಾ ॥ ೮ ॥

ಪರಿವಿತ್ತಿಃ ಪರಿವೇತ್ತಾ ತಸ್ಯ ಕನ್ಯಾಪ್ರದಶ್ಚ ಯಃ ।
ಯಾಜಕಶ್ಚ ತಥಾ ತಸ್ಯ ಸೋಮವಿಕ್ರಯಕಸ್ತಥಾ ॥ ೯ ॥

---

ದಿಂದಲೇ ಜೀವಿಸುವವನು, ವೈದ್ಯವೃತ್ತಿಯಿಂದ ಜೀವಿಸುವವನು, ವೇದವಿಕ್ರಯ ಮಾಡಿ (ದುಡ್ಡು ತೆಗೆದುಕೊಂಡು ಪಾಠ ಹೇಳುವ) ಜೀವಿಸುವವನು, ವೇದವನ್ನು ನಿಂದಿಸುವವನು, ಬರೀ ತರ್ಕಶಾಸ್ತ್ರವನ್ನೇ ಓದಿದವನು, ಪರಲೋಕವೇ ಇಲ್ಲವೆಂದು ಹೇಳುವವನು, ಧರ್ಮವನ್ನು ಬಿಟ್ಟವನು, ತಂದೆಯ ಸಂಗಡ ಜಗಳ ಕಾಯುವವನು, ಅನೇಕ ವಟುಗಳಿಗೆ ಉಪನಯನಮಾಡಿಸಿದವನು, ಕರ್ಮಬಾಹಿರರಿಗೆ ಪುರೋಹಿತ ಮಾಡುವವನು, ಕಳ್ಳನು, ಗೂರಲು ಉಬ್ಬಸವುಳ್ಳವನು, ವಂಚಕ, ತೊನ್ನುರೋಗವುಳ್ಳವನೂ, ಕುರುಡ, ಕಿವುಡ, ಗ್ರಾಮಾಧಿಕಾರಿ, ಆಕಾರಹೀನ, ಕುರೂಪಿ ವ್ರತಭ್ರಷ್ಟ ಗಂಡನು ಬದುಕಿರುವಾಗಲೇ ಹಾದರಮಾಡಿ ಹಡೆದ ಮಗ, ಗಂಡ ಸತ್ತಮೇಲೆ ಮಿಂಡನಿಂದ ಹುಟ್ಟಿದ ಮಗ, ಕೆಟ್ಟ ಉಗುರುಳ್ಳವ, ಹುಳುಕು ಹಲ್ಲಿನವ, ಕನ್ಯೆಯರಿಂದ ದೂಷಿತನಾದವ, ಶಾಪಗ್ರಸ್ತ, ಮಿತ್ರದ್ರೋಹಿ, ಚಾಡಿಕೋರ, ಅಣ್ಣನಿಗೆ ಮದುವೆಯಾಗದಿದ್ದರೂ ಮೊದಲು ಮದುವೆ ಮಾಡಿಕೊಂಡ ತಮ್ಮ, ತಮ್ಮನಿಗೆ ಮದುವೆಯಾದ ಮೇಲೆ ಮದುವೆಮಾಡಿಕೊಂಡ ಅಣ್ಣ, ಅವರಿಬ್ಬರಿಗೂ ಹೆಣ್ಣು ಕೊಟ್ಟು ಮದುವೆಮಾಡಿದವ, ಅವರಿಗೆ ಮದುವೆಮಾಡಿಸಿದ ಪುರೋಹಿತ, ಸೋಮವಿಕ್ರಯ ಮಾಡಿದವ, ಸುಳ್ಳು ಸಾಕ್ಷಿ ಹೇಳಿದವ, ಕೆಟ್ಟ ಮಾತನಾಡುವವ ಕಂಪವರ ಹೆಂಡತಿ

ಕೂಟಸಾಕ್ಷೀ ಚ ವಾಗ್ದುಷ್ಟಃ ಪರದಾರೋ ವಿಕರ್ಮಕಃ ।
ತಥಾ ದ್ವೈಪಾಪವಿದ್ಧಾಗ್ನಿಃ ವಿರುದ್ಧಜನಕಸ್ತಥಾ ॥ ೧೦ ॥

ಯಶ್ಚ ಹೀನಾತಿರಿಕ್ತಾಂಗೋ ದುಶ್ಚರ್ಮಾ ದಮಕಸ್ತಥಾ ।
ಯಶ್ಚ ಯುಕ್ತಸ್ತಥಾ ರಾಜನ್ಪಾತಕ್ಯೈಶ್ಚೋಪಪಾತಕ್ಯೈ ॥ ೧೧ ॥

ದ್ವಿಷನ್ಮಿತ್ರೇ ಉಭೇ ಚೈವ ಪ್ರಯತ್ನೇನ ವಿಸರ್ಜಯೇತ್ ।
ಅತಃ ಪರಂ ಪ್ರವಕ್ಷ್ಯಾಮಿ ಬ್ರಾಹ್ಮಣಾನ್ಪಂಕ್ತಿಪಾವನಾನ್ ॥ ೧೨ ॥

ಬ್ರಹ್ಮದೇಯಾನುಸಂತಾನಃ ತಪಸ್ವೀ ವಿಜಿತೇಂದ್ರಿಯಃ ।
ಪಾರಗೋ ಯಜುಷಾಂ ಯಶ್ಚ ಸಾಮವೇದಸ್ಯ ಪಾರಗಃ ॥ ೧೩ ॥

ಋಗ್ವೇದಪಾರಗೋ ಯಶ್ಚ ಭೃಗ್ವಂಗಿರಸಪಾರಗಃ ।
ಅಥರ್ವಶಿರಸೋಽಧ್ಯೇತಾ ತ್ರಿಸುವರ್ಣಸ್ಯ ಪಾರಗಃ ॥ ೧೪ ॥

ತ್ರಿಣಾಚಿಕೇತಃ ಪಂಚಾಗ್ನಿರ್ಧರ್ಮಶಾಸ್ತ್ರವಿಶಾರದಃ ।
ಪುರಾಣಪಾರಗೋ ಯಶ್ಚ ಇತಿಹಾಸವಿಶಾರದಃ ॥ ೧೫ ॥

ಅಧೀತೇ ಸೋತ್ತರಂ ಯಶ್ಚ ವಿಷ್ಣುಧರ್ಮಾಖ್ಯದಂ ಶುಭಂ ।
ವಿಜಾನಾತಿ ಯಥಾವಚ್ಚ ಯಶ್ಚ ವ್ಯಾಕರಣಂ ನೃಪ ॥ ೧೬ ॥

---

ಯನ್ನು ಕೆಡಿಸಿದವ, ಕರ್ಮತ್ಯಾಗಿ, ನಿರಗ್ನಿಕ, (ಹೆಂಡತಿಯಿಲ್ಲದವ) ದ್ವೇಷಮಾಡುವ ತಂದೆ, ಕುಳ್ಳ, ಉದ್ದವಾಗಿ ಬೆಳೆದವ, ಕೆಟ್ಟಚರ್ಮವಿರುವವ, ಪಾಪ ಉಪಪಾಪಗಳಿಂದ ಕೂಡಿದವ, ಶತ್ರುಮಿತ್ರರು ಇವರಿಬ್ಬರೂ ಸಹ—ಇಂಥವರನ್ನು ಶಾದ್ಧಕ್ಕೆ ಹೇ-ಬಾರದು ಇನ್ನು ಮೇಲೆ ಯೋಗ್ಯರನ್ನು ಹೇಳುತ್ತೇನೆ

೧೨-೧೯ ನಿಮಂತ್ರಣಕ್ಕೆ ಹೇಳಲು ಅರ್ಹರಾದವರು ಯಾರಾರೆಂಬುದನ್ನು ಈಗ ತಿಳಿಸುತ್ತೇನೆ, ಕೇಳು ಒಳ್ಳೇ ಶ್ರೋತ್ರಿಯ ಬ್ರಾಹ್ಮಣರ ವಂಶದಲ್ಲಿ ಹುಟ್ಟಿದ ಗೃಹಸ್ಥ, ಜಿತೇಂದ್ರಿಯನಾದ ತಪಸ್ವಿ, ಯಜುರ್ವೇದ, ಸಾಮವೇದ, ಋಗ್ವೇದಗಳನ್ನು ಸಂಪೂರ್ಣವಾಗಿ ಅಧ್ಯಯನಮಾಡಿದ ಬ್ರಾಹ್ಮಣ, ಭೃಗುಸಂಹಿತೆ, ಅಥರ್ವ ಶಿರಸ್ಸು, ತ್ರಿಸುವರ್ಣಗಳನ್ನೋದಿದವನು, ಕಠೋಪನಿಷತ್ತನ್ನೋದಿದವನು, ಧರ್ಮ ಶಾಸ್ತ್ರದಲ್ಲಿ ಪಂಡಿತನಾದವನು, ಪುರಾಣಗಳನ್ನೋದಿದವನು, ಇತಿಹಾಸವನ್ನು ತಿಳಿದವನು, ಈ ವಿಷ್ಣುಧರ್ಮೋತ್ತರ ಪುರಾಣವನ್ನು ಪಾರಾಯಣಮಾಡಿದವನು, ವ್ಯಾಕರಣ ಶಾಸ್ತ್ರವನ್ನು ಯಥಾವತ್ತಾಗಿ ವ್ಯಾಸಂಗಮಾಡಿದವನು, ಜ್ಯೋತಿಶ್ಶಾಸ್ತ್ರ ಆಯು

ಜ್ಯೋತಿಷಶ್ಚ ತಥಾ ವೇತ್ತಾ ಆಯುರ್ವೇದಸ್ಯ ಚ ದ್ವಿಜಃ ।
ತಾಭ್ಯಾಂ ವೃತ್ತಿಂ ನ ಚೇತ್ಕುರ್ಯಾದ್ವೃತ್ತಿಸ್ತಾಭ್ಯಾಂ ವಿಗರ್ಹಿತಾ ॥ ೧೭ ॥

ಆಹಿತಾಗ್ನಿಶ್ಚ ಯೋ ವಿದ್ವಾನ್ಸೋಮಪಶ್ಚ ದ್ವಿಜೋತ್ತಮಃ ।
ಗುರುಶುಶ್ರೂಣಪರಸ್ತೀರ್ಥಪೂತಶ್ಚ ಯಾದವ ।
ಗಾಯತ್ರೀಜಾಪನಿರತೋ ಯೋಗೀ ಧ್ಯಾನಪರಾಯಣಃ ॥ ೧೮ ॥

ಯಸ್ಯಾಪ್ಯನಂತೇ ಜಗತಾಮಧೀಶೇ
ಭಕ್ತಿಃ ಪರಾ ಯಾದವ ದೇವದೇವೇ ।
ತಸ್ಮಾತ್ಪರಂ ನಾಪರಮಸ್ತಿ ಕಿಂಚಿ-
ತ್ಪಾತ್ರಂ ತ್ರಿಲೋಕೇ ಪುರುಷಪ್ರವೀರ ॥ ೧೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪಾತ್ರಾಪಾತ್ರಪರೀಕ್ಷಾವಿಧಿರ್ನಾಮ
ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

ವೇದಗಳಲ್ಲಿ ಪಂಡಿತನಾಗಿ ಆ ವೃತ್ತಿಗಳೆರಡರಿಂದ ಜೀವನವಾಡದ ಬ್ರಾಹ್ಮಣನು ಮತ್ತು ಆ ವೃತ್ತಿಗಳೆರಡೂ ಗರ್ಹಿತವೆಂದು ತಿಳಿದಿರುವವನು, ಮನೆಯಲ್ಲಿ ಅಗ್ನಿಹೋತ್ರವನ್ನಿಟ್ಟಿರುವ ಬ್ರಾಹ್ಮಣನು ಶ್ರೇಷ್ಠನು, ಸೋಮಯಾಗವಮಾಡಿ ಸೋಮಪಾನ ಮಾಡಿದ ದೀಕ್ಷಿತನು, ಯಾವಾಗಲೂ ಗುರುಶುಶ್ರೂಷಣಪರನಾದವನು, ತೀರ್ಥಯಾತ್ರೆಗಳನ್ನು ಮಾಡಿ ಪರಿಶುದ್ಧನಾಗಿರುವವನು, ಪ್ರತಿದಿನವೂ ತಪ್ಪದ ತ್ರಿಕಾಲಗಳಲ್ಲಿಯೂ ಗಾಯಿತ್ರೀಜಪ ಮಾಡುವ ಬ್ರಾಹ್ಮಣನು, ಯೋಗಾಭ್ಯಾಸ ಮಾಡುವವನು, ಬ್ರಹ್ಮಧ್ಯಾನಮಾಡುವವನು, ಅದಾವ ಮನುಷ್ಯನಿಗೆ ಈ ಸಕಲ ಪ್ರಪಂಚಕ್ಕೂ ಸರ್ವೇಶ್ವರನಾದ ದೇವದೇವೋತ್ತಮನಲ್ಲಿ ಉತ್ತಮವಾದ ಭಕ್ತಿಯಿರುವುದೋ ಮೂರು ಲೋಕದಲ್ಲೂ ಅಂತಹ ಮಹಾವಿಷ್ಣು ಭಕ್ತನಿಗಿಂತ ಬೇರೆ ಯೋಗ್ಯಪಾತ್ರರಾರೂ ನಿಮಂತ್ರಣಾರ್ಹರಲ್ಲವೆಂದು ತಿಳಿದುಕೊಳ್ಳಬೇಕಯ್ಯ ! ವಜ್ರಮಹಾರಾಜ ! ಹೀಗೆಂದು ಮಾರ್ಕಂಡೇಯ ಮಹರ್ಷಿಗಳು ಹೇಳಿದರು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲ ಮಾರ್ಕಂಡೇಯ ವಜ್ರ
ಸಂವಾದ ರೂಪವಾದ ಪಾತ್ರಾಪಾತ್ರಪರೀಕ್ಷಾವಿಧಿಯೆಂಬ ಹೆಸರಿನ
ಒಂದುನೂರ ನಲವತ್ತಮೂರನೇ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಕಸ್ಮಿನ್ಮಹಾಫಲಂ ಶ್ರಾದ್ಧಂ ದೇಶೇ ಬ್ರಾಹ್ಮಣಪುಂಗವ ।
ತತ್ಸರ್ವಂ ಸಮಾಚಕ್ಷ್ವ ಭವಾನ್ಬ್ರಹ್ಮ ಇವಾಽಪರಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಗಯಾಶೀರ್ಷೇ ವಟೇ ಶ್ರಾದ್ಧಮಕ್ಷಯ್ಯಂ ಪರಿಕೀರ್ತಿತಂ ।
ಯದರ್ಥಮೇಷಾ ಚರತಿ ಗಾಥಾ ಲೋಕೇ ಪುರಾತನೀ ॥ ೨ ॥

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಽಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೩ ॥

---

### ಒಂದುನೂರು ನಲವತ್ತನಾಲ್ಕನೆಯ ಅಧ್ಯಾಯವು.

೧ ವಜ್ರಮಹಾರಾಜನು ಹೇಳುತ್ತಾನೆ —ಎಲೈ ಮಾರ್ಕಂಡೇಯ ಋಷಿಯೇ! ಆವ ಪ್ರದೇಶದಲ್ಲಿ ಶ್ರಾದ್ಧವನ್ನು ಮಾಡಿದರೆ ಮಹತ್ತಾದ ಫಲವುಂಟಾಗುವುದೋ ಅಂತಹ ದೇಶಗಳನ್ನು ತಿಳಿಸು ನೀನು ಬ್ರಹ್ಮನೇ ಆಗಿದ್ದೀಯಾದ್ದರಿಂದ ನಿನ್ನ ಮುಖದಿಂದ ಅದನ್ನು ಕೇಳಬೇಕೆಂದಿರುವೆನು

೨ ಗಯಾಕ್ಷೇತ್ರದಲ್ಲಿರುವ ಗಯಾಸುರನ ಶಿರಸ್ಸಿನಲ್ಲೂ ಅಕ್ಷಯವಟಮೂಲದಲ್ಲಿಯೂ ಯಾರು ಶ್ರಾದ್ಧವನ್ನು ಮಾಡುವರೋ ಆ ಶ್ರಾದ್ಧವು ಅಕ್ಷಯವೆನಿಸುವುದು. ಇದಕ್ಕಾಗಿ ಲೋಕದಲ್ಲಿ ಬಹು ಪುರಾತನಕಾಲದಿಂದ ಒಂದು ಗಾದೆ ಹುಟ್ಟಿರುವುದು

೩ ಮನೆ ತುಂಬಾ ಮಕ್ಕಳಾಗಬೇಕೆಂದು ಆಶಪಡುವುದು ಯೋಗ್ಯವಾಗಿಯೇ ಇದೆ ಅದೇನೆಂದರೆ —ಬಹು ಜನ ಪುತ್ರರಾದರೆ ಅವರಲ್ಲಿ ಯಾವನಾದರೂ ಒಬ್ಬನು ಗಯಾಕ್ಷೇತ್ರಕ್ಕೆ ಹೋಗಿ ಪಿಂಡನಿರ್ವಪಣಮಾಡಬಹುದು ಇನ್ನಾವನಾದರೂ ಒಬ್ಬನು

ಪುಷ್ಕರೇಷ್ವಕ್ಷಯಂ ಶ್ರಾದ್ಧಂ ಪ್ರಯಾಗೇ ನೈಮಿಷೇ ತಥಾ ।
ವಾರಾಣಸ್ಯಾಂ ಪ್ರಭಾಸೇ ಚ ಕುರುಕ್ಷೇತ್ರೇ ಸಮಂತತಃ ॥ ೪ ॥

ಸನ್ನಿಹತ್ಯಾಂ ವಿಶೇಷೇಣ ರಾಹುಗ್ರಸ್ತೇ ನಿಶಾಕರೇ ।
( ರಾಹುಗ್ರಸ್ತೇ ದಿನಕರೇ ಸನ್ನೀತ್ಯಾಂ ಪಾರ್ಥಿವೋತ್ತಮ ) ॥ ೫ ॥

ಶ್ರಾದ್ಧಂ ಕೃತ್ವಾ ಸಮಾಪ್ನೋತಿ ರಾಜಸೂಯಶತಂ ನರಃ ।
ಅಶ್ವಮೇಧಸಹಸ್ರಸ್ಯ ಸಮ್ಯಗಿಷ್ಟಸ್ಯ ಯತ್ಫಲಂ ॥ ೬ ॥

ಸ್ನಾತ ಏವ ತದಾಪ್ನೋತಿ ಕೃತ್ವಾ ಶ್ರಾದ್ಧಂ ಸ ಮಾನವಃ ।
ಸರ್ವೇಷು ದೇವಲೋಕೇಷು ಕಾಮಚಾರೀ ವಿರಾಜತೇ ॥ ೭ ॥

ಪದ್ಮವರ್ಣೇನ ಯಾನೇನ ಕಿಂಕಿಣೀಜಾಲಮಾಲಿನಾ ।
ದೇವರಾಮಾಗಣಾಢ್ಯೇನ ವೀಣಾಮುರಜನಾದಿನಾ ॥ ೮ ॥

---

ಅಶ್ವಮೇಧಯಾಗವನ್ನು ಮಾಡಬಹುದು, ಮತ್ತಾವನಾದರೂ ಒಬ್ಬನು ನೀಲಬಣ್ಣದ ವೃಷಭವನ್ನು (ವೃಷೋತ್ಸರ್ಗ) ಬಿಡಬಹುದು ಈ ಮೂರು ಕರ್ಮಗಳಿಂದಲೂ ಪಿತೃಗಳು ಅಕ್ಷಯ ಪುಣ್ಯ ಲೋಕಗಳನ್ನು ಹೊಂದುತ್ತಾರೆ

೪-೫ ಪುಷ್ಕರಕ್ಷೇತ್ರದಲ್ಲೂ, ಪ್ರಯಾಗ-ನೈಮಿಷಾರಣ್ಯಗಳಲ್ಲಿಯೂ, ವಾರಣಾಸಿಯಲ್ಲಿಯೂ, ಪ್ರಭಾಸಕ್ಷೇತ್ರ-ಕುರುಕ್ಷೇತ್ರಗಳಲ್ಲಿಯೂ, ಸನ್ನೀತಿ ತೀರ್ಥದಲ್ಲಿ ಸೂರ್ಯ ಚಂದ್ರಗ್ರಹಣ ಸಮಯಗಳಲ್ಲಿಯೂ ಯಾರು ಶ್ರಾದ್ಧವನ್ನು ಮಾಡುವರೋ ಅಂತಹ ಮಹಾತ್ಮರು ರಾಜಸೂಯಯಾಗಮಾಡಿದ ಫಲವನ್ನು ಹೊಂದುವರು.

೬-೭ ಅಶ್ವಮೇಧಯಾಗವನ್ನು ಮಾಡಿದರೆ ಯಾವ ಫಲವುಂಟಾಗುವುದೋ ಆ ಫಲವನ್ನು ಮೇಲ್ಕಂಡ ಕ್ಷೇತ್ರಗಳಲ್ಲಿ ಸ್ನಾನಮಾಡಿ ಶ್ರಾದ್ಧಮಾಡಿದವನು ನಿರಾಯಾಸವಾಗಿ ಹೊಂದುತ್ತಾನೆ ಮತ್ತು ಅಂತಹ ಪುಣ್ಯವಂತನು ದೇವಲೋಕದಲ್ಲಿ ಕಾಮಚಾರಿಯಾಗಿ (ಸ್ವೇಚ್ಛಾಸಂಚಾರಿ) ಬೇಕು ಬೇಕಾದ ಭೋಗಗಳನ್ನನು ಭವಿಸುತ್ತಾನೆ

೮-೧೦ ಅಂತಿ ತೀರ್ಥಶ್ರಾದ್ಧಗಳನ್ನು ಮಾಡಿದಾತನು ಪದ್ಮವರ್ಣವಾದ ವಿಮಾನದಲ್ಲಿ ಕುಳಿತು ದೇವಲೋಕವನ್ನೇರುತ್ತಾನೆ. ಆ ವಿಮಾನವು ಕಿರುಗಂಟೆಗಳ ಸಾಲುಗಳಿಂದ ಅಲಂಕೃತವಾಗಿರುವುದು ಅದರ ತುಂಬಾ ದೇವಸ್ತ್ರೀಯರು

**ದಿವ್ಯಶ್ವೇತಾಶ್ವಯುಕ್ತೇನ ಕಾಮುಗೇನ ಯಥಾಸುಖಂ ।**
**ಆಭೂತಸಂಪ್ಲವಂ ಯಾವತ್ಕ್ರೀಡತ್ಯಪ್ಸರಸಾಂ ಗಣೈಃ ॥ ೯ ॥**

**ಕೃತಕೃತ್ಯಶ್ಚ ಭವತಿ ಪಿತೄಣಾಮನೃಣಸ್ತದಾ ।**
**ಶ್ರಾದ್ಧಂ ತಥಾ ಪಿತೄಣಾಂ ಚ ನೋಪಯುಜ್ಯೇತ ವೈ ಪುನಃ ॥೧೦ ॥**

**ಯತ್ರ ಕ್ವಚನ ಗಂಗಾಯಾಂ ಶ್ರಾದ್ಧಸ್ಯಾನಂತಮುಚ್ಯತೇ ।**
**ಯಮಸ್ಯ ಭಗಿನೀ ದೇವೀ ಯಮುನಾ ಪಾಪನಾಶಿನೀ ॥ ೧೧ ॥**

**ಯತ್ರ ಕ್ವಚನ ತಸ್ಯಾಂ ಹಿ ಶ್ರಾದ್ಧಸ್ಯಾನಂತ್ಯಮುಚ್ಯತೇ ।**
**ಪಿತೄಣಾಂ ದುಹಿತಾ ರಾಜನ್ನರ್ಮದಾ ಸರಿತಾಂ ವರಾ ॥ ೧೨ ॥**

**ತಸ್ಯಾಸ್ತೀರೇ ತಥಾನಂತಂ ಶ್ರಾದ್ಧಂ ಸರ್ವತ್ರ ಪಾರ್ಥಿವ ।**
**ಅಕ್ಷಯಂ ಚ ತಥಾ ಶ್ರಾದ್ಧಮಮರಾಂತಿಕಪರ್ವತೇ ॥ ೧೩ ॥**

ಸುಳಿತು ವೀಣಾ ಮದ್ದಳೆಗಳ ಧ್ವನಿಯನ್ನು ಮನೋಹರವಾಗಿ ಮಾಡುತ್ತಲಿರುವರು ಆ ವಿಮಾನಕ್ಕೆ ದಿವ್ಯವಾದ ಬಿಳೀಕುದುರೆಗಳನ್ನು ಕಟ್ಟಿರುವರು. ಆ ವಿಮಾನವು ಎಲ್ಲಿಗೆ ಬೇಕಾದರೂ ಇಷ್ಟಬಂದ ಕಡೆಗೆ ಹೋಗಬಲ್ಲುದು ಇಂತಹ ವಿಮಾನದಲ್ಲಿ ಕುಳಿತು ಆ ಮಹಾರಾಯನು ದೇವಲೋಕಕ್ಕೆ ಹೋಗಿ ಅಲ್ಲಿ ಅಪ್ಸರಸ್ತ್ರೀಯರ ಜತೆಯಲ್ಲಿ ಸೇರಿ ಕೊಂಡು ತನಗೆ ಏನೇನು ಸುಖಬೇಕೋ ಅವುಗಳನ್ನೆಲ್ಲಾ ಈ ಪ್ರಾಣಿಗಳು ಜೀವಿಸಿರುವವರಿಗ (ಪ್ರಳಯಕಾಲದವರಿಗೆ) ಅನುಭವಿಸಿ ಕೃತಕೃತ್ಯನಾಗುವನು ಅಂಥವನನ್ನು ಪಿತೃಋಣದಿಂದ ಮುಕ್ತನಾದವನೆಂದು ತಿಳಿಯಬೇಕು ಅಂತಹವನು ಪುನಃ ಪಿತೃಗಳ ಶ್ರಾದ್ಧವನ್ನು ಮಾಡಬೇಕಾದುದಿಲ್ಲ

೧೧-೧೩ ಗಂಗಾನದೀ ತೀರದಲ್ಲಿ ಯಾವ ಸ್ಥಳದಲ್ಲಿ ಶ್ರಾದ್ಧಮಾಡಿದರೂ ಅದು ಅನಂತಫಲವನ್ನು ಕೊಡುತ್ತದೆ ಯಮುನಾನದಿಯು ಯಮಧರ್ಮರಾಜನ ಸಹೋದರಿಯು, ಮತ್ತು ಮನುಷ್ಯರು ಮಾಡಿದ ಪಾಪಗಳನ್ನು ಸ್ನಾನಮಾತ್ರದಿಂದಲೇ ನೀಗಿಸತಕ್ಕವಳು, ಅಂತಹ ಯಮುನಾನದಿಯ ತೀರಪ್ರದೇಶದಲ್ಲಿ ಯಾವ ಸ್ಥಳದಲ್ಲಿ ಶ್ರಾದ್ಧಮಾಡಿದರೂ ಅದೂ ಸಹ ಅನಂತ ಫಲದಾಯಕವಾದುದು ಎಲೈ ರಾಜನೆ! ಕೇಳು ನರ್ಮದಾನದಿಯು ನದಿಗಳೊಳಗೆಲ್ಲಾ ಉತ್ತಮವಾದ ನದಿಯು ಈ ನರ್ಮದೆಯು ಪಿತೃದೇವತೆಗಳ ಮಗಳು ಆರೀತಿ ಉತ್ತಮವಾದ ಆ ನರ್ಮದಾನದೀ ತೀರಪ್ರದೇಶದಲ್ಲೆಲ್ಲಿ ಶ್ರಾದ್ಧಮಾಡಿದರೂ ಅದೂ ಸಹ ಅನಂತಫಲವನ್ನು ಕೊಡುತ್ತದೆ, ಅಮರಪರ್ವತ, ವರಾಹಪರ್ವತಗಳಲ್ಲಿ ಶ್ರಾದ್ಧಮಾಡಿದಾಗ್ಯೂ ಅದೂ ಕೂಡ ಅಕ್ಷಯ ಫಲವನ್ನು ಕೊಡುತ್ತದೆ

ವರಾಹಪರ್ವತೇ ರಾಜಂಚ್ಛಾಸ್ರದ್ಧಸ್ಯಾನಂತ್ಯಮುಚ್ಯತೇ ।
ಹಿಮವಾನ್ಪರ್ವತಶ್ರೇಷ್ಠಃ ಶಂಕರಶ್ವಶುರೋ ಗಿರಿಃ ॥ ೧೪ ॥

ಆಕರಃ ಸರ್ವರತ್ನಾನಾಂ ಸರ್ವಸತ್ತ್ವಸಮಾಶ್ರಯಃ ।
ತಾಪಸಾನಾಮಧಿವಾಸಃ ಶ್ರಾದ್ಧಂ ತತ್ರಾಕ್ಷಯಂ ಭವೇತ್ ॥ ೧೫ ॥

ಏವಮಾದಿಷು ತೀರ್ಥೇಷು ಪರ್ವತೇಷು ಸರಿತ್ಸು ಚ ।
ಸರೋವರೇಷು ಮುಖ್ಯೇಷು ಋಷೀಣಾಮಾಶ್ರಮೇಷು ಚ ॥ ೧೬ ॥

ನಿರ್ಝರೇಷು ತಥಾರಣ್ಯೇ ನದೀನಾಂ ಪ್ರಭವೇಷು ಚ ।
ಸಂಗಮೇಷು ಚ ಮುಖ್ಯೇಷು ಪುಲಿನೇಷು ವಿಶೇಷತಃ ॥ ೧೭ ॥

ಉದ್ಯಾನೇಷು ವಿಚಿತ್ರೇಷು ಸೈಕತೇಷು ಸಮೇಷು ಚ
ಶಾದ್ವಲೇಷು ಚ ರಮ್ಯೇಷು ಗಿರೀಣಾಂ ಕಂದರಾಸು ಚ ॥ ೧೮ ॥

ಗಹ್ವರೇಷು ನಿತಂಬೇಷು ಛಾಯಾಯಾಂ ಕುಂಜರಸ್ಯ ಚ ।
ಮಹೀಗತಾಂತರಂಯಸ್ತದ್ಗಜಚ್ಛಾಯಾಸು ಪಾರ್ಥಿವ ॥ ೧೯ ॥

೧೪-೧೫ ಹಿಮವತ್ಪರ್ವತವು ಪರ್ವತಗಳೊಳಗ ಬಹು ಶ್ರೇಷ್ಠವಾದ ಪರ್ವತ ಮತ್ತು ಈ ಮಹಾಗಿರಿರಾಜನು ಪರಮೇಶ್ವರನ ಮಾವನು ಸರ್ವವಿಧವಾದ ರತ್ನಗಳೂ, ಸಕಲ ಸತ್ವಸಾರವೂ ಈ ಪರ್ವತವಲ್ಲಿರುವುದು ತಪಸ್ವಿಗಳು ಇಲ್ಲಿ ಸರ್ವದಾ ನೆಲೆಗೊಂಡಿರುವರು. ಇಂತಹ ಹಿಮಗಿರಿಯಲ್ಲಿ ಮಾಡಿದ ಶ್ರಾದ್ಧದಿಂದ ಅಕ್ಷಯ ಪುಣ್ಯಲೋಕವು ಪ್ರಾಪ್ತಿಯಾಗುವುದು

೧೬-೨೩ ಇವೇ ಮೊದಲಾದ ತೀರ್ಥಗಳಲ್ಲಿಯೂ, ಪರ್ವತಗಳಲ್ಲಿಯೂ, ಹೊಳೆಗಳಲ್ಲಿಯೂ, ಮುಖ್ಯ ಮುಖ್ಯವಾದ ಸರೋವರಗಳಲ್ಲಿಯೂ, ಋಷ್ಯಾಶ್ರಮಗಳಲ್ಲಿಯೂ, ನೀರಿನ ಝರಿಗಳಿರುವಲ್ಲಿಯೂ, ಅರಣ್ಯ ಪ್ರದೇಶಗಳಲ್ಲಿಯೂ ನದಿಯು ಹುಟ್ಟುವ ಸ್ಥಳಗಳಲ್ಲಿಯೂ, ನದಿಗಳು ಸಂಗಮವಾಗುವ ಸ್ಥಳಗಳಲ್ಲಿಯೂ ಮರಳಿನ ರಾಶಿಗಳ ಮೇಲೂ, ವಿಚಿತ್ರವಾದ ಉದ್ಯಾನವನಗಳಲ್ಲಿಯೂ ಸಮನಾದ ಮರಳು ಭೂಮಿಯಲ್ಲೂ, ರಮ್ಯವಾದ ಹುಲ್ಲುಗಾವಲುಗಳಲ್ಲಿಯೂ, ಗಿರಿಗಳ ಕಂದರಗಳಲ್ಲಿಯೂ, ಆಳವಾದ ಬೆಟ್ಟದ ತಪ್ಪಲುಗಳಲ್ಲಿಯೂ, ಆನೆಗಳ ನೆರಳಿನಲ್ಲಿಯೂ, ಮತ್ತು ಅಪರಾಹ್ಣ ಕಾಲದಲ್ಲಿ ಆನೆಗಳ ನೆರಳು ಪ್ರಸರಿಸಿರುವ ಪ್ರದೇಶಗಳಲ್ಲೂ, ಯಾರು ಸಕೃನ್ಮಹಾಲಯ

ಯಃ ಕುರ್ಯಾದಪರಾಹ್ಣೇ ತು ಸಕೃಚ್ಛ್ರಾದ್ಧಂ ಪ್ರಯತ್ನತಃ ।
ಅಕ್ಷಯ್ಯಮನ್ನಪಾನಂ ತು ಪಿತೄಣಾಂ ಚೋಪತಿಷ್ಠತೇ ॥ ೨೦ ॥

ಗೋಮಯೇನೋಪಲಿಪ್ತೇಷು ಶ್ರಾದ್ಧಂ ಕಾರ್ಯಂ ಗೃಹೇಷು ಚ ।
ಮನೋಜ್ಞೇಷು ವಿಚಿತ್ರೇಷು ರುಚಿರೇಷೂತ್ತಮೇಷು ಚ ॥ ೨೧ ॥

ದೇವಾಯತನಗೋಷ್ಠೇಷು ಶ್ರಾದ್ಧಂ ಬಹುಫಲಂ ಭವೇತ್ ॥ ೨೨ ॥

ತೀರ್ಥಾನಿ ಯಾನೀಹ ನರೇಂದ್ರಚಂದ್ರ
ಲೋಕೇ ಪುರಾಣೈಃ ಪರಿಕೀರ್ತಿತಾನಿ ।
ತೀರೇಷು ತೇಷಾಂ ವಿಧಿವತ್ಪ್ರದಾಯ
ಶ್ರಾದ್ಧಂ ನ ಶೋಚೇನ್ಮರಣಂ ಜಿತಾತ್ಮಾ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಶ್ರಾದ್ಧದೇಶಾನುಕೀರ್ತನೋ
ನಾಮ ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ಶ್ರಾದ್ಧವನ್ನು ಮಾಡುವವರೋ ಅಂತಹವರ ಪಿತೃಗಳಿಗೆ ಕೊಡುವ ಅನ್ನೋದಕಗಳು ಅಕ್ಷಯ್ಯವಾಗಿ ಅವರ ಮುಂದೆ ನಿಲ್ಲುತ್ತವೆ ಮತ್ತು ಸಗಣಿಯಿಂದ ಚೆನ್ನಾಗಿ ಸಾರಿಸಿದ ನಲಗಳಲ್ಲಿಯೂ, ಮನೋಹರವಾಗಿಯೂ, ವಿಚಿತ್ರವಾಗಿಯೂ, ಸುಂದರವಾಗಿಯೂ, ಉತ್ತಮವಾಗಿಯೂ ಇರುವ ದೇವಾಲಯಗಳಲ್ಲಿಯೂ, ಗೋಶಾಲೆಗಳಲ್ಲಿಯೂ ಶ್ರಾದ್ಧ ಮಾಡಿದರೆ ಬಹಳವಾದ ಫಲವುಂಟು. ಎಲೈ ವಜ್ರನರಪತಿಯೆ! ಈ ಭೂಲೋಕದಲ್ಲಿ ಪುರಾಣಗಳು ಯಾವ ಯಾವ ಸ್ಥಳಗಳಲ್ಲಿ ಶ್ರಾದ್ಧಮಾಡಬೇಕೆಂದು ಹೇಳಿವೆಯೋ ಆಯಾಯ ತೀರ್ಥಕ್ಷೇತ್ರಗಳಲ್ಲಿಯೂ, ನದೀತೀರಗಳಲ್ಲಿಯೂ ಸರ್ವರೂ ತಮ್ಮ ತಮ್ಮ ಪಿತೃಗಳ ಶ್ರಾದ್ಧವನ್ನು ಭಕ್ತಿಯಿಂದ ಮಾಡಬೇಕು ಹಾಗೆ ಮಾಡದೆ ಸತ್ತವರಿಗೋಸ್ಕರವಾಗಿ ಯಾರು ದುಃಖಪಡಲಾಗದು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಶ್ರಾದ್ಧದೇಶಾನು ಕೀರ್ತನವೆಂಬ
ಹೆಸರಿನ ಒಂದು ನೂರನಲವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಚತ್ವಾರಿಂಶದುತ್ತರ ಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಪಿತೃಭಿರ್ಯಾಃ ಪ್ರಕೀರ್ತಿತಾಃ ।**
**ಗಾಥಾಃ ಪಾರ್ಥಿವಶಾರ್ದೂಲ ಕಾಮಯದ್ಭಿಃ ಪುರೇ ಸ್ವಕೇ ॥ ೧ ॥**

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಯೋ ನೋ ದದ್ಯಾಜ್ಜಲಾಂಜಲಿಂ ।**
**ನದೀಷು ಬಹುತೋಯಾಸು ಶೀತಲಾಸು ವಿಶೇಷತಃ ॥ ೨ ॥**

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಹಿಮಮಿಶ್ರಂ ಜಲಾಂಜಲಿಂ ।**
**ತಿಲಮಾಕ್ಷಿಕಸಂಯುಕ್ತಂ ಯೋ ನೋ ದದ್ಯಾತ್ಸಮಾಹಿತಃ ॥ ೩ ॥**

### ಒಂದುನೂರ ನಲವತ್ತೈದನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುವನು —ಎಲೈ ರಾಜಶ್ರೇಷ್ಠನೇ ! ಇನ್ನು ಮುಂದೆ ತಾವು ತಾವು ಇರುವ ಸ್ಥಳಗಳಲ್ಲಿ ಸುಖವನ್ನಪೇಕ್ಷಿಸುವ ಪಿತೃಗಳಿಂದ ಯಾವ ಯಾವ ಗಾದೆಗಳು ಹೇಳಲ್ಪಟ್ಟಿವೆಯೋ ಅವುಗಳನ್ನು ಹೇಳುತ್ತೇನೆ, ಕೇಳು.

೨-೪ ಯಾವನು ನಮಗೆ ಸಮೃದ್ಧಿಯಾಗಿ ನೀರು ಹರಿಯುವ ತಣ್ಣಗಿರುವ ನದೀ ಪ್ರವಾಹಗಳಲ್ಲಿ ಜಲತರ್ಪಣವನ್ನು ಕೊಡುವವನಾಗುವನೋ ಅಂತಹ ಸತ್ಪುತ್ರನು ನಮ್ಮ ವಂಶದಲ್ಲಿ ಹುಟ್ಟುವನೇ ? ನಮ್ಮ ವಂಶದಲ್ಲಿ ಹಿಮಮಿಶ್ರವಾದ ನೀರಿನಿಂದಲೂ ಎಳ್ಳು, ಜೇನುತುಪ್ಪಗಳಿಂದಲೂ ತರ್ಪಣಕೊಡುವ ಮಗನು ಜನಿಸುವನೆ ? ಯಾವನು ಪಿತೃಭಕ್ತಿಯಿಂದ ವರ್ಷಋತುವಿನಲ್ಲೂ (ಅಪರಪಕ್ಷದಲ್ಲಿ), ಮಾಘಮಾಸ

ಅಪಿ ಸ್ಯಾತ್ಸ ಕುಲೇಽಸ್ಮಾಕಂ ಯೋನೋ ದದ್ಯಾಚ್ಚ ಭಕ್ತಿತಃ
ಪಾಯಸಂ ಮಧುಸಂಮಿಶ್ರಂ ವರ್ಷಾಸು ಚ ಮಘಾಸು ಚ    ॥ ೪ ॥

॥ ದಾಲ್ಭ್ಯ ಉವಾಚ ॥
ಪತ್ನ್ಯೋನೃಣಾಂ ಮುನಿಶ್ರೇಷ್ಠ ಯೋಷಿತಾಂ ಚ ತಥಾ ನರಾಃ ।
ತಚ್ಛ್ರೋತುಮಿಚ್ಛಾ ವಿಪ್ರರ್ಷೇ ವಿಧವಾ ಸ್ತ್ರೀ ನ ಜಾಯತೇ    ॥ ೫ ॥

ಉಪ್ರೋಷಿತೇನ ಯೇನಾಗ್ರ್ಯ ಪತ್ನ್ಯಾ ನ ರಹಿತೋ ನರಃ ।
॥ ಪುಲಸ್ತ್ಯ ಉವಾಚ ॥
ಅಶೂನ್ಯಶಯನಾಂ ನಾಮ ದ್ವಿತೀಯಾಂ ಶೃಣು ಭೋ ದ್ವಿಜ    ॥ ೬ ॥

ಯಾಮುಪೋಷ್ಯ ನ ವೈಧವ್ಯಂ ಪ್ರಯಾತಿ ಸ್ತ್ರೀ ದ್ವಿಜೋತ್ತಮ ।
ಪತ್ನೀ—ವಿಮುಕ್ತಶ್ಚ ನರೋ ನ ಕದಾಚಿತ್ಪ್ರಜಾಯತೇ    ॥ ೭ ॥

ನಲ್ಲಿಯೂ ನಮಗೆ ಶ್ರಾದ್ಧವನ್ನಿತ್ತು ಜೇನುತುಪ್ಪ, ಪಾಯಸಗಳಿಂದ ನಮ್ಮನ್ನು ತೃಪ್ತಿಪಡಿಸುವನೋ ಅಂತಹ ಮಗನು ನಮ್ಮ ವಂಶದಲ್ಲಿ ಜನಿಸಲಿ

೫ ದಾಲ್ಭ್ಯಋಷಿಗಳು ಹೇಳುತ್ತಾರೆ —ಪುಲಸ್ತ್ಯದಾಲ್ಭ್ಯಸಂವಾದಕಾಲದಲ್ಲಿ ಪುಲಸ್ತ್ಯರನ್ನು ಕುರಿತು ದಾಲ್ಭ್ಯರು ಪ್ರಶ್ನಿಸಿದುದೇನೆಂದರೆ —ಎಲೈ ಬ್ರಹ್ಮರ್ಷಿಯೇ! ಗಂಡಸರಿಗೆ ಹೆಂಡತಿಯು ಸಾಯದಂತೆಯೂ, ಹೆಂಡತಿಯರಿಗೆ ಗಂಡಂದಿರು ಸತ್ತು ವೈಧವ್ಯ-ಪ್ರಾಪ್ತಿಯುಂಟಾಗದಂತೆಯೂ ಇರಬೇಕಾದರೆ ಹೆಂಗಸರೂ, ಗಂಡಸರೂ ಸಹ ಎಂತಹ ವ್ರತವನ್ನು ಮಾಡಬೇಕು? ಯಾವ ನಿಯಮದಿಂದಿರಬೇಕೆಂಬುದನ್ನು ದಯಮಾಡಿ ತಿಳಿಸಬೇಕೆಂದು ಕೇಳಲಾಗಿ ಅದಕ್ಕೆ ಪುಲಸ್ತ್ಯರು ಉತ್ತರ ಹೇಳುತ್ತಾರೆ

೬-೭ ಪುಲಸ್ತ್ಯರು ಹೇಳುವರು —ಎಲೈ ಬ್ರಹ್ಮಋಷಿಯೇ! ಹೇಳುವೆನು ಕೇಳು, ಅಶೂನ್ಯಶಯನದ್ವಿತೀಯಾ ಎಂಬ ಹೆಸರಿನ ಒಂದು ಮಹಾಪುಣ್ಯ ದಿವಸವುಂಟು ಆ ದಿವಸ ಯಾವ ಸ್ತ್ರೀಯು ಉಪವಾಸವಿರುವಳೋ ಅಂತಹವಳು ಎಂದೆಂದಿಗೂ ವೈಧವ್ಯವೆಂಬುದನ್ನು ಹೊಂದದೆ ಪತಿಯೊಡನೆ ಸುಖದಿಂದಿರುವಳು ಅದೇ ಮೇರೆ ಆದಿನ ಉಪವಾಸವಿದ್ದ ಮನುಷ್ಯನು ಎಂದೆಂದಿಗೂ ಪತ್ನೀವಿಯೋಗವೆಂಬುದನ್ನರಿಯದೆ ಹೆಂಡತಿಯೊಡನೆ ಸುಖದಿಂದಿರುವನು

ಏತೇ ಜಲನಿಧೌ ಕೃಷ್ಣಃ ಶ್ರಿಯಾ ಸಾರ್ಧಂ ಯದಾ ದ್ವಿಜ ।
ಅಶೂನ್ಯಶಯನಾ ನಾಮ ತದಾ ಪ್ರೋಕ್ತಾ ತಿಥಿಃ ॥ ೮ ॥

ಕೃಷ್ಣಪಕ್ಷದ್ವಿತೀಯಾಯಾಂ ಶ್ರಾವಣೇ ಮುನಿಸತ್ತಮ ।
ಇಮಮುಚ್ಚಾರಯೇನ್ಮಂತ್ರಂ ಪ್ರಣಮ್ಯ ಜಗತಃ ಪತಿಂ ॥ ೯ ॥

ಶ್ರೀವತ್ಸಧಾರಿಣಂ ಶ್ರೀಶಂ ಭಕ್ತ್ಯಾಽಭ್ಯರ್ಚ್ಯ ಶ್ರಿಯಾ ಸಹ ।
ಶ್ರೀವತ್ಸಧಾರಿಂಛ್ರೀಕಾಂತ ಶ್ರೀಧಾಮ ಶ್ರೀಪತೇಽಚ್ಯುತ ॥ ೧೦ ॥

ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದ ।
ಅಗ್ನಯೋ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ದೇವತಾಃ ॥ ೧೧ ॥

ಪಿತರೋ ಮಾ ಪ್ರಣಶ್ಯಂತು ಮತ್ತೋ ದಾಂಪತ್ಯಭೇದತಃ ।
ಲಕ್ಷ್ಮ್ಯಾ ವಿಯುಜ್ಯತೇ ದೇವ ನ ಕದಾಚಿದ್ಯಥಾ ಭವಾನ್ ॥ ೧೨ ॥

---

೮-೯ ಮಹಾವಿಷ್ಣುವು ಕ್ಷೀರಸಮುದ್ರ ಮಧ್ಯದಲ್ಲಿ ಲಕ್ಷ್ಮೀಸಮೇತನಾಗಿ ಆದಿಶೇಷನ ಮೇಲೆ ಮಲಗಿರುವ ಚಾತುರ್ಮಾಸ್ಯ ದಿವಸಗಳಲ್ಲಿ (ಅಂದರೆ ಆ ಶ್ರಾವಣ ಮಾಸ ಬಿದಿಗೆಯ ತಿಥಿಯನ್ನು ಅಶೂನ್ಯಶಯನಾ ದ್ವಿತೀಯಾ ಎಂದು ಹೇಳುವರು ಆ ಬಿದಿಗೆಯ ದಿವಸದಲ್ಲಿ) ಶ್ರಿಯಃಪತಿಯಾದ ಮಹಾವಿಷ್ಣುವನ್ನು ಭಕ್ತಿಯಿಂದ ನಮಸ್ಕಾರಮಾಡಿ ಮುಂದೆ ಹೇಳುವ ಮಂತ್ರದಿಂದ ಪ್ರಾರ್ಥಿಸಬೇಕು

೧೦-೧೨ ನಾನು ಶ್ರೀವತ್ಸವೆಂಬ ಮಚ್ಚೆಯನ್ನು ಧರಿಸಿರುವ ಲಕ್ಷ್ಮೀಸಮೇತನಾದ ಶ್ರೀಮನ್ಮಹಾವಿಷ್ಣುವನ್ನು ಪರಮಭಕ್ತಿಯಿಂದ ನಮಸ್ಕಾರಮಾಡುತ್ತೇನೆ ಮತ್ತು ಮಹಾಪ್ರಭೋ! ನಿನ್ನನ್ನು ಇಂತು ಪ್ರಾರ್ಥಿಸಿಕೊಳ್ಳುತ್ತೇನೆ ಎಲೈ ಶ್ರೀವತ್ಸಧಾರಿಯೆ! ಲಕ್ಷ್ಮೀಪತಿಯೇ! ಲಕ್ಷ್ಮೀನಿಕೇತನನೆ! ಶ್ರೀನಾಥ! ಅಚ್ಯುತ! ಧರ್ಮಾರ್ಥಕಾಮಗಳನ್ನು ಅನುಗ್ರಹಿಸುವ ನಿನ್ನ ದಿವ್ಯಸಾನ್ನಿಧಿಯಲ್ಲಿ ಬೇಡಿಕೊಳ್ಳುವುದೇನೆಂದರೆ --ನನ್ನ ಗೃಹಸ್ಥಧರ್ಮವು ಯಾವಾಗಲೂ ನಾಶಹೊಂದಬಾರದು (ಹೆಂಡತಿಗೆ ಆಯುಸ್ಸುಕೊಡು, ನನ್ನಿಂದ ಅಗಲಿಸಬೇಡ, ಎಂದು ತಾತ್ಪರ್ಯ) ನನ್ನ ಅಗ್ನಿಯು ಯಾವಾಗಲೂ ನಾಶವಾಗಬಾರದು ದೇವತಾಪೂಜೆಯು ಯಾವಾಗಲೂ ಚ್ಯುತಿಯಾಗಬಾರದು ನನ್ನ ಪಿತೃಕಾರ್ಯಗಳು ನಾಶವಾಗಬಾರದು ನಾವು ದಂಪತಿಗಳು ಯಾವಾಗಲೂ ಅಗಲಿರಕೂಡದು ದೇವೋತ್ತಮ! ನೀನು ಯಾವಾಗಲೂ ಮಹಾಲಕ್ಷ್ಮಿಯನ್ನಗಲಿ ಇರದಂತೆ ಇರುವುದಿಲ್ಲವೋ ಅದರಂತೆ ನಾವು ದಂಪತಿ

ತಥಾ ಕಲತ್ರಸಂಬಂಧೋ ದೇವ ಮೇ ಸ್ನೈವ ಭಿದ್ಯತು ।
ಲಕ್ಷ್ಮ್ಯಾ ಹ್ಯಶೂನ್ಯಂ ವರದ ಯಥಾ ತೇ ಶಯನಂ ಸದಾ ॥ ೧೩ ॥

ಶಯ್ಯಾ ಮಮಾಪ್ಯಶೂನ್ಯಾಸ್ತು ತಥೈವ ಮಧುಸೂದನ ।
ಏವಂ ಪ್ರಸಾದ್ಯ ಪೂಜಾಂ ಚ ಕೃತ್ವಾ ಲಕ್ಷ್ಮ್ಯಾಸ್ತಥಾ ಹರೇಃ ॥ ೧೪ ॥

ಫಲಾನಿ ದದ್ಯಾಚ್ಚಾಯಾಯಾಮಭೀಷ್ಟಾನಿ ಜಗತ್ಪತೇಃ ।
ನಕ್ತಂ ಪ್ರಣಮ್ಯಾಯತನೇ ಹವಿರ್ಭುಂಜೀತ ವಾಗ್ಯತಃ ॥ ೧೫ ॥

ಬ್ರಾಹ್ಮಣಾಯ ದ್ವಿತೀಯೇಽಹ್ನಿ ಶಯ್ಯಾಂ ದದ್ಯಾತ್ಸದಕ್ಷಿಣಾಂ ।
ಏವಂ ಕರೋತಿ ಯಃ ಸಮ್ಯಙ್ನರೋ ಮಾಸಚತುಷ್ಟಯಂ ॥ ೧೬ ॥

ತಸ್ಯ ಜನ್ಮತ್ರಯೇ ದಾಲ್ಭ್ಯ ಗೃಹಭಂಗೋ ನ ಜಾಯತೇ ।
ಅಶೂನ್ಯಶಯನಶ್ಚಾಸೌ ಧರ್ಮಕಾಮಾರ್ಥಸಾಧಕಃ ॥ ೧೭ ॥

ಭವತ್ಯವ್ಯಾಕೃತೈಶ್ವರ್ಯಃ ಪುರುಷೋ ನಾತ್ರ ಸಂಶಯಃ ।
ನಾರೀ ಚ ದಾಲ್ಭ್ಯ ಧರ್ಮಜ್ಞ ವ್ರತಮೇತದ್ಯಥಾವಿಧಿ ॥ ೧೮ ॥

ನನ್ನೂ ಅಗಲಿರದಂತೆ ಅನುಗ್ರಹಿಸು ಸ್ವಾಮಿ! ನಿನ್ನ ಹಾಸಿಗೆಯು ಲಕ್ಷ್ಮೀದೇವಿಯಿಂದ ಶೂನ್ಯವಾಗದೆ ಅನಂತು ಶೋಭಿಸುತ್ತಿರುವುದೋ ಅದರಂತೆಯೇ ನನ್ನ ಹಾಸಿಗೆಯೂ ಸಹ ನನ್ನ ಹೆಂಡತಿಯಿಂದ ಬರಿದಾಗದೇ ಇರಲಿ

ಈ ರೀತಿಯಾಗಿ ಪ್ರಾರ್ಥನೆಮಾಡಿ ಪ್ರಸಾದವನ್ನು ಪಡೆದು ಆ ಬಳಿಕ ಮಹಾಲಕ್ಷ್ಮಿಯನ್ನು ಸರ್ವೋತ್ತಮನಾದ ಮಹಾವಿಷ್ಣುವಿನೊಡನೆ ಪೂಜಿಸಿ ಆ ಮಹಾತಾಯಿಯ ಫಲಪ್ರಸಾದವನ್ನು ಸಹ ಪಡೆದ ಬಳಿಕ ಜಗತ್ಪತಿಯಾದ ಪರಮಾತ್ಮನನ್ನು ಕುರಿತು ತನ್ನ ಮನಸ್ಸಿನಲ್ಲಿರುವ ಇಷ್ಟಾರ್ಥಗಳನ್ನೆಲ್ಲಾ ಕೇಳಿಕೊಳ್ಳಬೇಕು ಇಷ್ಟಾದ ಮೇಲೆ ರಾತ್ರಿಯ ತನಕ ಉಪವಾಸವಿದ್ದು ಮೌನವಾಗಿ ಹವಿಸ್ಸನ್ನು ಮಾತ್ರವೇ ಭುಜಿಸಬೇಕು. ಮಾರನೇ ದಿವಸ ಬ್ರಾಹ್ಮಣನಿಗೆ ಭೋಜನಕ್ಕೆ ಹೇಳಿ, ದಕ್ಷಿಣೆ ಸಹಿತವಾಗಿ ಶಯ್ಯಾದಾನ ಮಾಡಬೇಕು ಯಾವ ಗೃಹಸ್ಥನು ಈ ರೀತಿಯಾದ ವ್ರತವನ್ನು ಚಾತುರ್ಮಾಸ್ಯದಲ್ಲಿ ನಾಲ್ಕು ತಿಂಗಳೂ ಮಾಡುವನೋ ಆ ಗೃಹಸ್ಥನು ಮೂರು ಜನ್ಮಗಳಲ್ಲಿಯೂ ಪತ್ನೀವಿಯೋಗವನ್ನು ಹೊಂದಲಾರನು. ಈ ಅಶೂನ್ಯಶಯನವ್ರತವು ಧರ್ಮ-ಅರ್ಥ-ಕಾಮಗಳನ್ನೂ, ಎಂದೆಂದಿಗೂ ಕುಗ್ಗದ ಐಶ್ವರ್ಯವನ್ನೂ ಕೊಡತಕ್ಕ

ಯಾ ಕರೋತಿ ನ ಸಾ ಶೋಚ್ಯಾ ಬಂಧುವರ್ಗಸ್ಯ ಜಾಯತೇ ।
ವೈಧವ್ಯಂ ದುರ್ಭಗತ್ವಂ ವಾ ಭರ್ತೃರ್ವ್ಯಂಗ್ಯಂ ಚ ಸತ್ತಮ ॥ ೧೯ ॥

ನಾಪ್ನೋತಿ ಜನ್ಮತ್ರಿತಯಮೇತಚ್ಚೀತ್ವಾ ಪತಿವ್ರತಾ ॥ ೨೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಶೂನ್ಯಶಯನದ್ವಿತೀಯಾವರ್ಣನೋ ನಾಮ
ಪಂಚ ಚತ್ವಾರಿಂಶದುತ್ತರ ಶತತಮೋಽಧ್ಯಾಯಃ



ದಾಗಿರುವುದು. ಈ ವ್ರತವನ್ನು ಯಥಾವಿಧಿಯಾಗಿ ಯಾವ ಹೆಂಗಸು ಮಾಡುವಳೋ ಅವಳೂ ಕೂಡ ಗಂಡನೊಡನೆಯೂ ಇಷ್ಟಬಂಧುಗಳೊಡನೆಯೂ ಸುಖನಾಗಿರುತ್ತಾಳೆ ವೈಧವ್ಯವೂ ದೌರ್ಭಾಗ್ಯವೂ ಅವಳ ಸಮೀಪಕ್ಕೆ ಬರದೆ ದೂರವಾಗಿ ಓಡುವುದು ಮೂರು ಜನ್ಮವೂ ಅವಳು ಸುಖವಾಗಿರುವಳು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಅಶೂನ್ಯಶಯನ ದ್ವಿತೀಯಾ ವರ್ಣನವೆಂಬ
ಹೆಸರಿನ ಒಂದುನೂರ ನಲವತ್ತೈದನೆಯ
ಅಧ್ಯಾಯವು ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಟ್ಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ದಾಲ್ಭ್ಯ ಉವಾಚ ॥

ಉಪವಾಸಾಶ್ರಿತಂ ಸಮ್ಯಗ್ಲೋಕದ್ವಯಫಲಪ್ರದಂ ।
ಕಥಿತಂ ಭವತಾ ಸರ್ವಂ ಯತ್ಪೃಷ್ಟೋಽಸಿ ಮಯಾ ದ್ವಿಜ ॥ ೧ ॥

ಅನ್ಯದಿಚ್ಛಾಮ್ಯಹಂ ಶ್ರೋತುಂ ತದ್ಭವಾನ್ಪ್ರಬ್ರವೀತು ಮೇ ।
ಸಂಸಾರಹೇತುಂ ಮುಕ್ತಿಂ ಚ ಸಂಸಾರಾನ್ಮುನಿಸತ್ತಮ ॥ ೨ ॥

॥ ಪುಲಸ್ತ್ಯ ಉವಾಚ ॥

ಅವಿದ್ಯಾಪ್ರಭವಂ ಕರ್ಮ ಹೇತುಭೂತಂ ದ್ವಿಜೋತ್ತಮ ।
ಸಂಸಾರಸ್ಯಾಸ್ಯ ತನ್ಮುಕ್ತಿಃ ಸಂಕ್ಷೇಪಾಚ್ಛ್ರೂಯತಾಂ ಮಮ ॥ ೩ ॥

### ಒಂದುನೂರ ನಲವತ್ತಾರನೆಯ ಅಧ್ಯಾಯವು.

೧ ದಾಲ್ಭ್ಯಋಷಿಗಳು ಹೇಳುತ್ತಾರೆ —ಎಲೈ ಪುಲಸ್ತ್ಯಋಷಿಯೇ ನಾನಾವ ವಿಚಾರವನ್ನು ಕೇಳಿದೆನೋ, ಅಂತಹ ಈ ಲೋಕ ಪರಲೋಕಗಳಲ್ಲಿ ಸುಖ ಕೊಡುವ ಉಪವಾಸಾಶ್ರಿತವಾದ ವ್ರತವನ್ನು ನಿನ್ನಿಂದ ಕೇಳಿ ಬಹಳ ಸಂತೋಷ ವಾಯಿತು

೨ ಮತ್ತೊಂದು ಪ್ರಶ್ನೆಯನ್ನು ಮಾಡುತ್ತೇನೆ ಅದನ್ನು ನೀನು ದಯ ಮಾಡಿ ಹೇಳಬೇಕು ಆ ವಿಚಾರವು ಸಂಸಾರ ಸುಖಕಾರಣವಾದುದಾಗಿಯೂ, ಸಂಸಾರದಿಂದ ಮುಕ್ತಿಹೊಂದುವಂತಹುದಾಗಿಯೂ ಇರಬೇಕು. ಅದಾವುದೆಂಬ ದನ್ನು ತಿಳಿಸು

೩ ಪುಲಸ್ತ್ಯಋಷಿಯು ಉತ್ತರ ಹೇಳುತ್ತಾನೆ — ಈ ಸಂಸಾರ ಬಂಧನಕ್ಕೆ ಅಜ್ಞಾನದಿಂದ ಉಂಟಾದ ಕರ್ಮಗಳನ್ನು ಮಾಡಿರುವುದೇ ಮುಖ್ಯಮೂಲಕಾರಣ

ಸ್ವಜಾತಿವಿಹಿತಂ ಕರ್ಮ ರಾಗದ್ವೇಷವಿವರ್ಜಿತಂ ।
ಕುರ್ವತಃ ಕ್ಷೀಯತೇ ಪೂರ್ವಮನ್ಯಬಂಧಶ್ಚ ನೇಷ್ಯತೇ ॥ ೪ ॥

ಅಪೂರ್ವಸಂಭವಾಭಾವಾತ್ಕ್ಷಯಂ ಯಾತೇ ತು ಕರ್ಮಣಿ ।
ದಾಲ್ಭ್ಯ ಸಂಸಾರವಿಚ್ಛೇದಃ ಕಾರಣಾಭಾವಸಂಭವಃ ॥ ೫ ॥

ಭವತ್ಯಸಂಶಯಂ ಚಾಸ್ಯಚ್ಛ್ರ್ಯತಾಮತ್ರಕಾರಣಂ ।
ಸಂಸಾರವಿಚ್ಯುತೇ ದಾರ್ಲ್ಭ್ಯಸಮಾಸಾದ್ವದತೋ ಮಮ ॥ ೬ ॥

ಗೃಹೀತಾ ಕರ್ಮಣಾ ಯೇನ ಪುಂಸಾ ಜಾತಿರ್ದ್ವಿಜೋತ್ತಮ ।
ತತ್ಪ್ರಾಯಶ್ಚಿತ್ತಭೂತಂ ವೈ ಶೃಣು ಕರ್ಮಕ್ಷಯಾವಹಂ ॥ ೭ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಂತ್ಯಾನಾಂ ಚ ಸತ್ತಮ ।
ಸ್ವಜಾತಿವಿಹಿತಂ ಕರ್ಮ ರಾಗದ್ವೇಷ ವಿವರ್ಜಿತಂ ॥ ೮ ॥

---

ಸೆಂದು ತಿಳಿ ಈ ಅವಿದ್ಯಾಕೃತ ಸಂಸಾರದಿಂದ ಬಿಡುಗಡೆಹೊಂದಿ ಮುಕ್ತನಾಗಬೇಕಾದರೆ ಏನು ಮಾಡಬೇಕೆಂಬುದನ್ನು ಸಂಕ್ಷೇಪವಾಗಿ ವಿವರಿಸುತ್ತೇನೆ, ಕೇಳು

೪-೧೧. ಯಾವ ಮನುಷ್ಯನು ರಾಗದ್ವೇಷಗಳನ್ನು ಬಿಟ್ಟವನಾಗಿ ತನ್ನ ಜಾತಿಗೆ ವಿಹಿತವಾದ ಕರ್ಮವನ್ನು ಮಾಡುತ್ತಿರುವನೋ ಅಂತಹವನು ಜನ್ಮಾಂತರದ ಕರ್ಮಗಳೆಲ್ಲವನ್ನೂ ಕಳೆದುಕೊಳ್ಳುವನು ಮತ್ತಾವ ಕರ್ಮಬಂಧವೂ ಅವನನ್ನು ಸೋಕಲಾರದು ಈ ಕರ್ಮವೆಂಬುವುದು ಮೊದಲೂ ಇರಲಿಲ್ಲ ಮುಕ್ತಿಯಾದ ಮೇಲೂ ಇರುವುದಿಲ್ಲ ಈರೀತಿ ಕಾರಣಭಾವದಿಂದ ಹುಟ್ಟಿದ ಕರ್ಮವು ಸಂಸಾರ ಬಂಧನವು ಬಿಡುಗಡೆಯಾದ ಮೇಲೆ ತಾನಾಗಿಯೇ ಬಿಟ್ಟುಹೋಗುವುದು. ಎಲೈ ದಾಲ್ಭ್ಯನೇ! ಈ ವಿಷಯದಲ್ಲಿ ಸಂಶಯ ಪರಿಹಾರವಾಗಬೇಕಾದರ ಮತ್ತೊಂದು ಕಾರಣವನ್ನು ಹೇಳುತ್ತೇನೆ, ಕೇಳು ಒಟ್ಟಿನ ಮೇಲೆ ಸಂಸಾರದಿಂದ ಮುಕ್ತಿಯಾಗಬೇಕಾದರೆ ಆಚರಿಸಬೇಕಾದ ಕರ್ಮವೇನೆನ್ನುವಿಯೋ,—ಮನುಷ್ಯನು ತನ್ನ ಪೂರ್ವ ಕರ್ಮವಾಸನಾನುಸಾರವಾಗಿ ಯಾವ ಜಾತಿಯಲ್ಲಿ ಹುಟ್ಟುತ್ತಾನೆಯೋ ಆ ಜಾತಿಯೇ ಕರ್ಮಕ್ಷಯದ ಕಾರಣಕ್ಕೆ ಪ್ರಾಯಶ್ಚಿತ್ತಭೂತವಾದ ಒಂದು ಅಂಗವೆಂದು ತಿಳಿದು, ಬ್ರಾಹ್ಮಣನಾಗಲೀ, ಕ್ಷತ್ರಿಯನಾಗಲೀ, ವೈಶ್ಯನಾಗಲೀ, ಶೂದ್ರನಾಗಲೀ, ಚಂಡಾಲನಾಗಲೀ, ತನ್ನ ಜಾತಿಧರ್ಮದಲ್ಲಿ ಹೇಳಿರುವಂತೆ ರಾಗದ್ವೇಷರಹಿತವಾದ ಸ್ವಧರ್ಮಾನುಷ್ಠಾನವನ್ನು ಮಾಡುತ್ತಾ ಬಂದರೆ, ಆ ಕರ್ಮವೇ ಅಕ್ಷಯವಾಗಿ ಪರಿಣಮಿಸಿ ಅದರಿಂದ

ಜಾತಿಪ್ರದಸ್ಯಾಕ್ಷಯದಂ ತದೇವಾದ್ಯಸ್ಯ ಕರ್ಮಣಃ ।
ಜ್ಞಾನಕಾರಣಭಾವಂ ಚ ತದೇವ ಪ್ರತಿಪದ್ಯತೇ ॥ ೯ ॥

ಪುಮಾಂಶ್ಚಾಧಿಗತಜ್ಞಾನೋ ಭೇದಂ ನಾಪ್ನೋತಿ ಸತ್ತಮ ।
ಬ್ರಹ್ಮಣಾ ವಿಷ್ಣು ಸಂಜ್ಞೇನ ಪರಮೇಣಾವ್ಯಯಾತ್ಮನಾ ॥ ೧೦ ॥

ಏತತ್ತೇ ಕಥಿತಂ ದಾಲ್ಭ್ಯ ಸಂಸಾರಸ್ಯ ಸಮಾಸತಃ ।
ಕಾರಣಂ ಭವಮುಕ್ತಿಶ್ಚ ಜಾಯತೇ ಯೋಗಿನೋ ಯಥಾ ॥ ೧೧ ॥

---

ಚಿತ್ತಶುದ್ಧಿಯುಂಟಾಗಿ ಜ್ಞಾನಕಾರಣಭಾವವಾಗಿ ಪರಿಣಮಿಸುತ್ತವೆ ಅಲ್ಲಿಂದ ಮುಂದೆ ಆ ಮನುಷ್ಯನ ಜ್ಞಾನವು ಅಭಿವೃದ್ಧಿಯಾಗುತ್ತಾ ಹೋಗಿ ಜೀವಬ್ರಹ್ಮರಲ್ಲಿ ಅಭೇದ ಭಾವವು ಉಂಟಾಗುತ್ತಾ ಬಂದು ಕಡೆಗೆ ಅವ್ಯಯಾತ್ಮನಾದ ಮಹಾವಿಷ್ಣುವೆಂಬ ಹೆಸರಿನ ಸರಮಶ್ರೇಷ್ಠನಾದ ಪರಬ್ರಹ್ಮ ವಸ್ತುವಿನೊಡನೆಯೂ ಐಕ್ಯವಾಗಿ ಹೋಗುತ್ತಾನೆ ಎಲೈ ದಾಲ್ಭ್ಯನೇ, ಸಂಸಾರಬಂಧದಿಂದ ಮುಕ್ತಿಹೊಂದುವ ಕ್ರಮವೂ, ಯೋಗಿಗಳಿಗೂ ಸಹ ಅದೆಂತು ಮುಕ್ತಿಯುಂಟಾಗುವುದೆಂಬ ಕ್ರಮವೂ ಈಗ ಒಟ್ಟಿನಮೇಲೆ ನಿನಗೆ ಹೇಳಲ್ಪಟ್ಟಿತು

ಟಿಪ್ಪಣಿ —ದಾಲ್ಭ್ಯರಿಗೆ ಉಪದೇಶಿಸಿದ ಈ ನೀತಿಯಲ್ಲಿ ಕರ್ಮಬ್ರಹ್ಮವಿಚಾರವು ಸಂಪೂರ್ಣವಾಗಿ ತುಂಬಿದೆ. ಈ ಮಾತು ಅಶೂನ್ಯಶಯನ ವ್ರತವನ್ನು ಮಾಡಿದವನು ಮೂರು ಜನ್ಮಗಳಲ್ಲಿ ಸುಖವನ್ನು ಹೊಂದುವನು, ಎಂಬ ಮಾತಿನ ಪ್ರಸಂಗದಲ್ಲಿ ಬಂದಿರುವುದಾಗಿದೆ ಜನ್ಮಕರ್ಮಗಳನ್ನು ಕಳದುಕೊಂಡು ಪರಬ್ರಹ್ಮವಸ್ತುವಿನೊಡನೆ ಐಕ್ಯನಾಗಿ ಮೋಕ್ಷವನ್ನು ಪಡೆದು, ಆ ಮೂಲಕ ಜನನ ಮರಣದುಃಖವನ್ನು ಕಳೆದುಕೊಳ್ಳಬೇಕೆಂಬುವುದೇ ಮನುಷ್ಯ ಜನ್ಮದ ಮುಖ್ಯಗುರಿಯೆಂಬುದು ಪ್ರತಿಯೊಬ್ಬರೂ ತಿಳಿಯಬೇಕಾದ ವಿಚಾರವಾಗಿದೆ ಹೀಗಿರುವಲ್ಲಿ ಕಾಮ್ಯಕರ್ಮಗಳನ್ನು ಮಾಡಿ ಪುನರ್ಜನ್ಮಾದಿಗಳನ್ನು ಹೊಂದಿ ಪುನಃ ಪುನಃ ಕರ್ಮಭೂಮಿಯಲ್ಲಿ ಹುಟ್ಟಬೇಕೆಂಬ ಆಶೆಯುಳ್ಳವನಿಗೆ ಈ ಶರೀರ ಬಂಧನವು ತಪ್ಪುವುದೇ ಇಲ್ಲ ಈ ಕರ್ಮಗಳಿಂದ ಚಿತ್ತಶುದ್ಧಿಯನ್ನು ಪಡೆದು ಆ ಬಳಿಕ ಪರಬ್ರಹ್ಮವಸ್ತುವಿನ ಜ್ಞಾನವನ್ನು ಹೊಂದಿ ತಾನೂ ಜ್ಞಾನಸ್ವರೂಪನಾಗದ ಹೊರತು ಅವನಿಗೆ ಸಂಸಾರಭೀತಿಯು ತಪ್ಪುವುದೇ ಇಲ್ಲ. ಆದಕಾರಣ ಜ್ಞಾನಾಭ್ಯಾಸವನ್ನು ಮಾಡಬೇಕಾದ ಮುಮುಕ್ಷುಗಳು ಅನುಸರಿಸಬೇಕಾದ ನಿಯಮಗಳು ಈ ಉಪದೇಶ ಭಾಗದಲ್ಲಿ ಸಂಪೂರ್ಣವಾಗಿ ತುಂಬಿವೆ

ಅವನ್ನು ನಮ್ಮ ಬುದ್ಧಿಗೆ ತೋರಿದಮಟ್ಟಿಗೆ ಇಲ್ಲಿ ವಿವರಿಸುತ್ತೇವೆ

ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ||

ಎಂಬ ಉಪದೇಶವಚನವನ್ನನುಸರಿಸಿ ನಾಲ್ಕು ವರ್ಣಗಳವರೂ ತಮ್ಮ ತಮ್ಮ ಜಾತಿಗನುಸಾರವಾಗಿ ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನನುಸರಿಸಿ ಕರ್ಮ ಮಾಡುತ್ತಾ ಬರಬೇಕೆಂಬುದೇ ಇಲ್ಲಿ ಮುಖ್ಯವಾದ ಅಭಿಪ್ರಾಯ ಸ್ವಧರ್ಮತ್ಯಾಗ ಮಾಡಿದವನಿಗ ಇಹಪರಗತಿಯು ತಪ್ಪಿಹೋಗುವುದು. ಇದು ಪರಮೇಶ್ವರನ ಆಜ್ಞೆ ಶ್ರುತಿಸ್ಮೃತಿಗಳೆರಡೂ ನನ್ನ ಆಜ್ಞಾವಚನಗಳೆಂದೂ ಅದರಲ್ಲಿ ಹೇಳಿರುವ ಧರ್ಮ ಗಳನ್ನು ಮೀರುವವನು ಆಜ್ಞಾಚ್ಛೇದಿಯಾಗುವವನಲ್ಲದ ನನಗೆ ದ್ರೋಹಿಯಾಗಿಯೂ ಪರಿಣಮಿಸಿ ಶಿಕ್ಷಾರ್ಹನಾಗುವನೆಂದೂ ಭಗವಂತನು ಹೇಳಿದಾನೆ ಈ ಕಾಲದಲ್ಲಿ ಸ್ವಧರ್ಮತ್ಯಾಗವುಂಟಾಗಿ ಪರಧರ್ಮಾನುಸರಣವೇ ಹೆಚ್ಚು ಹೆಚ್ಚಾಗುತ್ತಾ ಬಂದಿರು ವುದರಿಂದಲೇ ಮಾನವರೆಲ್ಲರೂ ದೇವರ ಕೋಪಕ್ಕೆ ಪಾತ್ರರಾಗಿ ಕ್ಷಾಮಡಾಮರ ಅನಾ ವೃಷ್ಟಿಯುದ್ಧವೇ ಮುಂತಾದ ಭಯಂಕರ ವಿಪತ್ತುಗಳಿಗೆ ಸಿಕ್ಕಿ ಸಂಕಟಪಡುತ್ತಿರು ವುದನ್ನು ಎಲ್ಲರೂ ಕಣ್ಣಾರ ನೋಡುತ್ತಲೇ ಇರುವರು ಇದನ್ನು ಬುದ್ಧಿಶಾಲಿಗಳಾದ ವರು ತಮ್ಮ ತಮ್ಮಲ್ಲಿಯೇ ಸ್ವಲ್ಪ ವಿಚಾರಮಾಡಿದರ ಇದರ ಸತ್ಯಾಸತ್ಯತೆಯು ವ್ಯಕ್ತ ವಾಗುವುದು. ವೇದಶಾಸ್ತ್ರ ಪುರಾಣೇತಿಹಾಸಾದಿಗಳಲ್ಲವೂ ಈ ವಿಚಾರವನ್ನೇ ನಾಂ ಸಾರಿ ಹೇಳುತ್ತಿರುವುವು

ಇನ್ನು ಹತ್ತನೇ ಶ್ಲೋಕದಲ್ಲಿರುವ ಪುಮಾಂಸ್ತ್ವಾಗತಜ್ಞಾನಃ, ಎಂಬ ವಿಚಾರ ವನ್ನೂ ನಹ ಇಲ್ಲಿ ಸ್ವಲ್ಪ ಪ್ರಸ್ತಾಪಿಸಿ ಬರಯುತ್ತೇವೆ -ಜ್ಞಾನಿಯೆಂಬರ ಪ್ರಾಕೃ ಜ್ಞಾನಿಗೇ |ಜ್ಞಾನಿಯೆಂಬ ಹೆಸರು ಸಲ್ಲುವುದು ಶ್ರೌತ ಸ್ಮಾರ್ತ ಕರ್ಮಗಳನ್ನೂ ಕಾಮ್ಯಕರ್ಮಗಳನ್ನೂ ಮಾಡಿ ಪುನಃ ಪುನಃ ಸುಖವನ್ನು ಬಯಸುತ್ತಾ ಭವಚಕ್ರದಲ್ಲಿ ಸುತ್ತುತ್ತಿರುವವನನ್ನು ಬ್ರಹ್ಮಜ್ಞಾನಿಯೆನ್ನಲಾಗುವುದಿಲ್ಲ ಕರ್ಮದಿಂದ ಶರೀರ ಹುಟ್ಟುವುದು. ಆ ಶರೀರದಿಂದ ಕರ್ಮವನ್ನು ಮಾಡುವುದು ಅದರಿಂದ ಸುಖ ದುಃಖಾನುಭವ ಇಹಪರಗಳಲ್ಲಿ ಪುನಃ ಪುನಃ ಪ್ರವೇಶ ಈರೀತಿ ನಡೆಯುತ್ತಲಿದ್ದರ ಯಾವ ಕಾಲಕ್ಕೂ ಜನನಮರಣಗಳ ಭಯವು ತಪ್ಪುವುದೇ ಇಲ್ಲ ಈ ಭಯವನ್ನು ಕಳೆದುಕೊಳ್ಳಬೇಕಾದರೆ ಶರೀರವು ಹುಟ್ಟದಂತೆ ಮಾಡಿಕೊಳ್ಳಬೇಕು ಹೀಗಾಗ ಬೇಕಾದರೆ ಏನು ಮಾಡಬೇಕೆಂಬ ವಿಚಾರವನ್ನು ಇಲ್ಲಿ ಸೂಕ್ಷ್ಮವಾಗಿ ಬರಯುವೆವು

ಸಂಸಾರಕ್ಕೆ ಶರೀರವೇ ಮುಖ್ಯ ಕಾರಣ ಈ ಶರೀರವೇ ನಾನೆಂಬ ಅಜ್ಞಾನವೇ ಸಂಸಾರಕ್ಕೆ ಕಾರಣ. ಈ ಅಜ್ಞಾನವನ್ನು ಸಂಪೂರ್ಣವಾಗಿ ನಾಶಪಡಿಸುವ ಕ್ರಮ

**॥ ಮಾರ್ಕಂಡೇಯ ಉವಾಚ ॥**

**ಇತಿ ದಾಲ್ಭ್ಯಃ ಪುಲಸ್ತ್ಯೇನ ಯಥಾವತ್ಪ್ರತಿ ಬೋಧಿತಃ ।**
**ಆರಾಧಯಾಮಾಸ ಹರಿಂ ಲೇಭೇ ಕಾಮಾಂಶ್ಚ ವಾಂಛಿತಾನ್ ॥ ೧೨ ॥**

ನಮ್ಮ ವೇದಶಾಸ್ತ್ರಗಳಲ್ಲಿ ಹೇಳಿದೆ ಅಜ್ಞಾನವನ್ನು ಕರ್ಮವು ಎಂದೂ ನಾಶಪಡಿಸ ಲಾರದು. ಅದನ್ನು ನಾಶಪಡಿಸುವ ಶಕ್ತಿ ಜ್ಞಾನಕ್ಕೆ ಮಾತ್ರವೇ ಇದೆ. ಈರೀತಿ, ಅಜ್ಞಾನದಿಂದ ಕರ್ಮವೂ ಕರ್ಮದಿಂದ ಶರೀರವೂ ಹುಟ್ಟುವುದರಿಂದ ಜ್ಞಾನಕ್ಕೆ ಕರ್ಮವು ವಿರೋಧವಾದುದೆಂದು ತಿಳಿಯಬೇಕು. ನಾನು, ನನ್ನದು ಎಂದು ಹೇಳಿ ಕೊಳ್ಳುವ ಪದಾರ್ಥಗಳಲ್ಲಿ ನಾನು ಎಂಬ ಪದಕ್ಕರ್ಥವಾದ ಆತ್ಮ (ಬ್ರಹ್ಮ) ವಸ್ತುವನ್ನೇ ತಾನೆಂದು ತಿಳಿದುಕೊಳ್ಳುವುದೇ ಜ್ಞಾನವು. ಹಾಗಲ್ಲದೆ ನನ್ನ ದೇಹ, ನನ್ನ ಹೆಂಡತಿ, ನನ್ನ ಮನೆ, ನನ್ನ ಹಣ ಎಂಬುದಾಗಿ ಆತ್ಮೇತರ ಪದಾರ್ಥಗಳಲ್ಲಿ ಆತ್ಮನನ್ನು ಆರೋಪಿಸುವುದೇ ಅಜ್ಞಾನವು. ಇಂತಹ ಅಜ್ಞಾನವು ಕರ್ಮದಿಂದ ನಾಶವಾಗುವುದಿಲ್ಲ ಮತ್ತು ಶಬ್ದಸ್ಪರ್ಶರೂಪರಸಗಂಧಾತ್ಮಕವಾದ ವಿಷಯಾಭಿಲಾಷಗಳೂ ಸ್ವಲ್ಪವೂ ಕಡಮೆಯಾಗುವುದೇ ಇಲ್ಲ. ಮತ್ತೆ ಅವು ಹೆಚ್ಚು ಹೆಚ್ಚುತ್ತಲೇ ಹೋಗುತ್ತವೆ (ಪುರಂಜನನ ವಿಷಯಾಭಿಲಾಷೆಯನ್ನು ಮನನಮಾಡಿರಿ) ಇದರಿಂದ ಕರ್ಮವೂ ಬೆಳೆ ಯುತ್ತ ಹೋಗುತ್ತದೆ. ಆದ್ದರಿಂದ ವಿವೇಕಿಯಾದವನು ಜ್ಞಾನಸ್ವರೂಪವೇನೆಂಬು ದನ್ನು ವಿಚಾರಿಸಬೇಕು. ವೇದೋಕ್ತಕರ್ಮಗಳನ್ನೇನೋ ತಪ್ಪದೆ ಮಾಡಬೇಕು. ಆದರೆ ಫಲಾಭಿಸಂಧಿಯಿಂದ ಮಾಡದೆ ಈಶ್ವರಾರ್ಪಣವಾಗಿ ಮಾಡಬೇಕು. ಇದರಿಂದ ಚಿತ್ತಶುದ್ಧಿಯುಂಟಾಗಿ ಕ್ರಮೇಣ ಜ್ಞಾನಿಯಾಗಿ ಆ ಅದ್ವೈತಜ್ಞಾನದಿಂದ ಸುಲಭ ವಾಗಿ ಮೋಕ್ಷಹೊಂದುತ್ತಾನೆ. ಇಷ್ಟು ವಿಷಯವನ್ನು ತಿಳಿಸುವುದಕ್ಕಾಗಿಯೇ,

ಬ್ರಹ್ಮಣಾ ವಿಷ್ಣುಸಂಜ್ಞೇನ ಪರಮೇಣಾವ್ಯಯಾತ್ಮನಾ ।
ಪುಮಾಂಶ್ಚಾಧಿಗತಜ್ಞಾನೋ ಭೇದಂ ನಾಪ್ನೋತಿ ಸತ್ತಮ ॥

ಎಂಬ ಅದ್ವೈತಾನಂದಮುಕ್ತಿಸ್ವರೂಪವನ್ನು ಪುಲಸ್ತ್ಯರು ದಾಲ್ಭ್ಯರಿಗೆ ಹೇಳಿರುವರೆಂದು ಇಲ್ಲಿ ಅಭಿಪ್ರಾಯವಾಗುತ್ತದೆ.

೧೨-೧೪ ಈ ರೀತಿಯಾಗಿ ಮಹಾಭಾಗವತೋತ್ತಮನಾದ ದಾಲ್ಭ್ಯನು ಪುಲಸ್ತ್ಯಮಹರ್ಷಿಯಿಂದ ಬೋಧಿಸಲ್ಪಟ್ಟವನಾಗಿ ಮಹಾವಿಷ್ಣುವನ್ನು ಭಕ್ತಿಯಿಂದಾ ರಾಧಿಸಿ ತನ್ನ ಮನಸ್ಸಿನಲ್ಲಿದ್ದ ಅಭಿಲಾಷೆಗಳನ್ನೆಲ್ಲಾ ಪಡೆದನು. ಆದ್ದರಿಂದಲೈ ವಜ್ರ

ತಥಾ ತ್ವಮಪಿ ರಾಜೇಂದ್ರ ಕೇಶವಾರಾಧನಂ ಕುರು ।
ಆರಾಧ್ಯ ತಂ ಜಗನ್ನಾಥಂ ನ ಕಶ್ಚಿದವಸೀದತಿ ॥ ೧೩ ॥

ಏತನ್ಮಯೋಕ್ತಂ ಸಕಲಂ ತವ ಭೂಮಿಪ ಪೃಚ್ಛತಃ ।
ಅನಾರಾಧ್ಯಾಚ್ಯುತಂ ದೇವಂ ಕಃ ಕಾಮಾನಾಪ್ನುಯಾನ್ನರಃ ॥ ೧೪ ॥

॥ ವಜ್ರ ಉವಾಚ ॥

ಭಗವಾನವತೀರ್ಣೋಽಭೂನ್ಮರ್ತ್ಯಲೋಕಮಿಹಾಚ್ಯುತಃ ।
ಭಾರಾವತಾರಣಾರ್ಥಾಯ ಭುವೋ ಭೂಮಿಪತಿರ್ಹರಿಃ ॥ ೧೫ ॥

ಮಾನುಷತ್ವೇ ಚ ಗೋವಿಂದೋ ಮಮ ಪೂರ್ವಪಿತಾಮಹಃ ।
ಚಕಾರ ಪ್ರೀತಿಮತುಲಾಂ ಪಾಂಡುಪುತ್ರೈಃ ಸಹ ದ್ವಿಜ ॥ ೧೬ ॥

ಸಾರಥ್ಯಂ ಕೃತವಾಂಶ್ಚೈವ ತೇಷಾಂ ಸರ್ವೇಶ್ವರೋ ಹರಿಃ ।
ನಿಸ್ತೀರ್ಣೋ ಯೇನ ಭೀಷ್ಮೌಘೋ ಕುರುಸ್ಸೈನ್ಯಮಹೋದಧಿಃ ॥ ೧೭ ॥

ಮಹಾರಾಜನೆ! ಅದರಂತೆ ನೀನೂ ಸಹ ಮಹಾವಿಷ್ಣುವನ್ನು ಪೂಜಿಸು. ಯಾರು ಭಗವಂತನನ್ನು ಭಕ್ತಿಯಿಂದ ಪೂಜಿಸುವರೋ ಅವರು ಸೌಖ್ಯವನ್ನು ಹೊಂದುತ್ತಾರೆ ಎಲೈ ವಜ್ರರಾಜನೇ! ನೀನು ಕೇಳುತ್ತಿರುವ ಎಲ್ಲಾ ಪ್ರಶ್ನೆಗಳಿಗೂ ನಾನು ಉತ್ತರ ಹೇಳುತ್ತಾ ಬಂದಿದೇನೆ. ಭಗವಂತನನ್ನು ಆರಾಧಿಸದಿದ್ದವನಿಗೆ ಇಷ್ಟಾರ್ಥಗಳಂತು ಸಿದ್ಧಿಯಾಗುವುವು.

೧೫-೨೪ ಈ ಭೂಲೋಕದಲ್ಲಿ ದ್ವಾಪರಯುಗದಲ್ಲಿ ಭಗವಂತನಾದ ಮಹಾ ವಿಷ್ಣುವು ಶ್ರೀಕೃಷ್ಣಾವತಾರವನ್ನು ಮಾಡಿದುದು ಸರಿಯಷ್ಟೆ? ಆಗ ಭೂಭಾರ ಪರಿಹಾರಾರ್ಥವಾಗಿ ಅವತಾರಮಾಡಿದ್ದ ಶ್ರೀಕೃಷ್ಣನು ಪಾಂಡುಪುತ್ರರಾದ ಪಾಂಡವರ ವಿಷಯದಲ್ಲಿ ಬಹಳ ಪ್ರೀತಿಯಿಂದಿದ್ದನು. ಮತ್ತು ಆ ಸರ್ವೇಶ್ವರನಾದ ಶ್ರೀಹರಿಯು ಅರ್ಜುನನಿಗೆ ಸಾರಥ್ಯಮಾಡಿ ಬಹಳ ಉಪಕಾರಮಾಡಿದನು. ಭೀಷ್ಮನೇ ಮೊದಲಾದ ಮಹಾ ಮಹಾ ರಥಿಕರುಳ್ಳ ಕೌರವಸೈನ್ಯವೆಂಬ ಮಹಾಸಮುದ್ರವನ್ನು ದಾಟಲು ಪಾಂಡವರಿಗೆ ಶ್ರೀಕೃಷ್ಣನು ನಾವೆಯೋಪಾದಿಯಲ್ಲಿ ಉಪಕಾರಮಾಡಿದನು ಆ ಮಹಾ ಭಾಗನು ಪಾಂಡುಪುತ್ರರಿಗೆ ಸಕಲ ವಿಧದಲ್ಲಿಯೂ ತಂದೆಯಂತೆ ಇದ್ದುಕೊಂಡು ಸಂರಕ್ಷಣೆಮಾಡಿದನು ಆ ಪಾಂಡು ಪುತ್ರರಾದ ಪಾಂಡವರೇ ಧನ್ಯರು ಏಕೆಂದರೆ

ಉಪಕಾರೀ ಮಹಾಭಾಗಃ ಸ ತೇಷಾಂ ಸರ್ವವಸ್ತುಷು ।
ಕೇಶವಃ ಪಾಂಡುಪುತ್ರಾಣಾಂ ಸುತಾನಾಂ ಜನಕೋ ಯಥಾ ॥ ೧೮ ॥

ಧನ್ಯಾಸ್ತೇ ಕೃತಪುಣ್ಯಾಶ್ಚ ತೇ ಮೇ ಪಾಂಡುಸುತಾ ಮತಾಃ ।
ವಿವಿಶುರ್ಯೇ ಪರಿಷ್ವಂಗೈರ್ಗೋವಿಂದಭುಜಪಂಜರಂ ॥ ೧೯ ॥

ರಾಜಹೇತೋರರೀನ್ಹತ್ವಾ ರಕಸ್ಮಾತ್ಪಾಂಡುನಂದನಾಃ ।
ಸಪ್ತಲೋಕೈಕ ನಾಥೇನ ಯೇ ಭವಂತ್ಯೇಕಾಯಿನಃ ॥ ೨೦ ॥

ಆತ್ಮಾನಮನುಗಚ್ಛಾಮಿ ಭಗವನ್ಗತ ಕಲ್ಮಷಂ ।
ಜಾತಂ ನಿರ್ಧೂತಪಾಪೇಽಸ್ಮಿನ್ ಕುಲೇ ವಿಷ್ಣುಪರಿಗ್ರಹೇ ॥ ೨೧ ॥

ಏವಂ ದೇವವರಸ್ತೇಷಾಂ ಪ್ರಸಾದಸುಮುಖೋ ಹರಿಃ ।
ಪೃಚ್ಛತಾಂ ಕಶ್ಚಿದಾಚಷ್ಟ ಕಿಂಚಿದ್ಗುಹ್ಯಂ ಮಹಾತ್ಮನಾಂ ॥ ೨೨ ॥

ಗುಹ್ಯಾನ್ ಜನಾರ್ದನಂ ಯಾಂಸ್ತು ಧರ್ಮಪುತ್ರೋ ಯುಧಿಷ್ಠಿರಃ ।
ಪಪ್ರಚ್ಛ ಧರ್ಮಾನಖಿಲಾನ್ಸ್ತಾನ್ಸಮಾಖ್ಯಾತುಮರ್ಹಸಿ ॥ ೨೩ ॥

---

ಗೋವಿಂದನ ಆಲಿಂಗನದಿಂದ ಅವರೆಲ್ಲರೂ ಸ್ವಾಮಿಯ ಬಾಹುಪಂಜರವಲ್ಲಿ ನೇರಿಕೊಂಡು ಬಿಟ್ಟಿದ್ದರು. ಆ ಪುಣ್ಯಶಾಲಿಗಳಾದ ಪಾಂಡವರು ರಾಜ್ಯಕಾರಣದಿಂದ ಹಠಹಿಡಿದು ಹಗೆತನಮಾಡಿದ ಕೌರವರನ್ನು ಅಕಸ್ಮಾತ್ತಾಗಿ ಯುದ್ಧರಂಗದಲ್ಲಿ ಕೊಂದರಲ್ಲದೆ, ತಾವೂ -ಕೂಡ ಸುಖವಾಗಿ ರಾಜ್ಯವಾಳಿ ಸಪ್ತಲೋಕಾಧಿಪತಿಯಾದ ಪರಮಾತ್ಮನ ಬಳಿ ಸಾಯುಜ್ಯವದವಿಯನ್ನು ಪಡೆದು ಧನ್ಯರಾದರು. ಎಲೈ ಮಾರ್ಕಂಡೇಯ ಮಹಾಮುನಿಯೇ! ನಾನೂ ಕೂಡ ಆ ಪರಮಾತ್ಮನ ಪಾದಾರವಿಂದದಲ್ಲಿ ನೇರಲು ಪಾಪಸಮುದ್ರವನ್ನು ದಾಟಿಹೋಗಬೇಕೆಂದಿದ್ದೇನೆ ಮಹಾವಿಷ್ಣುವು ಅವತಾರಮಾಡಿದ ಪರಮಪವಿತ್ರವಾದ ಈ ವಂಶದಲ್ಲಿ ನಾನೂ ಕೂಡ ಹುಟ್ಟಿರುತ್ತೇನೆ ಆಗ ಕೃಷ್ಣಾವತಾರ ಮಾಡಿದ್ದ ಕಾಲದಲ್ಲಿ ಮಹಾತ್ಮನಾದ ಪರಮಾತ್ಮನು ಪ್ರಶ್ನೆಮಾಡಿದವರಿಗೆಲ್ಲಾ ಧರ್ಮಸೂಕ್ಷ್ಮವನ್ನು ವಿವರಿಸಿದನು. ಮತ್ತ ಧರ್ಮಪುತ್ರನಾದ ಯುಧಿಷ್ಠಿರನಿಗೆ ಪರಮರಹಸ್ಯವಾದ ಧರ್ಮಮಾರ್ಗಗಳನ್ನೆಲ್ಲಾ ಉಪದೇಶಮಾಡಿದನು ಧರ್ಮಾರ್ಥ ಕಾಮಮೋಕ್ಷಗಳಲ್ಲಿ ಯಾವ ಯಾವುದು

ಧರ್ಮಾರ್ಥಕಾಮಮೋಕ್ಷೇಷು ಯದ್ಗುಹ್ಯಂ ಮಧುಸೂದನಃ ।
ತೇಷಾಮಪ್ಯೋಚಧ್ಭಗವಾಂಚ್ಛ್ರೋತುಮಿಚ್ಛಾಮಿ ತತ್ತ್ವತಃ ॥ ೨೪ ॥

॥ ಮಾರ್ಕಂಡೇಯ ಉವಾಚ ॥

ಬಹೂನಿ ಧರ್ಮಗುಹ್ಯಾನಿ ಧರ್ಮಪುತ್ರಾಯ ಕೇಶವಃ ।
ಪುರಾ ಪ್ರೋವಾಚ ರಾಜೇಂದ್ರ ಪ್ರಸಾದಸುಮುಖೋ ಹರಿಃ ॥ ೨೫ ॥

ಶರತಲ್ಪಗತಾದ್ಭೀಷ್ಮಾದ್ಧರ್ಮಾಂಚ್ಛ್ರುತ್ವಾ ಯುಧಿಷ್ಠಿರಃ ।
ಪೃಷ್ಟವಾನ್ಸ ಜ್ಜಗನ್ನಾಥಂ ತನ್ಮೇ ನಿಗದತಃ ಶೃಣು ॥ ೨೬ ॥

ಪಂಚಮೇನಾಶ್ವಮೇಧೇನ ಯದಾ ಸ್ನಾತೋ ಯುಧಿಷ್ಠಿರಃ ।

॥ ಯುಧಿಷ್ಠಿರ ಉವಾಚ ॥

ಭಗವಾನ್ವೈಷ್ಣವಾ ಧರ್ಮಾಃ ಕಿಂ ಫಲಾಃ ಕಿಂ ಪರಾಯಣಾಃ ॥ ೨೭ ॥

ಕಿಂ ಕೃತ್ಯಮಧಿಕೃತ್ಯೈತೇ ಭವತೋತ್ಪಾದಿತಾಃ ಪುರಾ ।
ಯದಿ ತೇ ಪಾಂಡವಸ್ನೇಹೋ ವಿದ್ಯತೇ ಮಧುಸೂದನ ॥ ೨೮ ॥

---

ರಹಸ್ಯವಾಗಿರುವುದೋ, ಯಾವ ಯಾವ ಧರ್ಮಗಳನ್ನು ಕೃಷ್ಣನು ಧರ್ಮರಾಯನಿಗೆ ಹೇಳಿದನೋ ಅದನ್ನೆಲ್ಲಾ ದಯವಿಟ್ಟು ಈಗ ನನಗೆ ತಿಳಿಸಬೇಕು ! ಮುನಿರಾಯ !

೨೫-೨೬ ಮಾರ್ಕಂಡೇಯನು ಹೇಳುತ್ತಾನೆ -ಪರಮಾತ್ಮನಾದ ಕೇಶವನು ಧರ್ಮರಾಯನಿಗೆ ಪೂರ್ವದಲ್ಲಿ ಬಹಳವಾದ ಧರ್ಮರಹಸ್ಯಗಳನ್ನು ತಿಳಿಸಿದನು ಅದಕ್ಕೆ ಮೊದಲು ಧರ್ಮರಾಯನು ಶರತಲ್ಪದಲ್ಲಿ ಮಲಗಿದ್ದ ಭೀಷ್ಮರಿಂದ ಸಕಲ ಧರ್ಮಗಳನ್ನು ಕೇಳಿ ತಿಳಿದಿದ್ದನು ಮತ್ತು ಯಾವ ಧರ್ಮ ರಹಸ್ಯಗಳನ್ನು ಭಗವಂತನಿಂದ ತಿಳಿದುಕೊಂಡನೋ ಅದನ್ನು ತಿಳಿಸುತ್ತೇನೆ, ಕೇಳು. ಯುಧಿಷ್ಠಿರನು ಈ ಧರ್ಮರಹಸ್ಯಗಳನ್ನು ಐದನೇ ಸಾರಿ ಅಶ್ವಮೇಧಕ್ಕಾಗಿ ಸಂಕಲ್ಪಮಾಡಿ ಕುಳಿತಿದ್ದ ಸಮಯದಲ್ಲಿ ತಿಳಿದುಕೊಂಡನು.

೨೭-೩೨ ಭಗವನ್ ! ಪೂರ್ವದಲ್ಲಿ ಸಕಲ ಧರ್ಮಗಳೂ ನಿನ್ನಿಂದಲೇ ಹುಟ್ಟಿದುವು. ಆ ವೈಷ್ಣವ ಧರ್ಮಗಳನ್ನು ಕೇಳಿ ಓದಿ ತಿಳಿದವರಿಗೆ ಏನು ಫಲವಾಗುವುದು ? ಅವರು ಮಾಡಬೇಕಾದ ಕೆಲಸವೇನು ? ನಿಜವಾಗಿ ನಿನಗೆ ಪಾಂಡವರಾದ ನಮ್ಮಲ್ಲಿ ಪ್ರೀತಿ ಇದ್ದರೆ ದಯವಿಟ್ಟು ಅದನ್ನೆಲ್ಲವನ್ನೂ ನಮಗೆ ತಿಳಿಸು ಯಾವ ಧರ್ಮಗಳು ಪರಮಪವಿತ್ರವಾದವುಗಳೋ ಯಾವುದು ಸಕಲ ಪಾಪಗಳನ್ನೂ ನಾಶಮಾಡಲು ಶಕ್ತ

ಶ್ರೋತವ್ಯಾಸ್ತೇ ಮಯಾ ಧರ್ಮಾಸ್ತತಸ್ತಾನ್ಕಥಯಾಖಿಲಾನ್ ।
ಪವಿತ್ರಾಶ್ಚೈವ ಯೇ ಧರ್ಮಾಃ ಸರ್ವಪಾಪಪ್ರಣಾಶನಾಃ ॥ ೨೯ ॥

ತವ ವಕ್ತ್ರಚ್ಯುತಾ ದೇವ ಸರ್ವಧರ್ಮೇಷ್ವನುತ್ತಮಾಃ ।
ಯಾಂಛ್ರುತ್ವಾ ಬ್ರಹ್ಮಹಾ ಗೋಘ್ನಃ ಪಿತೃಘ್ನೋ ಗುರುತಲ್ಪಗಃ ॥ ೩೦ ॥

ಸುರಾಪೋ ವಾ ಕೃತಘ್ನಶ್ಚ ಮುಚ್ಯತೇ ಸರ್ವಕಿಲ್ಬಿಷೈಃ ।
ಏತನ್ಮೇ ಕಥಿತಂ ಸರ್ವಂ ಸಭಾಮಧ್ಯೇ ಸುರೋತ್ತಮ ॥ ೩೧ ॥

ವಸಿಷ್ಠಾದ್ಯೈರ್ಮಹಾಭಾಗೈರ್ಮುನಿಭಿರ್ಭಾವಿತಾತ್ಮಭಿಃ ।
ತತೋಽಹಂ ತವ ದೇವೇಶ ಪಾದಮೂಲಮುಪಾಗತಃ ॥ ೩೨ ॥

ಧರ್ಮಾನ್ಕಥಯ ತಾನ್ದೇವ ಯದ್ಯಹಂ ಭವತಃ ಪ್ರಿಯಃ ।
ಶ್ರುತ್ವಾ ಮೇ ಮಾನವಾನ್ಧರ್ಮಾನ್ವಾಸಿಷ್ಠಾನ್ವಾ ಮಹಾಫಲಂ ॥ ೩೩ ॥

ಪರಾಶರಕೃತಾಂಶ್ಚೈವ ತಥಾತ್ರೇಯಸ್ಯ ಧೀಮತಃ ।
ಶ್ರುತ್ವಾ ಶಂಖಸ್ಯ ಗಾರ್ಗ್ಯಸ್ಯ ಲಿಖಿತಸ್ಯ ಯಮಸ್ಯ ಚ ॥ ೩೪ ॥

---

ಹಾಗಿರುವುದೋ ಅಂತಹ ಪರಮಶ್ರೇಷ್ಠವಾದ ಧರ್ಮಗಳನ್ನು ನಿನ್ನ ಮುಖದಿಂದ ಕೇಳಬೇಕೆಂದು ಆಶಪಡುತ್ತೇನೆ. ಯಾವ ಈ ಸಕಲ ಧರ್ಮಗಳನ್ನೂ ಕೇಳಿದ ಮಾತ್ರದಿಂದಲೇ ಬ್ರಹ್ಮಹತ್ಯಾಮಾಡಿದವನೂ, ಗೋಹತ್ಯಮಾಡಿದವನೂ, ಪಿತೃಹತ್ಯಮಾಡಿದ ಮಹಾಪಾಪಿಯೂ, ಗುರುಗಳ ಹಾಸಿಗೆಯಲ್ಲಿ ಮಲಗಿದ ಪಾಪಿಯೂ, ಮದ್ಯಪಾನ ಮಾಡಿದವನೂ, ಕೃತಘ್ನನೂ ಸಹ ತಮ್ಮ ಸಕಲ ಪಾಪಗಳನ್ನೂ ಕಳದುಕೊಂಡು ಶುದ್ಧರಾಗುವರೋ ಅಂತಹ ಪರಮಪವಿತ್ರವಾದ ಧರ್ಮಗಳು ಇವೇ ಸಭಾಮಧ್ಯದಲ್ಲಿ ಒಮ್ಮೆ ಮಹಾತ್ಮರಾದ ವಸಿಷ್ಠಾದಿ ಮುನಿಗಣಗಳಿಂದ ಶ್ರವಣವಾಗಿದ ಈಗ ಅದನ್ನು ನಿನ್ನ ಮುಖದಿಂದ ಸಂಪೂರ್ಣವಾಗಿ ತಿಳಿಯುವುದಕ್ಕಾಗಿ ನಿನ್ನ ಪಾದಪದ್ಮವನ್ನು ಆಶ್ರಯಿಸುತ್ತೇನೆ

೩೩-೩೯ ಮಹಾಪ್ರಭುವೆ! ನನ್ನ ಮೇಲೆ ನಿನಗೆ ನಿಜವಾಗಿ ಪ್ರೀತಿ ಇದ್ದರ, ನಾನು ನಿನಗೆ ಇಷ್ಟನಾದವನಾದರೆ ಧರ್ಮ ರಹಸ್ಯಗಳನ್ನು ಉಪದೇಶಿಸಿ ಕೃತಾರ್ಥನನ್ನಾಗಿ ಮಾಡು ಇದುವರೆಗೆ ನಾನು ಈ ಕೆಳಗೆ ಕಂಡ ಋಷಿಗಳು ವಿವರಿಸಿದ ಧರ್ಮ

ಜಾಬಾಲೇಶ್ಚ ಮಹಾಬಾಹೋರ್ಮುನೇರ್ದ್ವೈಪಾಯನಸ್ಯ ಚ ।
ಉಮಾಮಹೇಶ್ವರಾಶ್ಚೈವ ಜಾತಿಧರ್ಮಾಶ್ಚ ಪಾವನಾಃ ॥ ೩೫ ॥

ಗುಣಸ್ಯ ಗುಣಬಾಹೋಶ್ಚ ಕಾಶ್ಯಪೇಯಾಸ್ತಥೈವ ಚ ।
ಬಹ್ವಾಯನಕೃತಾಶ್ಚೈವ ಶಾಕುನೇಯಾಸ್ತಥೈವ ಚ ॥ ೩೬ ॥

ಅಗಸ್ತ್ಯಗೀತಾ ಮೌದ್ಗಲ್ಯಾಃ ಶಾಂಡಿಲ್ಯಾಃ ಸೌರಭಾಸ್ತಥಾ।
ಭೃಗೋರಂಗಿರಸಶ್ಚೈವ ಕಶ್ಯಪೋದ್ದಾಲಕೋದಿತಾಃ ॥ ೩೭

ಸುಮಂತಾ ಜೈಮಿನೀಯಾಶ್ಚ ಪೈಲಸ್ಯ ಚ ಮಹಾತ್ಮನಃ ।
ವೈಶಂಪಾಯನಗೀತಾಶ್ಚ ಪಿಪ್ಪಲಾದಕೃತಾಶ್ಚ ಯೇ ॥ ೩೮ ॥

ಐಂದ್ರಾಶ್ಚ ವಾರಣಾಶ್ಚೈವ ಕೌಬೇರಾ ವಾತ್ಸ್ಯಪೌಲಕಾಃ ।
ಆಪಸ್ತಂಬಕೃತಾ ಧರ್ಮಾಸ್ತಥಾ ಗೋಪಾಲಕಸ್ಯ ಚ ॥ ೩೯ ॥

ಭೃಗ್ವಂಗಿರಃ ಕೃತಾಶ್ಚೈವ ಸೌರಾ ಹಾರೀತಕಾಸ್ತಥಾ ।
॥ ಶ್ರೀ ಭಗವಾನುವಾಚ ॥
ಶೃಣು ರಾಜನ್ಮಹಾಬಾಹೋ ಧರ್ಮಾತ್ಮನ್ಕುರುನಂದನ ॥ ೪೦ ॥

---

ಶಾಸ್ತ್ರಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದೇನ ಅದಾವುದಂದರೆ ---ವಸಿಷ್ಠಸ್ಮೃತಿ ಪರಾಶರಸ್ಮೃತಿ, ಅತ್ರಿಸ್ಮೃತಿ, ಶಂಖ, ಗರ್ಗ, ಲಿಖಿತ, ಯಮ, ಜಾಬಾಲಿ, ವ್ಯಾಸ, ಉಮಾಮಹೇಶ್ವರಕೃತ ಜಾತಿಧರ್ಮ, ಗುಣ, ಗುಣಬಾಹು, ಕಶ್ಯಪ, ಬಹ್ವಾಯನ, ಶಾಕುನೇಯ, ಅಗಸ್ತ್ಯ, ಮೌದ್ಗಲ್ಯ, ಶಾಂಡಿಲ್ಯ ಸೌರಭ, ಭೃಗು, ಅಂಗಿರಸ, ಕಶ್ಯಪೋದ್ದಾಲಕ, ಸುಮನ್ತು, ಜೈಮಿನಿ, ಪೈಲ ವೈಶಂಪಾಯನ, ಪಿಪ್ಪಲಾದ, ಇಂದ್ರ, ವರುಣ, ಕೌಬೇರ, ವಾತ್ಸ್ಯ ಪೌಲಕ, ಆಪಸ್ತಂಬ, ಗೋಪಾಲ, ಭೃಗ್ವಂಗಿರ, ಸೌರ, ಹಾರೀತಕ ಇವನೇ ಮುಂತಾದ ಮಹಾನುಭಾವರಾದ ಧರ್ಮಶಾಸ್ತ್ರಪ್ರವರ್ತಕರು ಹೇಲಿರುವ ಧರ್ಮಗಳೆಲ್ಲಾ ನನ್ನಿಂದ ಕೇಳಲ್ಪಟ್ಟಿವೆ, ಎನ್ನಲು

೪೦-೪೭ ಶ್ರೀಕೃಷ್ಣನು ಧರ್ಮರಾಯನನ್ನು ಕುರಿತು ಈರೀತಿ ಹೇಳಿದನು - ಎಲೈ ಮಹಾಭುಜನಾದ ಧರ್ಮರಾಯನೇ, ಕೇಳು ಧರ್ಮವೃದ್ಧಿಯನ್ನುಂಟುಮಾಡ ತಕ್ಕ ವೃಷಭಲಕ್ಷಣವನ್ನು ಹೇಳುತ್ತೇನೆ ಋಷಭ (ಗೂಳಿ) ನಿಗೆ ಸಮುದ್ರವೆಂತಲೂ

ಧರ್ಮವೃದ್ಧಿಕರಂ ವಚ್ಮಿ ವೃಷಭಸ್ಯ ತು ಲಕ್ಷಣಂ ।
ಋಷಭಃ ಸ ಸಮುದ್ರಾಖ್ಯಃ ಸತತಂ ಕುಲವರ್ಧನಃ ॥ ೪೧ ॥

ಮಲ್ಲಿಕಾಪುಷ್ಪಚಿತ್ರಶ್ಚ ಧನ್ಯೋ ಭವತಿ ಪುಂಗವಃ ।
ಕಾಮಲೈರ್ಮಂಡಲೈಶ್ಚಾಪಿ ಚಿತ್ರೋ ಭವತಿ ಭೋಗದಃ ॥ ೪೨ ॥

ಅತಸೀ ಪುಷ್ಪವರ್ಣಶ್ಚ ತಥಾ ಧನ್ಯತಮಃ ಸ್ಮೃತಃ ।
ಏತೇ ಧನ್ಯಾಸ್ತಥಾಧನ್ಯಾನ್ಕೀರ್ತಯಿಷ್ಯಾಮಿ ತೇ ನೃಪ ॥ ೪೩ ॥

ಕೃಷ್ಣತಾಲೋಷ್ಠದಶನಾ ರೂಕ್ಷಶೃಂಗಶಫಾಶ್ಚ ಯೇ ।
ಅವ್ಯಕ್ತವರ್ಣಾ ಹ್ರಸ್ವಾಶ್ಚ ವ್ಯಾಘ್ರಭಸ್ಮನಿಭಾಶ್ಚ ಯೇ ॥ ೪೪ ॥

ಧ್ವಾಂಕ್ಷಗೃಧ್ರಸವರ್ಣಾಶ್ಚ ತಥಾ ಮೂಷಕಸನ್ನಿಭಾಃ ।
ಕುಬ್ಜಾಃ ಕಾಣಾಸ್ತಥಾ ಖಂಜಾಃ ಕೇಕರಾಕ್ಷಾಸ್ತಥೈವ ಚ ॥ ೪೫ ॥

ವಿಷಮಶ್ವೇತಸಾದಾಶ್ಚ ಉದ್ಭ್ರಾಂತನಯನಾಸ್ತಥಾ ।
ನ ತೇ ವೃಷಾಃ ಪ್ರಯೋಕ್ತವ್ಯಾ ನ ಚ ಧಾರ್ಯಾಸ್ತಥಾ ಗೃಹೇ ॥ ೪೬ ॥

---

ಒಂದು ಹೆಸರುಂಟು. ಇಂತಹ ವೃಷೋತ್ಸರ್ಗದ ಮಹಿಮೆಯನ್ನು ಹೇಳುತ್ತೇನೆ ಕೇಳು. ಈ ವೃಷೋತ್ಸರ್ಗವು ಯಾವಾಗಲೂ ವಂಶಾಭಿವೃದ್ಧಿಯನ್ನುಂಟುಮಾಡತಕ್ಕ ಒಂದು ಪವಿತ್ರಕರ್ಮವು ಆದರ ಮೈ ಮಲ್ಲಿಗೆ ಹೂವಿನ ಹಾಗೆ ಚಿತ್ರವಾಗಿದ್ದರೆ ಅಂತಹ ವೃಷಭದ ಉತ್ಸರ್ಗವು ಅನೇಕ ಭೋಗವನ್ನು ಕೊಡತಕ್ಕದು ಕಮಲದಂತೆ ಸುಲಕ್ಷಣವಾದ ಮಂಡಲವುಳ್ಳ ವೃಷಭನನ್ನು ಬಿಡುವವನೇ ಧನ್ಯನು ಅಗಸೇ ಹೂವಿನ ಬಣ್ಣದಂತಿರುವ ಗೂಳಿಯನ್ನು ಬಿಟ್ಟರೆ ಅಂಥವನು ಧನ್ಯತರನೆನಿಸುವನು ಇಂತಹ ಧನ್ಯಪುರುಷರು ಅಂಥವರೇ ಆದ ಧನ್ಯಪುರುಷರನ್ನು ನೋಡಿ ಸಂತೋಷ ಪಡುತ್ತಾರೆ (ಅಥವಾ ಒಳ್ಳೇ ವೃಷಭಗಳನ್ನು ಬಿಡುತ್ತಾರೆ ಇನ್ನು ಹೀನವೃಷಭದ ಲಕ್ಷಣವನ್ನು ಹೇಳುವೆನು, ಕೇಳು ತಿಳಿಯದೆ ಇದ್ದ ಬಣ್ಣ, ಕುಳ್ಳುಗೂಳಿ, ಹುಲಿ ಬಣ್ಣ, ಬೂದಿಬಣ್ಣ, ಕಾಗೆಬಣ್ಣ, ಹದ್ದಿನಬಣ್ಣ, ಇಲಿಯ ಬಣ್ಣ, ಕುರುಡು ಹೋರಿ, ತುಂಟುಗೂಳಿ, ಮೆಳ್ಳಗಣ್ಣು, ಒಂದು ಕಾಲು ಉದ್ದ, ಒಂದು ಕಾಲು ಕುಂಡಾದ ಹೋರಿಗಳು, ತಿರುಗುತ್ತಲಿರುವ ಕಣ್ಣುಳ್ಳ ಹೋರಿ, ಇಂತಹ ಹೋರಿ (ಗೂಳಿ) ಗಳನ್ನು

ಮೋಕ್ತವ್ಯಾನಾಂ ಚ ಧಾರ್ಯಾಣಾಂ ಭೂಯೋ ವಕ್ಷ್ಯಾಮಿ ಲಕ್ಷಣಂ ॥

ಸ್ವಸ್ತಿಕಾಕಾರಶೃಂಗಾಶ್ಚ ಮೇಘೌಘಸದೃಶಸ್ವನಾಃ ।
ಮಹಾಪ್ರಮಾಣಾಶ್ಚ ತಥಾ ಮತ್ತಮಾತಂಗ ಗಾಮಿನಃ ॥ ೪೮ ॥

ಮಹೋರಸ್ಕಾ ಮಹೋಚ್ಛ್ವಾಸಾ ಮಹಾಬಲಪರಾಕ್ರಮಾಃ ।
ಶಿರಃ ಕರ್ಣೌ ಲಲಾಟಂ ಚ ವಾಲಧಿಶ್ಚರಣಾನಿ ಚ ॥ ೪೯ ॥

ನೇತ್ರಪಾರ್ಶ್ವೇ ಚ ಕೃಷ್ಣಾನಿ ಶಸ್ಯಂತೇ ಚಂದ್ರಮುಸ್ತ್ವಿಷಃ ।
ಚಿಹ್ನಾನ್ಯೇತಾನಿ ಶಸ್ಯಂತೇ ಕೃಷ್ಣಸ್ಯ ತು ಸಿತೇಷತಃ ॥ ೫೦ ॥

ಭೂಮಿಂ ಕರ್ಷತಿ ಲಾಂಗೂಲಾತ್ಪ್ರಶಸ್ತಃ ಸ್ಥೂಲವಾಲಧಿಃ ।
ಪುರಸ್ತಾನ್ನ ತಥಾ ನೀಚೋ ವೃಷಭಶ್ಚ ಪ್ರಶಸ್ಯತೇ ॥ ೫೧ ॥

ಶಕ್ತಿಧ್ವಜಪತಾಕಾಭ್ಯಾಂ ಯೇಷಾಂ ರಾಜಿರ್ವಿರಾಜತೇ ।
ಅನಡ್ವಾಹಸ್ತು ತೇ ಧನ್ಯಾ ಋದ್ಧಿಸಿದ್ಧಿಜಯಾವಹಾಃ ॥ ೫೨ ॥

ಬಿಡಲೂಬಾರದು, ಮನೆಯಲ್ಲಿ ಕಟ್ಟಲೂಬಾರದು. ಎಲೈ [illegible] ಕೇಳು. ಇನ್ನು ವೃಷೋತ್ಸರ್ಗಕ್ಕೆ ಸರಿಯಾದ ಲಕ್ಷಣಗಳುಳ್ಳ ಗೂಳಿಗಳು ಎಂತಹವಾಗಿರ ಬೇಕೆಂಬುದನ್ನು ಹೇಳುತ್ತೇನೆ, ಕೇಳು.

೪೮-೫೨. ಸ್ವಸ್ತಿಕ ಚಿತ್ರದಂತೆ ಕೊಂಬುಳ್ಳ [illegible] ( [illegible] ) ಗುಡುಗಿದಂತೆ ಧ್ವನಿಮಾಡತಕ್ಕ ಗೂಳಿಗಳು. ಎತ್ತರವಾದ [illegible]. ಮದಿಸಿದ ಆನೆಗಳಂತಿರುವ ಗೂಳಿಗಳು. ಅಗಲವಾದ ಎದೆಯುಳ್ಳವು. ದೀರ್ಘವಾಗಿ ಉಚ್ಛ್ವಾಸ ಮಾಡತಕ್ಕವು. ಮಹಾಬಲ ಪರಾಕ್ರಮವುಳ್ಳ ಗೂಳಿಗಳು. ತಲೆ, ಕಿವಿ, ಹಣೆ, ಕಾಲು ಬಾಲ, ಕಣ್ಣು, ಬೆನ್ನು, ಇವುಗಳು ಕಪ್ಪಗಿದ್ದು, ಉಳಿದ ಅಂಗಾಂಗಗಳೆಲ್ಲಾ ಚಂದ್ರ ಕಾಂತಿಯಂತೆ ಬೆಳ್ಳಗಿರುವ ಗೂಳಿ, ಅಥವಾ ಎಲ್ಲ ಅಂಗಗಳೂ ಕಪ್ಪಗಿದ್ದು ಮೇಲೆ ಹೇಳಿದ ಅವಯವಗಳೆಲ್ಲಾ ಬೆಳ್ಳಗಿರುವ ಗೂಳಿ, ನಡೆಯುತ್ತಿದ್ದರೆ ನೆಲಕ್ಕೆ ಬಾಲಸೋಕಿ ಬಾಲದಿಂದ ಭೂಮಿಯನ್ನು ಎಳೆಯುತ್ತಿರುವುದೋ ಎನ್ನುವಂತಿರುವ ಗೂಳಿ. ಮುಂಭಾಗ ವೆಲ್ಲಾ ಅಗಲವಾಗಿರುವ ಗೂಳಿ. ಇಂತಹ ಲಕ್ಷಣವುಳ್ಳ ಗೂಳಿಗಳನ್ನು ಬಿಟ್ಟರೆ ಋದ್ಧಿ (ಸಂಪದಭಿವೃದ್ಧಿ) ಸಿದ್ಧಿಗಳೂ ವಿಜಯಲಾಭವೂ ಉಂಟಾಗುವುದು. ಗೂಳಿಗಳು ತಾವಾಗಿಯೇ ಹಿಂತಿರುಗುವಾಗ ಬಲಗಡೆಗೆ ಪ್ರದಕ್ಷಿಣೆಯಾಗಿ ತಿರುಗಿಕೊಳ್ಳುವುದೂ

**ಪ್ರದಕ್ಷಿಣಂ ನಿವರ್ತಂತೇ ಸ್ವಯಂ ಯೇ ವಿನಿವರ್ತಿತಾಃ ।**
**ಸಮುನ್ನತಶಿರೋ ಗ್ರೀವಾ ಧನ್ಯಾಸ್ತೇ ಕೋಶವರ್ಧನಾಃ ॥ ೫೩ ॥**

ರಕ್ತಶೃಂಗಾಗ್ರನಯನಾಃ ಶ್ವೇತವರ್ಣಾ ಭವಂತ್ಯಪಿ ।
ಶಸ್ಯೈಃ ಪ್ರವಾಲಸದೃಶೈರ್ನಾಸ್ತಿ ಧನ್ಯತರಸ್ತತಃ ॥ ೫೪ ॥

ಏತೇ ಧನ್ಯಾಃ ಪ್ರಯುಕ್ತೇನ ಮೋಕ್ತವ್ಯಾ ಯದಿ ವಾ ವೃಷಾಃ ।
ಧಾರಿತಾಶ್ಚ ತಥಾ ಮುಕ್ತಾ ಧನಧಾನ್ಯವಿವರ್ಧನಾಃ ॥ ೫೫ ॥

ಚರಣಾನಿ ಮುಖಂ ಪುಚ್ಛಂ ಯಸ್ಯ ಶ್ವೇತಾನಿ ಗೋಪತೇಃ ।
ಲಾಕ್ಷಾರಸಸವರ್ಣಶ್ಚ ತಂ ನೀಲಮಿತಿನಿರ್ದಿಶೇತ್ ॥ ೫೬ ॥

ವೃಷ ಏವ ಸ ಮೋಕ್ತವ್ಯೋ ನ ಸಂಧಾರ್ಯೋ ಗೃಹೇ ಭವೇತ್ ।
ತದರ್ಥಮೇಷಾ ಚರತಿ ಗಾಥಾ ಲೋಕೇ ಪುರಾತನೀ ॥ ೫೭ ॥

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೫೮ ॥

ಎತ್ತರವಾದ ಕತ್ತು ಹೆಗಲುಗಳುಳ್ಳವುಗಳೂ, ವೃಷಣ ( ಬೀಜ ) ಗಳು, ದಪ್ಪನಾಗಿರುವುವೂ, ಕೆಂಪಗಿರುವ ಕಣ್ಣು, ಕೆಂಪಗಿರುವ ಕೊಂಬು ಮತ್ತು ಬಿಳಿಬಣ್ಣದ ಗೂಳಿಗಳೂ ಉತ್ಸರ್ಜನಕ್ಕೆ ಯೋಗ್ಯವಾದುವು

೫೫-೫೮ ಸಲ್ಲಕ್ಷಣಗಳಿಂದೊಡಗೂಡಿದ ಮೇಲೆ ಹೇಳಿದ ವೃಷಭಗಳನ್ನಾದರು ಬಿಡುವರೋ, ಮತ್ತದಾರು, ಮೂದಲಿನಿಂದಲೂ ಕಟ್ಟಿ ಪೋಷಿಸುವರೋ ಅವರೆಲ್ಲರೂ ಧನ್ಯರೆನಿಸುವರಲ್ಲದ, ಧನಧಾನ್ಯಸಂಪತ್ತಿನಿಂದ ಕೂಡಿ ಆನಂದಪಡುವರು ಕಾಲು, ಮುಖ, ಬಾಲಗಳು ಯಾವ ಗೂಳಿಗೆ ಬೆಳ್ಳಗೂ ಲಾಕ್ಷಾ (ಅರಗು) ರಸದ ಬಣ್ಣಕ್ಕೂ ಇರುವುದೋ ಆ ಲಕ್ಷಣದ ಗೂಳಿಗೆ ನೀಲವೃಷವೆಂದು ಹೆಸರು ಅಂತಹ ಗೂಳಿಯನ್ನೇ ಬಿಡಬೇಕು. ಆರೀತಿ ವೃಷೋತ್ಸರ್ಗಮಾಡಿ ಮುಕ್ತ ಬಿಟ್ಟಿದ ಮೇಲೆ ಅದನ್ನು ಮನೆಯಲ್ಲಿ ಕಟ್ಟಬಾರದು ಇದಕ್ಕಾಗಿಯೇ ಈ ಗಾದೆಗಳು ಲೋಕದಲ್ಲಿ ಹರಡಿವೆ ತುಂಬಾ ಮಕ್ಕಳನ್ನು ಪಡೆಯಬೇಕು ಏಕೆಂದರೆ ಯಾವನಾದರೂ ಗಯೆಗೆ ಹೋಗಿ ಪಿಂಡದಾನ ಮಾಡಿಯಾನು. ಯಾವನಾದರೂ ಅಶ್ವಮೇಧಯಾಗ ಮಾಡಿಯಾನು ' ಯಾವನಾದರೂ ಅಶ್ವಮೇಧಯಾಗ ಮಾಡಿಯಾನು ' ಅಥವಾ ನೀಲವರ್ಣದ

ಏವಂ ವೃಷಂ ಲಕ್ಷಣಸಂಪ್ರಯುಕ್ತಂ
ಗೃಹೋದ್ಭವಂ ಕ್ರೀತಮಥಾಪಿ ರಾಜನ್ ।
ಮುಕ್ತ್ವಾ ನ ಶೋಚೇನ್ಮರಣಂ ಮಹಾತ್ಮಾ
ಮೋಕ್ಷೇ ವಿಧಿಂ ಚಾಹಮತೋ ವಿಧಾಸ್ಯೇ ॥ ೫೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ವೃಷಲಕ್ಷಣವರ್ಣನೋ ನಾಮ ಷಟ್ಚತ್ವಾರಿಂಶ
ದುತ್ತರ ಶತತಮೋಽಧ್ಯಾಯಃ

---

ಗೂಳಿಯನ್ನು ವೃಷೋತ್ಸರ್ಗದ ಮೂಲಕ ಯಾವನಾದರೂ ಬಿಟ್ಟಾನು ! ಎಂಬ ಆಸೆಯಿಂದ, ಎಲೈ ವಜ್ರರಾಜನೆ! ಮೇಲೆ ಹೇಳಿದ ಲಕ್ಷಣಗಳುಳ್ಳ ಗೂಳಿಯು ಮನೆಯಲ್ಲಿ ಸಾಕಲ್ಪಟ್ಟಿದ್ದರೂ ಸರಿಯೆ, ಅಥವಾ ಕ್ರಯಕ್ಕೆ ತೆಗೆದುಕೊಂಡರೂ ಸರಿಯೆ, ಇಂತಹ ಹೋರಿಯನ್ನು ಬಿಡಬೇಕು ಮನುಷ್ಯನು ಮರಣಕ್ಕಾಗಿ ಶೋಕಿಸಬಾರದು ಇನ್ನು ಮುಂದೆ ಮೋಕ್ಷವಿಧಿಯನ್ನು ಹೇಳುತ್ತೇನೆ, ಕೇಳೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ವೃಷಭಲಕ್ಷಣ ವರ್ಣನವೆಂಬ
ಹೆಸರಿನ ಒಂದುನೂರ ನಲವತ್ತಾರನೆಯ
ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಆಶ್ವಯುಕ್ ಕೃಷ್ಣಪಕ್ಷಸ್ಯ ಪಂಚದಶ್ಯಾಂ ನರಾಧಿಪ ।
ಕಾರ್ತಿಕೇಽಪ್ಯಥವಾ ಮಾಸಿ ವೃಷೋತ್ಸರ್ಗಂ ತು ಕಾರಯೇತ್ ॥ ೧ ॥

ಗ್ರಹಣೇ ದ್ವೇ ಮಹಾಪುಣ್ಯೇ ತಥಾಽಚೈವಾಯನದ್ವಯಂ ।
ವಿಷುವತ್‌ದ್ವಿತಯಂ ಚೈವ ಮೃತಾಹೋ ಬಾಂಧವಸ್ಯ ಚ ॥ ೨ ॥

ಮೃತಾಹೋ ಯಸ್ಯ ತಸ್ಯಾರ್ಥೇ ತಸ್ಮಿನ್ನಹನಿ ಶಂಕರಂ ।
ಸುಸಮಿದ್ಧೇ ಗವಾಂ ಮಧ್ಯೇ ಪರಿಸ್ತೀರ್ಯ ಹುತಾಶನಂ ॥ ೩ ॥

ಪಯಸಾ ಶ್ರಪಯೇದ್ವಿದ್ವಾಂಶ್ಚರುಂ ಪೌಷ್ಣಂ ಸಮಾಹಿತಃ ।
ಪೂಷಾ ಗಾ ಅನ್ವೇತು ನಶ್ಚ ಪೂಷ್ಣೇ ಹುತ್ವಾ ನರಾಧಿಪ ॥ ೪ ॥

### ಒಂದುನೂರ ನಲವತ್ತೇಳನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಆಶ್ವಯುಜ ಬಹುಳ ಅಮಾವಾಸ್ಯಾ ಅಥವಾ ಕಾರ್ತಿಕ ಬಹುಳ ಅಮಾವಾಸ್ಯಾ ದಿವಸ ವೃಷೋತ್ಸರ್ಗವನ್ನು ಮಾಡಬೇಕು

೨ ೬ ಗ್ರಹಣಕಾಲದಲ್ಲಿ ಅಥವಾ ಉತ್ತರಾಯಣ ದಕ್ಷಿಣಾಯನ, ಪುಣ್ಯಕಾಲಗಳು ಸಂಕ್ರಮಣ ದಿವಸಗಳಲ್ಲಿ ಬಾಂಧವರು ಮೃತರಾದ (ತಂದೆ ತಾಯಿಗಳ ಮರಣದ ಏಕಾದಶ) ದಿವಸದಲ್ಲಿ ಈ ವೃಷೋತ್ಸರ್ಗವನ್ನು ಮಾಡಬೇಕು ಆ ದಿವಸ ರುದ್ರನನ್ನು ಆರಾಧಿಸಿ ಹಸುವಿನ ಗೊತ್ತಿನಲ್ಲಿ (ಗೋಶಾಲೆಯಲ್ಲಿ) ಅಗ್ನಿಪ್ರತಿಷ್ಠೆಯಂ ಮಾಡಿ

ಇಹ ರಾಡಿತಿ ಹುತ್ವಾ ಚ ಜಪೇದ್ರುದ್ರಾನ್ಸಮಾಹಿತಃ ।
ತಥೈವ ಪೌರುಷಂ ಸೂಕ್ತಂ ಕೂಷ್ಮಾಂಡಾನಿ ನರಾಧಿಪ ॥ ೫ ॥

ತತಃ ಕೋಷ್ಣೇನ ವೃಷಭಮಯಸ್ಕಾರಃ ಸುಶಿಲ್ಪವಾನ್ ।
ಶೂಲೇನ ದಕ್ಷಿಣೇ ಪಾರ್ಶ್ವೇ ವಾಮೇ ಚಕ್ರೇಣ ನಿರ್ದಹೇ ॥ ೬ ॥

ಅಂಕಿತಂ ಸ್ನಾಪಯೇತ್ಪಶ್ಚಾತ್ಸ್ನಾನೇ ತಸ್ಯ ತಥಾ ಪಠೇತ್ ।
ಹಿರಣ್ಯವರ್ಣೇತಿ ಋಚಶ್ಚತಸ್ರೋ ಮನುಜೇಶ್ವರ ॥ ೭ ॥

ಆಪೋ ಹಿ ಷ್ಠೇತಿ ತಿಸ್ರಶ್ಚ ಶನ್ನೋ ದೇವೀತಿ ಚಾಪ್ಯಥ ।
ವತ್ಸತರಶ್ಚತಸ್ರಶ್ಚ ತಂ ವೃಷಂ ಚ ನರಾಧಿಪ ॥ ೮ ॥

ಅಲಂಕುರ್ಯಾತ್ತತಃ ಪಶ್ಚಾದ್ಗಂಧಮಾಲ್ಯೈಶ್ಚ ಶಕ್ತಿತಃ ।
ಕಿಂಕಿಣೀಭಿಶ್ಚ ರಮ್ಯಾಭಿಸ್ತಥಾ ಚೀನಾಂಶುಕೈಃ ಶುಭೈಃ ॥ ೯ ॥

---

ಆ ಸುಸಂಸ್ಕೃತಾಗ್ನಿಯಲ್ಲಿ ಆಜ್ಯಾಧಾನಮಾಡಿಕೊಂಡು, ಹಾಲಿನಲ್ಲಿ ಅಕ್ಕಿಯನ್ನು ಬೇಯಿಸಿ ಆ ಚರುವನ್ನು ಸಿದ್ಧಪಡಿಸಿಕೊಳ್ಳಬೇಕು ಆ ಚರುವಿನಿಂದ ಪೂಷಾಗಾ ಅನ್ವೇತುನಃ ಎಂಬ ಮಂತ್ರವನ್ನೂ, ಇಹರಾಟ್ ಎಂಬ ಮಂತ್ರವನ್ನೂ ಹೇಳಿಕೊಂಡು ಎರಡು ಆಹುತಿಗಳನ್ನು ಪೂಷ್ಣನಾಮಕ ರುದ್ರನಿಗೆ ಕೊಡಬೇಕು ಈ ಹೋಮ ಸಮಯದಲ್ಲಿ (ಚರುಶ್ರಪಣಾವಸರದಲ್ಲಿ) ರುದ್ರಸೂಕ್ತ, ಪುರುಷಸೂಕ್ತ, ಕೂಷ್ಮಾಂಡ ಸೂಕ್ತಗಳನ್ನು ಪಾರಾಯಣಮಾಡಬೇಕು ಅನಘಾ ಋತ್ವಿಗ್ಜನರಿಂದ ಮಾಡಿಸಬೇಕು ಇದರಂತೆ ಮಾಡಿಯಾದ ಬಳಿಕ ಲಿಂಗಾಕಾರವುಳ್ಳ ಕಬ್ಬಿಣದ ತ್ರಿಶೂಲವನ್ನು ಚೆನ್ನಾಗಿ ಬೆಂಕಿಯಲ್ಲಿ ಕಾಯಿಸಿ ಗೂಳಿಯ ಬಲಭಾಗದ ಪಕ್ಕೆಯ ಮೇಲೆ ಆ ತ್ರಿಶೂಲದಿಂದ ಸುಟ್ಟು ಅಲ್ಲಿ ಲಿಂಗಾಕಾರವನ್ನು ಮಾಡಬೇಕು

೭-೧೦. ಈರೀತಿ ಲಿಂಗಮುಚ್ಛೆಯನ್ನು ಮಾಡಿದಬಳಿಕ ಆ ಹೋರಿಯನ್ನು ಚೆನ್ನಾಗಿ ತೊಳೆಯಬೇಕು ಆ ಬಳಿಕ ಹಿರಣ್ಯವರ್ಣಾಃ ಎಂಬ ನಾಲ್ಕು ಋಕ್ಕುಗಳನ್ನೂ, ಆಪೋಹಿಷ್ಠಾ ಮಯೋಭುವಃ ಎಂಬ ಮೂರುಋಕ್ಕುಗಳನ್ನೂ, ಶನ್ನೋದೇವೀಃ ಎಂಬ ಮಂತ್ರವನ್ನೂ, ಪಾರಾಯಣಮಾಡಬೇಕು ಮಂತ್ರೋಚ್ಚಾರಣೆ ಮುಗಿದಕೂಡಲೇ ನಾಲ್ಕು ಹೆಂಗರುಗಳನ್ನೂ, ಮುದ್ರೆಹಾಕಿದ ಹೋರಿಯನ್ನೂ ಗಂಧಪುಷ್ಪಾದಿಗಳಿಂದ ಪೂಜಿಸಿ, ಕಿರುಗಂಟೆಸರದಿಂದಲೂ, ಚೀನಚೀನಾಂಬರಗಳಿಂದಲೂ, ಚೆನ್ನಾಗಿ ಅಲಂಕರಿಸಬೇಕು ಅಲಂಕಾರಾನಂತರ ಕರ್ತನು-ಪ್ರಸೂಯ ಭಗವಾನ್ ಧರ್ಮಃ ಎಂಬಂತೆ

ತತಃ ಕರ್ತಾ ಜಪೇನ್ಮಂತ್ರಮಿಮಂ ಪ್ರಯತಮಾನಸಃ ।
ವೃಷೋ ಹಿ ಭಗವಾನ್ಧರ್ಮಶ್ಚತುಷ್ಪಾದಃ ಪ್ರಕೀರ್ತಿತಃ ।
ವೃಣೋಮಿ ತಮಹಂ ಭಕ್ತ್ಯಾ ಸ ಮೇ ರಕ್ಷತು ಸರ್ವತಃ ॥ ೧೦ ॥

ಏವಂ ಯುವಾನಂ ವೃಷಭಂ ದದಾಮಿ
ಗವಾಂ ಪತಿಂ ಯೂಥಪತಿಂ ಸಧರ್ಮಂ ।
ಅನೇನ ಸಾರ್ಧಂ ಚರತ ಪ್ರಕಾಮಂ
ಯಥಾ ತಥಾ ಸ್ರಾಪ್ನುತ ವತ್ಸತರ್ಯಃ ॥ ೧೧ ॥

ಏವಂ ಯುವಾನಂ ಗೋಪತಿಂ ವೋ ದದಾಮಿ
ಅನೇನ ಕ್ರೀಡಂತಶ್ಚರತಃ ಪ್ರಿಯೇಣ ।
ಸಹಾಸ್ಮಾಭಿಃ ಪ್ರಜಯಾ ಮಾ ತನೂಭಿಃ
ಮಾ ವಧಾಮ ದ್ವಿಷಂತಂ ಸೋಮರಾಜನ್ ॥ ೧೨ ॥

ಮಂತ್ರಂ ಪಿತಾ ವತ್ಸ ಇತಿ ಪ್ರತೀತಂ
ಜಪೇತ ಕರ್ಣೇ ವೃಷಭಸ್ಯ ಸವ್ಯೇ ।
ಪ್ರಚಾಲಯೇತ್ತಂ ವೃಷಭಂ ತತಸ್ತು
ಪೂರ್ವಾಂ ದಿಶಂ ವತ್ಸತರ್ಯಶ್ಚ ಸರ್ವಾಃ ॥ ೧೩ ॥

ಹಿಡಿದು, ಸಮೇರಕ್ಷತು ಸರ್ವತಃ ಎಂದು ಪ್ರಾರ್ಥಿಯಾಗಿ ಮೂರು ಪಾದವಿರುವ ಮಂತ್ರವಿರುವ ಮಂತ್ರವನ್ನು ಪಠಿಸಬೇಕು ಆ ಮಂತ್ರದ ಅರ್ಥವೇನೆಂದರ — ಈ ವೃಷಭವೆಂಬುದು ನಾಲ್ಕುಕಾಲುಗಳಿಂದ ಭೂಮಿಯಮೇಲೆ ನಿಂತಿರುವ ಧರ್ಮದೇವತ ಎನಿಸಿದೆ ಇಂತಹ ಧರ್ಮಸ್ವರೂಪ ವೃಷಭವನ್ನು ನಾನು ಈಗ ಇಂತು ಪ್ರಾರ್ಥಿಸುನೆನು ಈ ಧರ್ಮವು ನನ್ನನ್ನು ಎಲ್ಲೆಡೆಯಲ್ಲೂ ಕಾಪಾಡಿಕೊಂಡು ಬರಲಿ

೧೧-೧೪ ನಾನು ಈಗ ಸ್ವೇಚ್ಛೆಯಾಗಿ ಬಿಡುತಲಿರುವ ಪ್ರಾಯದಗೂಳಿಯ ಜತೆಗೆ ನಾಲ್ಕು ಹೆಂಗರುಗಳನ್ನೂ, ಸಹ ಜತೆಯಲ್ಲಿ ಬಿಟ್ಟಿರುತ್ತೇನೆ. ಈ ಹೆಂಗರು ಗಳೊಡನೆ ಈ ಹೋರಿಯು ಸ್ವೇಚ್ಛೆಯಾಗಿ ಭೋಗಮಾಡಿಕೊಂಡು ಇರಲಿ ಮತ್ತು ಈ ಗೋವುಗಳ ಗುಂಪಿಗೆ ಇದೇ ಯಜಮಾನನಾಗಿರಲಿ ಹೀಗೆಂದು ಪ್ರಾರ್ಥಿಸಿ,-ಏವಂ ಯುವಾನಂ ಗೋಪತಿಂ ಎಂಬ ಮಂತ್ರವನ್ನು ಸೋಮರಾಜನ್ ಎಂಬ ಪದವು ಪೂರ್ತಿ ಯಾಗುವವರೆಗೆ ಉಚ್ಚರಿಸಿ, ಆ ಮಂತ್ರವನ್ನು ಗೂಳಿಯ ಬಲಗಿವಿಯಲ್ಲಿ ಜಪಮಾಡಿ,

ವಾಸೋಯುಗಂ ಗ್ರಹೀತುರಥ ಪ್ರದೇಯಂ
ಸುವರ್ಣಯುಕ್ತಂ ಸಘೃತಂ ಚ ಕಾಂಸ್ಯಂ ।
ಶಿಲ್ಪಪ್ರಧಾನಸ್ಯ ತಥೈವ ಮೂಲ್ಯಂ
ದೇಯಂ ಯಥಾ ತುಷ್ಟಿಮುಪೈತಿ ರಾಜನ್ ॥ ೧೪ ॥

ವಿಪ್ರಾಸ್ತಥಾನ್ನಂ ದಧಿಸರ್ಪಿಷಾ ಯುತಂ
ಸಂಭೋಜನೀಯಾಃ ಪಯಸಾ ಚ ಮಿಶ್ರಂ ।
ಉತ್ಸೃಷ್ಟಮಾತ್ರೇ ವೃಷಭಂ ವ್ರಜಂತಿ
ತೃಪ್ತಿಂ ಪರಾಂ ತಸ್ಯ ಪಿತಾಮಹಾ ಯೇ ॥ ೧೫ ॥

ಯಸ್ಮಿಂಸ್ತಡಾಗೇ ಸ ಜಲಂ ತೃಷಾರ್ತಃ
ಪಾತುಂ ಸಮಾಗಚ್ಛತಿ ತತ್ಪಿತೄಣಾಂ ।
ದಿವ್ಯಾಂಬುಪೂರ್ಣಂ ಕಲಶಂ ಮಹೀಪತೇ
ಲೋಕಂ ಪರಂ ತೃಪ್ತಿಮತಃ ಪ್ರಯಾಂತಿ ॥ ೧೬ ॥

---

ಆ ಬಳಿಕ ಆ ಹೋರಿಯನ್ನು ಹಗ್ಗಕಟ್ಟಿ ಪೂರ್ವದಿಕ್ಕಿಗೆ ಅಭಿಮುಖವಾಗಿ ಆ ನಾಲ್ಕು ಹಸುಗಳ ಜತೆಯಲ್ಲಿ ಬಿಟ್ಟುಬಿಡಬೇಕು ಈರೀತಿ ವೃಷೋತ್ಸರ್ಗವಾದಮೇಲೆ ಯೋಗ್ಯಬ್ರಾಹ್ಮಣನಿಗೆ ಒಂದುಜತೆ ಪಂಚೆಯನ್ನೂ, ಚಿನ್ನದನಾಣ್ಯದಿಂದಲೂ, ತುಪ್ಪದಿಂದ ತುಂಬಿದ ಒಂದು ಕಂಚಿನಪಾತ್ರೆಯನ್ನೂ, ಸಹ ತಕ್ಕ ದಕ್ಷಿಣೆಯೊಡನೆ ದಾನ ಮಾಡಬೇಕು ಅನಂತರ ತ್ರಿಶೂಲವನ್ನು ತಂದು ಕಾಯಿಸಿ ಹೋರಿಯ ಬಲಪಕ್ಕದಲ್ಲಿ ಸುಟ್ಟು ಲಿಂಗಾಂಕನಮಾಡಿದ ಶಿಲ್ಪಿಗೆ ಅವನು ಸಂತೋಷಪಡುವಷ್ಟುಮಟ್ಟಿನ ದಕ್ಷಿಣೆಯನ್ನು ಕೊಡಬೇಕು

೧೫ ಈರೀತಿ ಮಾಡಿದ ವೃಷೋತ್ಸರ್ಗಕರ್ಮದಿಂದ ಕರ್ತೃವಿನ ಪಿತಾಮಹಾದಿಗಳು ಪರಮಾನಂದವನ್ನು ಹೊಂದುವರು ಕರ್ಮವು ಪೂರ್ತಿಯಾದ ಬಳಿಕ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಊಟಮಾಡುವಾಗ ಹಾಲು- ಮೊಸರು- ತುಪ್ಪಗಳನ್ನು ಯಥೇಚ್ಛವಾಗಿ ಬಡಿಸಬೇಕು

೧೬ ವೃಷೋತ್ಸರ್ಗದ ಮೂಲಕ ಬಿಟ್ಟ ಗೂಳಿಯು ಬಾಯಾರಿಕೆಯಿಂದ ಬಳಲಿ, ಯಾವ ಕೆರೆಗೆ ಹೋಗಿ ನೀರು ಕುಡಿಯುವುದೋ ಆ ತಟಾಕೋದಕವನ್ನು ಕಲಶದಲ್ಲಿ ತುಂಬಿ ಅವನ ಪಿತೃದೇವತೆಗಳಿಗೆ ಪರೋಕ್ಷಚಾರಿಗಳಾದ ದೇವದೂತರು ತಂದೊಪ್ಪಿಸುತ್ತಾರೆ ಇದರಿಂದ ಆ ಪಿತೃಗಳೂ, ತನ್ಮೂಲಕ ಪಿತೃಲೋಕವೂ ಸಹ ತೃಪ್ತಿ ಹೊಂದುತ್ತದೆ

ಸರಿದ್ವರಾಂ ಕಾಂಚಿದಥೋಪಯಾತಿ
ತೃಷ್ಣಾನ್ವಿತಸ್ತಸ್ಯ ಪಿತಾಮಹಾನಾಂ ।
ತೃಪ್ತಿಂ ವಿಧತ್ತೇ ಸರಿತಾಂ ವರಿಷ್ಠಾ
ಸುದೀರ್ಘಕಾಲಂ ವಿಮಲಾಂಬುವಾಹ್ಯೈಃ ॥ ೧೭ ॥

ದರ್ಪೇಣ ಪೂರ್ಣಃ ಸವಿಷಾಣಘಾತೈಃ
ಧರಾಂ ಯದಾ ಧಾರಯತೇ ನರೇಂದ್ರ ।
ಪಿತೄಂಸ್ತದಾ ತಸ್ಯ ತದನ್ನಕೂಟಂ
ಧ್ರುವಂ ಸ ಯಾತೀತಿ ನ ಸಂಶಯೋಽತ್ರ ॥ ೧೮ ॥

ರೋಮ್ಣಾಂ ಚ ತುಲ್ಯಾನಿ ಶತಾನಿ ರಾಜನ್
ಭೋಕ್ತಾ ತಥಾ ತಸ್ಯ ದಿವಂ ಪ್ರಯಾತಿ ।

೧೭ ವೃಷೋತ್ಸರ್ಗದ ಹೋರಿಯು ಯಾವಾಗಲಾದರೂ ಬಾಯಾರಿ ಯಾವು ದಾದರೊಂದು ಹೊಳೆಯಲ್ಲಿ ನೀರುಕುಡಿದುದಾದರೆ ಕರ್ತೃವಿನ ಪಿತಾಮಹರಿಗೆ ಮಹತ್ತರವಾದ ತೃಪ್ತಿಯುಂಟಾಗುತ್ತದೆ ಮತ್ತು ಆ ಹೊಳೆಯು ನಿರ್ಮಲೋದಕಗಳಿಂದ ತುಂಬಿ ಯಾವಾಗಲೂ ಪ್ರವಹಿಸುತ್ತಲೇ ಇರುತ್ತದ

೧೮ ವೃಷೋತ್ಸರ್ಗದ ಹೋರಿ (ಗೂಳಿಯು) ಒಲು ಕೊಬ್ಬಿನಿಂದ ಕೂಡಿ ತನ್ನ ಕೊಂಬಿನಿಂದ ಭೂಮಿಯನ್ನು ತಿವಿದು ಮೇಲಕ್ಕೆ ಮಣ್ಣನ್ನಾವಾಗ ಎರಚು ವುದೋ ಆಗ ಅದು ಅನ್ನರೂಪವಾಗಿ ಪರಿಣಮಿಸಿ ಕರ್ತೃವಿನ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುತ್ತದೆ. ಈ ವಿಷಯದಲ್ಲಿ ಏನೇನೂ ಸಂದೇಹವಿಲ್ಲವಯ್ಯ ! ವಜ್ರಮಹಾರಾಜ

೧೯ ವೃಷೋತ್ಸರ್ಗಮಾಡಿದ ಕರ್ತೃವಿನ ಪಿತೃದೇವತೆಗಳು ಆ ಗೂಳಿಯ ಮೈಮೇಲೆ ಎಷ್ಟು ಕೂದಲುಗಳಿವೆಯೋ ಅಷ್ಟು ನೂರು ವರ್ಷಗಳ ಕಾಲ ಬೇಕಾದ ಭೋಗಭಾಗ್ಯಗಳನ್ನನುಭವಿಸುತ್ತಾ ಅಪ್ಸರಸ್ತ್ರೀಯರಿಂದ ಸೇವೆಯನ್ನು ಹೊಂದುತ್ತಾ

**ಸಂವತ್ಸರಾಣಾಂ ಪರಿಪೂರ್ಣಕಾಮಃ**
**ಸಂಸೇವ್ಯಮಾನಸ್ತ್ರಿದಶಾಂಗನಾಭಿಃ ।** ॥ ೧೯ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ವೃಷೋತ್ಸರ್ಗವರ್ಣನೋ ನಾಮ ಸಪ್ತಚತ್ವಾರಿಂಶದುತ್ತರ ಶತತಮೋಽಧ್ಯಾಯಃ**

---

ಸ್ವರ್ಗಲೋಕದಲ್ಲಿ ಸುಖವಾಗಿ ವಾಸಮಾಡುತ್ತಾರೆ ಈ ರೀತಿಯಾಗಿ ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ವೃಷೋತ್ಸರ್ಗ ವರ್ಣನೆಯೆಂಬ ಹೆಸರಿನ ಒಂದುನೂರ ನಲವತ್ತೇಳನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಚತ್ವಾರಿಂಶದುತ್ತರ ಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಚರಿತಂ ಬುಧಪುತ್ರಸ್ಯ ಮಾರ್ಕಂಡೇಯ ಮಯಾ ಶ್ರುತಂ ।
ಶ್ರುತಃ ಶ್ರಾದ್ಧವಿಧಿಃ ಪುಣ್ಯಃ ಸರ್ವಪಾಪಪ್ರಣಾಶನಃ ॥ ೧ ॥

ಧೇನ್ವಾಃ ಪ್ರಸೂಯಮಾನಾಯಾಃ ಫಲಂ ದಾನೇ ತಥಾ ಶ್ರುತಂ ।
ಕೃಷ್ಣಾಜಿನಪ್ರದಾನಂ ಚ ವೃಷೋತ್ಸರ್ಗಸ್ತಥೈವ ಚ ॥ ೨ ॥

ಶ್ರುತ್ವಾ ರೂಪಂ ನರೇಂದ್ರಸ್ಯ ಬುಧಪುತ್ರಸ್ಯ ಭಾರ್ಗವ ।
ಕೌತೂಹಲಂ ಸಮುತ್ಪನ್ನಂ ತನ್ಮಮಾಚಕ್ಷ್ವ ಪೃಚ್ಛತಃ ॥ ೩ ॥

---

### ಒಂದುನೂರ ನಲವತ್ತೆಂಟನೆಯ ಅಧ್ಯಾಯವು.

೧-೩ ವಜ್ರಮಹಾರಾಜನು ಹೇಳುತ್ತಾನೆ —ಎಲೈ ಮಾರ್ಕಂಡೇಯನೇ! ಇದುವರಿಗೆ ನಿನ್ನಿಂದ ಬುಧನ ಮಗನಾದ ಪುರೂರವನ ಚರಿತ್ರೆಯು ಹೇಳಲ್ಪಟ್ಟಿತು. ಪುಣ್ಯಕರವೂ ಪಾಪಪರಿಹಾರಕವೂ ಆದ ಶ್ರಾದ್ಧವಿಧಿಯು ಸಹ ನಿನ್ನಿಂದ ಹೇಳಲ್ಪಟ್ಟಿತು. ಉಭಯಮುಖೀಗೋದಾನದ ಫಲವೂ ಸಹ ಕೇಳಲ್ಪಟ್ಟಿತು. ವೃಷೋತ್ಸರ್ಗ ಮಹಿಮೆ, ಕೃಷ್ಣಾಜಿನದ ಮಹಿಮೆಗಳೂ ಸಹ ಶ್ರುತವಾದವು ಆವರೆ ಬುಧನ ಮಗ ನಾದ ಆ ಪುರೂರವನಿಗೆ ಅಂತಹ ತ್ರಿಭುವನ ಕಮನೀಯವಾದ ಸುಂದರತರ ಸೌಂದ ರ್ಯವು ಆವೆಂತು ಉಂಟಾಯಿತೋ ಅದನ್ನು ಕೇಳಬೇಕೆಂದು ಆಸೆಯಾಗಿದೆ ದಯ ವಿಟ್ಟು ಆ ಸಂಗತಿಯನ್ನು ನನಗೋಸ್ಕರ ವಿಶದವಾಗಿ ತಿಳಿಸಬೇಕು

ಕೇನ ಕರ್ಮವಿಪಾಕೇನ ಸ ತು ರಾಜಾ ಪುರೂರವಾಃ ।
ಅವಾಪ ತಾದೃಶಂ ರೂಪಂ ಸೌಭಾಗ್ಯಮಪಿ ಚೋತ್ತಮಂ ॥ ೪ ॥

ದೇವಾಂಸ್ತ್ರಿಭುವನಶ್ರೇಷ್ಠಾನ್ಗಂಧರ್ವಾಂಶ್ಚ ಮನೋರಮಾನ್ ।
ಉರ್ವಶೀ ಸಂಗತಾ ತ್ಯಕ್ತ್ವಾ ಸರ್ವಭಾವೇನ ತಂ ನೃಪಂ ॥ ೫ ॥

॥ ಮಾರ್ಕಂಡೇಯ ಉವಾಚ ॥

ಶೃಣು ಕರ್ಮವಿಪಾಕೇನ ಯೇನ ರಾಜಾ ಪುರೂರವಾಃ ।
ಪುರೂರವಾ ಇತಿ ಖ್ಯಾತೋ ಮದ್ರೇಷ್ವಾಸೀನ್ಮಹೀಪತಿಃ ॥ ೬ ॥

ಚಾಕ್ಷುಷಸ್ಯಾನ್ವಯೇ ಜಾತಶ್ಚಾಕ್ಷುಷಸ್ಯಾಂತರೇ ಮನೋಃ ।
ಸರ್ವೈರ್ನೃಪಗುಣೈರ್ಯುಕ್ತಃ ಕೇವಲಂ ರೂಪವರ್ಜಿತಃ ॥ ೭ ॥

---

೪-೫ ಯಾವ ಕರ್ಮದ ಫಲವಾಗಿ ಆ ಪುರೂರವ ಮಹಾರಾಜನು ಅಂತಹ ದಿವ್ಯಸೌಂದರ್ಯವನ್ನೂ ಸೌಭಾಗ್ಯವನ್ನೂ ಹೊಂದಿದನೋ ಮತ್ತು ಆ ಪರಮ ಸುಂದರಿಯಾದ ಊರ್ವಶಿಯು ತ್ರಿಭುವನದಲ್ಲೆಲ್ಲಾ ಶ್ರೇಷ್ಠರಾದ ಮನೋಹರ ರೂಪ ಶಾಲಿಗಳಾದ ಗಂಧರ್ವರನ್ನೆಲ್ಲಾ ಬಿಟ್ಟು ಈ ಪುರೂರವನನ್ನೇ ಅನೇಕ ಪ್ರೀತಿಯಿಟ್ಟು ವರಿಸಿದಳೋ ಆ ಸಂಗತಿಯನ್ನು ದಯಮಾಡಿ ತಿಳಿಸಬೇಕು.

೬ ಮಾರ್ಕಂಡೇಯನು ಹೇಳುತ್ತಾನೆ —ಪುರೂರವನ ಹಿಂದಿನಜನ್ಮದ ವೃತ್ತಾಂತ—ಅಯ್ಯ! ವಜ್ರಮಹಾರಾಜನೆ, ಕೇಳು ಯಾವ ಕರ್ಮದ ಫಲವಾಗಿ ಪುರೂರವ ಮಹಾರಾಜನು ಸುಪ್ರಸಿದ್ಧನಾದ ಚಕ್ರವರ್ತಿಯಾಗಿಯೂ ಪರಮಸುಂದರ ನಾಗಿಯೂ ಜನ್ಮಿಸಿದನೋ ಆ ಕಥೆಯನ್ನು ಹೇಳುತ್ತೇನೆ, ಕೇಳು ಈ ಪುರೂರವನು ಹಿಂದಿನ ಜನ್ಮದಲ್ಲಿ ಮದ್ರದೇಶದ ರಾಜನಾಗಿ ಹುಟ್ಟಿದ್ದನು

೭ ಈ ಮದ್ರರಾಜನು ಚಾಕ್ಷುಷ ಮನ್ವಂತರದಲ್ಲಿ ಅದೇ ಚಾಕ್ಷುಷಮನುವಿನ ವಂಶದಲ್ಲೇ ಉತ್ಪನ್ನನಾಗಿ ಸಕಲ ರಾಜಗುಣಗಳಿಂದ ಕೂಡಿದವನಾದಾಗ್ಯೂ ಬಹು ಕುರೂಪಿಯಾಗಿದ್ದನು

॥ ವಜ್ರ ಉವಾಚ ॥

ಪುರೂರವಾ ಮದ್ರಪತಿಃ ಕರ್ಮಣಾ ಕೇನ ಭಾರ್ಗವ ।
ಬಭೂವ ಕರ್ಮಣಾ ಕೇನ ಕುರೂಪಶ್ಚ ತಥಾ ದ್ವಿಜಃ ॥ ೮ ॥

॥ ಮಾರ್ಕಂಡೇಯ ಉವಾಚ ॥

ದ್ವಿಜಗ್ರಾಮೇ ದ್ವಿಜಶ್ರೇಷ್ಠೋ ನಾಮ್ನೈವಾಸೀತ್ಪುರೂರವಾಃ ।
ನದ್ಯಾಃ ಕೂಲೇ ಮಹಾರಾಜ ಪೂರ್ವಜನ್ಮನಿ ಪಾರ್ಥಿವಃ ॥ ೯ ॥

ಸ ತು ಮದ್ರಪತಿರ್ನಾಮ್ನಾ ಯೋಽಭೂದ್ರಾಜಾ ಪುರೂರವಾಃ ।
ಅಸ್ಮಿನ್ನನ್ಮನ್ಯಸೌ ವಿಪ್ರೋ ದ್ವಾದಶೀಷು ಸದಾಽನಘ ॥ ೧೦ ॥

ಉಪೋಷ್ಯ ಪೂಜಯಾಮಾಸ ರಾಜ್ಯಕಾಮೋ ಜನಾರ್ದನಂ ।
ಚಕಾರ ಸೋಪವಾಸಂ ಚ ಸ್ನಾನಮಭ್ಯಂಗಪೂರ್ವಕಂ ॥ ೧೧ ॥

ಉಪವಾಸಫಲಂ ಪ್ರಾಪ್ಯ ರಾಜ್ಯಂ ಮದ್ರೇಷ್ವಕಂಟಕಂ ।
ಉಪೋಷಿತಸ್ತದಾಭ್ಯಂಗಾದ್ರೂಪಹೀನೋಽಭ್ಯಜಾಯತ ॥ ೧೨ ॥

೮ ವಜ್ರಮಹಾರಾಜನು ಕೇಳುತ್ತಾನೆ --ಎಲೈ ಮಾರ್ಕಂಡೇಯನೇ! ಮದ್ರಪತಿಯಾಗಿ ಜನಿಸಿದ್ದ ಪುರೂರವನು ಅದಾವ ಕರ್ಮವಿಪಾಕದಿಂದ ಕುರೂಪಿಯಾಗಿದ್ದನೆಂಬುದನ್ನು ತಿಳಿಸಬೇಕು

೯-೧೨ ಮಾರ್ಕಂಡೇಯನು ಹೇಳುತ್ತಾನೆ —ಈ ಪುರೂರವನು ಮದ್ರರಾಜನಾಗುವುದಕ್ಕಿಂತ ಹಿಂದಿನ ಜನ್ಮದಲ್ಲಿ ದ್ವಿಜಗ್ರಾಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿದ್ದನು ಈ ದ್ವಿಜಗ್ರಾಮವು ನದೀತೀರದಲ್ಲಿ ವಿರಾಜಿಸುತ್ತಲಿತ್ತು ಈ ಬ್ರಾಹ್ಮಣನು ಪ್ರತಿ ದ್ವಾದಶೀ ದಿವಸದಲ್ಲೂ ರಾಜ್ಯಕಾಮನಾಗಿ ಉಪವಾಸಮಾಡುತ್ತಾ ಮಹಾವಿಷ್ಣುವನ್ನು ಪೂಜಿಸುತ್ತಲಿದ್ದನು ಈ ರೀತಿ ದ್ವಾದಶೀ ದಿವಸ ಈ ಬ್ರಾಹ್ಮಣನು ಅಭ್ಯಂಗನಸ್ನಾನ (ನೀರೆರೆದುಕೊಂಡು) ಮಾಡಿ ಉಪೋಷ್ಯ ಮಾಡುತ್ತಲಿದ್ದನು. ಈ ಉಪವಾಸದ ಫಲವಾಗಿ ಈ ಪುರೂರವನು ಹಿಂದೆ ಮದ್ರರಾಜನಾಗಿಯೂ, ಅಭ್ಯಂಗಸ್ನಾನಮಾಡಿದುದರ ಫಲವಾಗಿ ಕುರೂಪಿಯಾಗಿಯೂ ಹುಟ್ಟಿದನು

ಉಪೋಷಿತೋ ನರಸ್ತಸ್ಮಾತ್ಸ್ನಾನಮಭ್ಯಂಗಪೂರ್ವಕಂ ।
ವರ್ಜಯೇತ್ತತ್ಪ್ರಯತ್ನೇನ ರೂಪಘ್ನಂ ತತ್ಪರಂ ನೃಣಾಂ ॥ ೧೩ ॥

ಏತತ್ತೇ ಕಥಿತಂ ತಸ್ಯ ಯದ್ವೃತ್ತಂ ಪೂರ್ವಜನ್ಮನಿ ।
ಮದ್ರೇಶ್ವರತ್ವೇ ಚರಿತಂ ಶೃಣು ತಸ್ಯ ಮಹೀಪತೇಃ ॥ ೧೪ ॥

ತಸ್ಯ ರಾಜಗುಣೈಃ ಸರ್ವೈಃ ಸಮುಪೇತಸ್ಯ ಪಾರ್ಥಿವ ।
ಜನಾನುರಾಗೋ ನೈವಾಸೀದ್ರೂಪಹೀನಸ್ಯ ಯಾದವ ॥ ೧೫ ॥

ರೂಪಕಾಮಃ ಸ ಮದ್ರೇಶಸ್ತಪಸೇ ಕೃತನಿಶ್ಚಯಃ ।
ರಾಜ್ಯಂ ಮಂತ್ರಿಗತಂ ಕೃತ್ವಾ ಜಗಾಮ ಹಿಮಪರ್ವತಂ ॥ ೧೬ ॥

ವ್ಯವಸಾಯದ್ವಿತೀಯಸ್ತು ಪದ್ಭ್ಯಾಮೇವ ಮಹಾಯಶಾಃ ।
ಊರ್ಧ್ವಗಂ ಸಂತೀರ್ಯ ಸ ನದಂ ವಿಷಯಾಂತೇ ಸ್ವಕಾಂನದೀಂ ।
ಇರಾವತೀಮಿತಿ ಖ್ಯಾತಾಂ ದದರ್ಶಾತಿಮನೋಹರಾಂ ॥ ೧೭ ॥

೧೩-೧೪ ಆದ್ದರಿಂದ ಉಪವಾಸದ ದಿನಗಳಲ್ಲಿ ಯಾರೂ ಎಣ್ಣೆಯೊತ್ತಿಕೊಂಡು ನೀರೆರೆದುಕೊಳ್ಳಬಾರದು ಹಾಗೆ ಮಾಡಿದರೆ ಮುಂದಿನ ಜನ್ಮದಲ್ಲಿ ಕುರೂಪಿಯಾಗಿ ಹುಟ್ಟಬೇಕಾಗುವುದು ಎಲೈ ವಜ್ರರಾಜನೇ ! ಈ ಪುರೂರವನು ಮದ್ರೇಶ್ವರನಾಗಿ ಹುಟ್ಟುವುದಕ್ಕಿಂತ ಹಿಂದಿನ (ಮೂರನೇ) ಜನ್ಮದಲ್ಲಿ ಯಾವ ಚರಿತ್ರೆ ನಡೆಯಿತೋ ಅದನ್ನು ಈಗ ಹೇಳಿಯಾಯಿತು ಆ ಬಳಿಕ ಆ ಬ್ರಾಹ್ಮಣನು ಜನ್ಮಾಂತರದಲ್ಲಿ ಮದ್ರರಾಜನಾಗಿ ಜನ್ಮಿಸಿದ ಕಾಲದಲ್ಲಿ ನಡೆದ ಚರಿತ್ರೆಯನ್ನು ಈಗ ಹೇಳುತ್ತೇನೆ, ಕೇಳು.

೧೫ ಎಲೈ ಮಹಾರಾಜನೆ! ಕೇಳು ಆ ಮದ್ರರಾಜನು ಸಕಲ ರಾಜ ಗುಣಗಳಿಂದ ಕೂಡಿದವನಾದಾಗ್ಯೂ ಹಿಂದಿನ ಜನ್ಮದ ಪಾಪಶೇಷದಿಂದ ಕುರೂಪಿಯಾಗಿ ಹುಟ್ಟಿದ್ದನಾದುದರಿಂದ ಅವನನ್ನು ಯಾರೂ ಪ್ರೀತಿಸುತ್ತಿರಲಿಲ್ಲ

೧೬. ಆ ಮದ್ರರಾಜನು ಸೌಂದರ್ಯೋಪಾಸನೆಗಾಗಿಯೂ ರೂಪಕಾಮನ ಯಿಂದಲೂ ಕೂಡಿದವನಾಗಿ ರಾಜ್ಯವನ್ನು ಮಂತ್ರಿಗಳ ಆಡಳಿತಕ್ಕೆ ಒಪ್ಪಿಸಿ ತಾನು ತಪಸ್ಸು ಮಾಡುವುದಕ್ಕಾಗಿ ಹಿಮವತ್ಪರ್ವತಕ್ಕೆ ಹೊರಟುಹೋದನು

೧೭ ಈರೀತಿ ವ್ಯವಸಾಯತತ್ಪರನಾದ ಆ ರಾಜನು ಕಾಲುನಡಿಗೆಯಲ್ಲೇ ಪ್ರಯಾಣಮಾಡಿಕೊಂಡು ಹೊರಟು ದೇವಗಂಗಾನದಿಯನ್ನು ದಾಟಿ ತನ್ನ ದೇಶದ

**ತುಹಿನಗಿರಿಭವಾಂ ಮಹೌಘವೇಗಾಂ**
**ತುಹಿನಸಗರ್ಭಸಮಾನಶೀತಲೋದಾಂ ।**
**ತುಹಿನಸದೃಸವರ್ಣಫೇನಯುಕ್ತಾಂ**
**ತುಹಿನಯಶಾಃ ಸರಿತಂ ದದರ್ಶ ರಾಜಾ ॥ ೧೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಮದ್ರೇಶ್ವರಸ್ಯ ತಪೋವನ ಗಮನಂ ನಾಮ ಅಷ್ಟಚತ್ವಾರಿಂಶದುತ್ತರ ಶತತಮೋಽಧ್ಯಾಯಃ**



ಎಸ್ಲಿಯ ಕೊನೆಯಲ್ಲಿ ಸಿಕ್ಕಿದ ಇರಾವತಿಯೆಂಬ ಮನೋಹರವಾದ ನದಿಯನ್ನು ಕಂಡನು

೧೮ ಆ ಇರಾವತೀನದಿಯು ಹಿಮಾಲಯದಲ್ಲಿ ಹುಟ್ಟಿ ಮಹಾವೇಗವಾದ ಪ್ರವಾಹದಿಂದ ಹರಿಯುತ್ತಾ ಶುಭ್ರವಾದ ನೀರಿನಿಂದೊಡಗೂಡಿ ಬೆಳ್ಳಗಿರುವ ನೊರೆಗಳಿಂದ ಕೂಡಿದುದಾಗಿದ್ದಿತು ಅಂತಹ ಮಹಾನದಿಯನ್ನು ಶುಭ್ರಯಶಸ್ವಿಯಾದ ಮದ್ರಾಧೀಶನು ನೋಡಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಮದ್ರೇಶ್ವರನು ತಪೋವನಕ್ಕೆ ಹೋದನೆಂಬ ಹೆಸರಿನ ಒಂದುನೂರ ನಲವತ್ತೆಂಟನೆಯ ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣು ಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕೋನಪಂಚಾಶದುತ್ತರಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

**ಸ ದದರ್ಶ ನದೀಂ ಪುಣ್ಯಾಂ ರಮ್ಯಾಂ ಹೈಮವತೀಂ ಶುಭಾಂ ।**
**ಗಂಧರ್ವಗಣಸಂಕೀರ್ಣಾಂ ನಿತ್ಯಂ ಶಕ್ರೇಣ ಸೇವಿತಾಂ ॥ ೧ ॥**

**ಸುರೇಭಮದಸಿಂಧೂರೈರ್ಯಸ್ಯಾಂ ರಾಜಿರ್ವಿರಾಜತೇ ।**
**ಮಧ್ಯೇನ ಶಕ್ರಚಾಪಾಭಾ ತಸ್ಯಾಂ ಮಜ್ಜತಿ ಸರ್ವದಾ ॥ ೨ ॥**

**ತಪಸ್ವಿಶರಣಾಯಾತಾಂ ಮುಖ್ಯಬ್ರಾಹ್ಮಣಸೇವಿತಾಂ ।**
**ದದರ್ಶ ಶೀತಪಾನೀಯಾಂ ಮಹಾರಾಜಃ ಪುರೂರವಾಃ ॥ ೩ ॥**

### ಒಂದುನೂರ ನಲವತ್ತೊಂಭತ್ತನೆಯ ಅಧ್ಯಾಯವು.

೧-೪ ಮಾರ್ಕಂಡೇಯನು ಹೇಳುತ್ತಾನೆ ---ಇರಾವತೀ (ಹೈಮವತೀ) ನದೀವರ್ಣನೆ —ಆ ಮದ್ರರಾಜನು ಪುಣ್ಯಕರವಾದ ಪರಮಮಂಗಳದಾಯಕವಾದ ಗಂಧರ್ವರ ಗುಂಪಿನಿಂದಲೂ ಇಂದ್ರನಿಂದಲೂ ಸೇವಿತವಾದ, ಆ ಇರಾವತೀನದಿಯನ್ನು ನೋಡಿದನಷ್ಟೆ ? ಆ ನದಿಯು ಹೇಗಿದ್ದಿತೆಂದರೆ —ಇಂದ್ರನ ಪಟ್ಟದಾನೆಯಾದ ಐರಾವತದ ಮದೋದಕವೆಂಬ ಸಿಂಧೂರದಿಂದ ಆ ಮಹಾನದಿಯ ಪಂಕ್ತಿಯು ವಿರಾಜಿಸುತ್ತಲಿತ್ತು ಇದನ್ನು ನೋಡಿದರೆ ಕಾಮನಬಿಲ್ಲು ಈ ನದಿಯಲ್ಲಿ ಸ್ನಾನಮಾಡುತ್ತಲಿರುವಂತೆ ತೋರುತ್ತಲಿತ್ತು. ತಪಸ್ವಿಗಣದಿಂದಲೂ ಮುಖ್ಯ ಬ್ರಾಹ್ಮಣರಿಂದಲೂ ಸೇವಿತವಾದ ಈ ಪವಿತ್ರನದಿಯು ಶೀತಲೋದಕದಿಂದ ಹರಿಯುತ್ತಿತ್ತು ಮತ್ತು ಅಲ್ಲಿರುವ ಹಂಸಪಕ್ಷಿಗಳೆಂಬ ಛತ್ರಿಯಿಂದಲೂ, ಜೊಂಡುಹುಲ್ಲುಗಳೆಂಬ ಚಾಮರಗಳಿಂದಲೂ ತುಂಬಿದುದಾಗಿ, ಅದು ದೇವರಾಜನಿಗೆ ಅಭಿಷೇಕಮಾಡುತ್ತಲಿದೆಯೋ ಎಂಬಂತೆ

**ಪೃತಹಂಸಾವಲೀಛತ್ರಾಂ ಕಾಶಚಾಮರವೀಜಿತಾಂ ।**
**ಸಾಭಿಷೇಕಾಮಿವ ಸತಾಂ ಪಶ್ಯನ್ಪ್ರೀತಿಂ ಪರಾಂ ಯಯೌ ॥ ೪ ॥**

**ಪುಣ್ಯಾಂ ಸುಶೀಲತಾಂ ಹೃದ್ಯಾಂ ಮನಸಃ ಪ್ರೀತಿವರ್ಧನೀಂ ।**
**ಕ್ಷಯವೃದ್ಧಿಯುತಾಂ ಸೌಮ್ಯಾಂ ಸೋಮಮೂರ್ತಿಮಿವಾಪರಾಂ ॥ ೫ ॥**

**ಸುಶೀತಶೀಘ್ರಪಾನೀಯಾಂ ದ್ವಿಜಪುಂಜನಿಷೇವಿತಾಂ ।**
**ಸುತಾಂ ಹಿಮವತಃ ಶ್ರೇಷ್ಠಾಂ ಚಂಚದ್ವೀಚಿವಿರಾಜಿತಾಂ ॥ ೬ ॥**

**ಅಮೃತಸ್ವಾದುಸಲಿಲಾಂ ತಾಪಸೈರುಪಶೋಭಿತಾಂ ।**
**ಸ್ವರ್ಗಾರೋಹಣ ನಿಃಶ್ರೇಣೀಂ ಸರ್ವಕಲ್ಮಷನಾಶಿನೀಂ ॥ ೭ ॥**

**ಅಗ್ರ್ಯಾಂ ಸಮುದ್ರಮಹಿಷೀಂ ಮಹಿಷೀಗಣ ಗಾಹಿತಾಂ ।**
**ಹಿತಾಂ ಸರ್ವಸ್ಯ ಲೋಕಸ್ಯ ಕಸ್ಯ ನೌತ್ಸುಕ್ಯಕಾರಿಣೀ ॥ ೮ ॥**

---

ತೋರುತ್ತಲಿತ್ತು. ಇಂತಹ ಸಮನಾನಂದಕರವಾದ ನದಿಯನ್ನು ಕಂಡು ಮದ್ರ ರಾಜನು ಬಹಳ ಸಂತೋಷಪಟ್ಟನು.

೫-೧೩ ಆ ನದಿಯು ಪುಣ್ಯಕರವಾದುದಾಗಿಯೂ, ತಂಪಾಗಿಯೂ, ಮನೋಹರವಾಗಿಯೂ, ಮನಸ್ಸಂತೋಷವನ್ನುಂಟುಮಾಡತಕ್ಕುದಾಗಿಯೂ, ಸೌಮ್ಯವಾಗಿಯೂ, ಕ್ಷಯವೃದ್ಧಿ (ಏರಿಳಿತ) ಗಳಿಂದ ಕೂಡಿದುದಾಗಿಯೂ ಇದ್ದುದನ್ನು ನೋಡಿದರೆ ಇದೂ ಒಂದು ಪ್ರತ್ಯೇಕವಾದ ಚಂದ್ರನ ಅವತಾರಮೂರ್ತಿಯೋ ಎಂಬಂತೆ ತೋರುತ್ತಲಿತ್ತು ಮತ್ತು ಈ ನದಿಯು ತಂಪಾಗಿಯೂ ರುಚಿಕರವಾಗಿಯೂ ಉಳ್ಳ ನೀರಿನಿಂದೊಡಗೂಡಿ, ಬ್ರಾಹ್ಮಣರ ಗುಂಪಿನಿಂದ ಯಾವಾಗಲೂ ಸೇವಿಸಲ್ಪಡುತ್ತಿತ್ತು ಇಂತಹ ಹಿಮವತ್ಪುತ್ರಿಯಾದ ಇರಾವತಿಯು ಚದರಿ ಹೋಗುತ್ತಿರುವ ಅಲೆಗಳಿಂದಲೂ, ಅಮೃತೋಪಮವಾದ ಸ್ವಾದೂದಕದಿಂದಲೂ ಕೂಡಿ ತಪಸ್ವಿಮಂಡಲದಿಂದ ವಿರಾಜಿಸುತ್ತಿತ್ತು ಮತ್ತು ಈ ನದಿಯನ್ನು ನೋಡಿದರೆ ಸ್ವರ್ಗಕ್ಕೆ ಹತ್ತಲು ಸಾಧಕವಾದ ಏಣಿಯಂತೆ ಕಾಣುತ್ತಿತ್ತು. ಸಕಲ ಪಾಪಪರಿಹಾರಕವಾದ ಸಮುದ್ರದ ಪಟ್ಟಮಹಿಷಿಯೆನಿಸಿಕೊಂಡ ಈ ಮಹಾನದಿಯು, ತಾನೇ ಸಮುದ್ರದ ಮಹಿಷಿಯಾಗಿದ್ದರೂ ಕೂಡ ಮಹಿಷಿ ಗಣಗಳಿಂದ ತಾನೂ ಕೂಡ ಬೆರೆದವಳಾಗಿ ಸರ್ವ ಲೋಕಕ್ಕೂ ಹಿತಕಾರಿಣಿಯೆನಿಸಿಕೊಂಡು ಮೆರೆಯುತ್ತಿದ್ದಳು. ಇಂತಹ ನದಿಯನ್ನು ನೋಡಿದರ

**ಗೋಕುಲಾಕುಲತೀರಾಂ ತಾಂ ರಮ್ಯಾಂ ಶೈವಾಲ ವರ್ಜಿತಾಂ ।**
**ಹಂಸಸಾರಸಸಂಘುಷ್ಟೈರ್ಜಲಜೈಃ ಸೇವಿತಾಂ ಶುಭೈಃ ॥ ೯ ॥**

**ಆವರ್ತನಾಭಿಗಂಭೀರಾಂ ದ್ವಿಪೋರುಜಘನಸ್ಥಲಾಂ ।**
**ನೀಲನೀರಜನೇತ್ರಾಂ ತಾಮುತ್ಫುಲ್ಲಕಮಲಾನನಾಂ ॥ ೧೦ ॥**

**ಹಿಮಾಭಫೇನವಸನಾಂ ಚಕ್ರವಾಕಾಧರಾಂ ಶುಭಾಂ ।**
**ಬಲಾಕಾಪಂಕ್ತಿದಶನಾಂ ಚಲನ್ಮತ್ಸ್ಯಾವಲಿಭ್ರುವಂ ॥ ೧೧ ॥**

**ಸ್ವಜಲೋದ್ಧತಮಾತಂಗರಮ್ಯಕುಂಭಪಯೋಧರಾಂ ।**
**ಹಂಸನೂಪುರಸಂಘುಷ್ಟಾಂ ಮೃಣಾಲವಲಯಾವಲೀಂ ॥ ೧೨ ॥**

**ಯಸ್ಯಾಂ ರೂಪಮದೋನ್ಮತ್ತಗಂಧರ್ವಾನುಗತಃ ಸದಾ ।**
**ಮಧ್ಯಾಹ್ನಸಮಯೇ ರಾಜನ್ಕ್ರೀಡತ್ಯಪ್ಸರಸಾಂ ಗಣಃ ॥ ೧೩ ॥**

---

ಯಾರಿಗೆ ತಾನೇ ಮನಸ್ಸಂತೋಷವಾಗಲಿಕ್ಕಿಲ್ಲ? ಮತ್ತು ಆ ನದಿಯ ತೀರದಲ್ಲಿ ನೂರಾರು ಹಸುಗಳು ಹುಲ್ಲು ಮೇಯುತ್ತಾ ನಿಂತಿರುವುವು ಮತ್ತಾ ನದಿಯಲ್ಲಿ ಪಾಚೀ (ಪಾಚೀ-ಹಸುರು) ಎಂಬುದು ಸ್ವಲ್ಪವೂ ಇರಲಿಲ್ಲ ಹಂಸ, ಸಾರಸವೇ ಮುಂತಾದ ಜಲಚರ ಪಕ್ಷಿಗಳು ಅಲ್ಲಿ ವಿಶೇಷವಾಗಿ ಪ್ರಕಾಶಿಸುತ್ತಿದ್ದುವು. ಆ ಇರಾವತಿಯು ಸ್ತ್ರೀರೂಪವನ್ನು ಧರಿಸಿ ಸುಳಿಗಳೆಂಬ ಹೊಕ್ಕಳಿನಿಂದ ಗಂಭೀರವಾಗಿ ಕಾಣುತ್ತಿದ್ದಳು ಕನ್ನೈದಿಲೆ ಹೂವುಗಳೆಂಬ ನೇತ್ರಗಳಿಂದ ಹೊಳೆಯುತ್ತಿದ್ದಳು ಹಿಮದ ನೊರೆಯೆಂಬ ಬಿಳೀ ಸೀರೆಯನ್ನುಟ್ಟಿರುವಂತೆ ತೋರುತ್ತಿದ್ದಳು ಚಕ್ರವಾಕವೆಂಬ ತುಟಿಯಿಂದ ರಾರಾಜಿಸುತ್ತಲಿದ್ದಳು ಬೆಳ್ಳಕ್ಕಿಗಳೆಂಬ ದಂತಪಂಕ್ತಿಯಿಂದೊಡಗೂಡಿದ್ದಳು ನೀರಿನೊಳಗೆ ಓಡಾಡುತ್ತಿರುವ ಮೀನುಗಳೆಂಬ ಹುಬ್ಬನ್ನು ಹೊಂದಿದ್ದಳು ಈ ನದಿಗೆ ಬಂದು ಮದ್ದಾನೆಗಳು ಸೊಂಡಲಿನಿಂದ ನೀರನ್ನೆತ್ತಿ ತಮ್ಮ ಕುಂಭಸ್ಥಳ (ತಲೆಯ)ಗಳ ಮೇಲೆ ಎರಚಿಕೊಳ್ಳುತ್ತಿದ್ದುದನ್ನು ನೋಡಿದರೆ, ಈ ಇರಾವತಿಯು ಈ ಗಜಕುಂಭಕುಚಗಳನ್ನು ಹೊಂದಿರುವಳೋ ಎಂಬಂತೆ ಕಾಣುತ್ತಿತ್ತು ಮತ್ತೀ ಇರಾವತಿಯು ಹಂಸನಿನಾದವೆಂಬ ಕಾಲುಗೆಜ್ಜೆಯನ್ನಿಟ್ಟುಕೊಂಡು ಪ್ರಕಾಶಿಸುತ್ತಲಿದ್ದಳು ಇಂತಹ ಈ ಸುಂದರ ಸರಸ್ಸಿನ ಸೌಂದರ್ಯದಿಂದ ಮೋಹಿತರಾದ ರೂಪಮದೋನ್ಮತ್ತರಾದ ಗಂಧರ್ವರು ಮಧ್ಯಾಹ್ನಕಾಲದಲ್ಲಿ ಅಪ್ಸರಸ್ತ್ರೀಯರ ಗುಂಪಿನಿಂದ ಕೂಡಿಕೊಂಡು ಇಲ್ಲಿಗೆ ಬಂದು ವಿಹಾರಮಾಡುತ್ತಲಿದ್ದರು

**ತಾಮುಪ್ಸರೇವಿನಿರ್ಮುಕ್ತಾನ್ಸಹಂತೀಂ ಕುಸುಮಾನ್ ಶುಭಾನ್ ।**
**ಸ್ವತೀರದ್ರುಮಸಂಭೂತಾನ್ನಾನಾವರ್ಣಾನ್ಸುಗಂಧಿನಃ ॥ ೧೪ ॥**

**ತರಂಗಶತಸಂಕ್ರಾಂತಸೂರ್ಯಮಂಡಲದುರ್ದಶಂ ।**
**ಸುರೇಭಜನಿತಾಘಾತ ವಪ್ರದ್ವಯವಿಭೂಷಿತಾಂ ॥ ೧೫ ॥**

**ಶಕ್ರೇಭಗಂಡಸಲಿಲೈರ್ದೇವಸ್ತ್ರೀಕುಚಚಂದನೈಃ ।**
**ಸಂಯುತಂ ಸಲಿಲಂ ಯಸ್ಯಾಃ ಷಟ್ಪದೈರುಪಸೇವ್ಯತೇ ॥ ೧೬ ॥**

**ಯಸ್ಯಾಸ್ತೀರಭವಾ ವೃಕ್ಷಾಃ ಸುಗಂಧಿಕುಸುಮಾನ್ವಿತಾಃ ।**
**ತಥಾ ಪ್ರಕೃಷ್ಟಭ್ರಮರಾ ಭ್ರಮರೈಸ್ತೇ ನಿರಾಕುಲಾಃ ॥ ೧೭ ॥**

**ಯಸ್ಯಾಸ್ತೀರೇ ರತಿಂ ಯಾಂತಿ ಸದಾ ಕಾಮವಶಾನುಗಾಃ ।**
**ತಪೋಧನಾಶ್ಚ ಋಷಯಸ್ತಥಾ ದೇವಾಃ ಸವಾಸವಾಃ ॥ ೧೮ ॥**

---

೧೪-೨೧ ಈ ನದಿಯ ತೀರದ ಉಭಯ ಪಾರ್ಶ್ವದಲ್ಲಿಯೂ ಯಾವಾಗಲೂ ಘಮಘಮಿಸುವ ಸುವಾಸನೆಯು ತುಂಬಿ ಆ ವಿಶೇಷ ಸುವಾಸನೆಯು ಘ್ರಾಣೇಂದ್ರಿಯದ ನೆಲೆಯೊಡೆಯುವಂತೆ ಪ್ರಸರಿಸಿದ್ದಿತು ಅದಕ್ಕೆ ಮುಖ್ಯ ಕಾರಣಗಳನ್ನಿಲ್ಲಿ ವಿವರಿಸಲಾಗುವುದು

ಅಪ್ಸರಸ್ತ್ರೀಯರು ತಾವು ಮುಡಿದಿದ್ದ ಸುವಾಸನಾಯುಕ್ತವಾದ ದಿವ್ಯಪುಷ್ಪಮಾಲೆಗಳನ್ನು ಆ ನದಿಯಲ್ಲಿ ಬಿಸುಡುತ್ತಿದ್ದುದರಿಂದಲೂ ಆ ಇರಾವತೀನದೀ ತೀರದಲ್ಲಿ ಹುಟ್ಟಿದ ವಿವಿಧವಾದ ಬಣ್ಣಗಳುಳ್ಳ ವಿವಿಧ ಸುಗಂಧ ಪರಿಮಳಗಳಿಂದೊಡಗೂಡಿದ ಹೂಗಳು ಯಥೇಚ್ಛವಾಗಿ ಆ ನದಿಯ ತೀರಗಳಲ್ಲಿ ಉದುರುತ್ತಿದ್ದುದರಿಂದಲೂ ಈ ನದಿಯ ನೂರಾರು ಅಲೆಗಳು ಪ್ರತಿ ನಿಮಿಷವೂ ಸೂರ್ಯಮಂಡಲಕ್ಕೆ ತಗುಲಿ ಅದರ ಕಿರಣಗಳೊಡನೆ ಬೆರೆತು ಹೋಗುತ್ತಲಿದ್ದುದರಿಂದಲೂ, ದೇವಗಜಗಳು ಉಭಯ ತೀರಗಳಲ್ಲೂ ಸಂಚರಿಸುತ್ತಾ ತಮ್ಮ ಮದೋದಕವನ್ನು ಆ ನದೀಜಲದೊಡನೆ ಬೆರೆಯುವಂತೆ ಮಾಡುತ್ತಿದ್ದುದರಿಂದಲೂ ಮತ್ತು ದೇವೇಂದ್ರನ ಐರಾವತದ ಗಂಡಸ್ಥಲದಿಂದ ಹೊರಟ ಮದೋದಕವು ಆ ನದಿಯಲ್ಲಿ ಬೆರೆಯುತ್ತಿದ್ದುದರಿಂದಲೂ, ದೇವತಾಸ್ತ್ರೀಯರು ಆ ನದಿಯಲ್ಲಿ ಸ್ನಾನಮಾಡುವಾಗ ಅವರ ಕುಚಗಳಿಗೆ ಲೇಪಿತವಾಗಿದ್ದ ಸುಗಂಧದ್ರವ್ಯಗಳು ಆಜಲದೊಡನೆ ಮಿಶ್ರವಾಗುತ್ತಲಿದ್ದುದರಿಂದಲೂ ಮೇಲ್ಕಂ

ಲಭಂತೇ ಯತ್ಪ್ರಲ್ಲತಾಂಗಾಸ್ತು ದೇವೇಭ್ಯಃ ಪ್ರತಿಮಾನನಾಃ ।
ಸ್ತ್ರಿಯಶ್ಚ ನಾಕೇ ಬಹುಲಾಃ ಪದ್ಮೇಂದು ಪ್ರತಿಮಾನನಾಃ ॥ ೧೯ ॥

ಯಾ ಬಿಭರ್ತಿ ಸದಾ ತೋಯಂ ದೇವಸಂಘೈರಪೀಡಿತಂ ।
ಪುಲಿಂದವೃಗವೃಂದೈಶ್ಚ ವ್ಯಾಧಸಂಘೈರಪೀಡಿತಂ ॥ ೨೦ ॥

ಸತಾಮರಸಪಾನೀಯಾಂ ಸತಾರಾಗಗನಾಮಲಾಂ ।
ಸ ತಾಂ ಪಶ್ಯನ್ಯಯೌ ರಾಜಾ ಸಕಾಮಿಪ್ಸಿತಕಾಮದಾ ॥ ೨೧ ॥

ದಂತೆ ಸುವಾಸನೆಯು ಸರ್ವದಾ ಅಲ್ಲಿ ತುಂಬಿಕೊಂಡಿತ್ತು. ಈ ಸುವಾಸನೆಯನ್ನು ಸೇವಿಸುವ ಸಲುವಾಗಿ ಭ್ರಮರ (ದುಂಬಿ) ಗಳು ಅನಾವಾಗಲೂ ಅಲ್ಲಿ ಝೇಂಕಾರ ಮಾಡುತ್ತಾ ವಿಹರಿಸುತ್ತಿದ್ದುವು. ಇರಾವತೀ ನದೀತೀರದಲ್ಲಿ ಬೆಳೆದಿದ್ದ ಮರಗಳು ಸುಗಂಧಯುಕ್ತವಾದ ಹೂವುಗಳನ್ನು ಬಿಡುತ್ತಿದ್ದುವು. ಆ ಹೂವುಗಳಿಗೆ ದುಂಬಿಗಳು ಮುತ್ತಿಕೊಳ್ಳುತ್ತಲಿದ್ದುವು.

ಆ ನದೀತೀರದಲ್ಲಿ ಸರ್ವದಾ ಕಾಮಾತುರರಾಗಿ ತಪಸ್ವಿಗಳಾದ ಋಷಿಗಳೂ ದೇವತೆಗಳೂ, ಇಂದ್ರನೇ ಮೊದಲಾದ ದೇವತಾವೃಂದವೂ ಸಹ ರತಿಸುಖವನ್ನು ಪಡೆಯುತ್ತಿದ್ದರು. ಈ ನದಿಯಲ್ಲಿ ಸ್ನಾನಮಾಡಿದ ಜನರೆಲ್ಲರೂ ದೇವತೆಗಳಿಗೆ ಸಮಾನಾದ ಸೌಂದರ್ಯವನ್ನು ಪಡೆದು ಸ್ವರ್ಗ ಸುಖವನ್ನು ಹೊಂದುತ್ತಿದ್ದರು. ಈ ನದಿಯಲ್ಲಿ ಸ್ನಾನಮಾಡಿದ ಹೆಂಗಸರೂ ಸಹ ಕಮಲದಳದಂತೆ ನೇತ್ರವುಳ್ಳವರಾಗಿ ಪರಮ ಸೌಂದರ್ಯವತಿಯರಾಗಿ ಸ್ವರ್ಗವನ್ನು ಸೇರುತ್ತಿದ್ದರು. ಈ ನದಿಯ ನೀರನ್ನು ಹೊಗಳದಿದ್ದವರೇ ಇಲ್ಲ. ದೇವತೆಗಳ ಮಾತಿರಲಿ ಮ್ಲೇಚ್ಛ ಜನರೂ ಸಹ ವ್ಯಾಘ್ರವೃಂದದೊಡನೆ ಈ ನದಿಯ ನೀರನ್ನು ಹೊಗಳುವರು. ವ್ಯಾಧರೂ ಸ್ತೋತ್ರ ಮಾಡುವರು.

ತಾವರೆಹೂವುಗಳ ಸುವಾಸನೆಯಿಂದ ತಂಪಾದ ಪಾನೀಯವನ್ನುಳ್ಳ ಜಲದಿಂದಲೂ ನಕ್ಷತ್ರಗಣದಿಂದೊಡಗೂಡಿದ ಆಕಾಶದಂತೆ ನಿರ್ಮಲ ಕಾಂತಿಯಿಂದಲೂ ಸತ್ಪುರುಷರಿಗೆ ಬೇಕಾದ ಇಷ್ಟಾರ್ಥವನ್ನು ಕೊಡುವ ಸ್ವಭಾವದಿಂದಲೂ ಕೂಡಿದ ಆ ಇರಾವತೀನದಿಯನ್ನು ನೋಡುತ್ತಾ ಸಂತೋಷಪರವಶನಾದ ಆ ಭೂಪತಿಯು (ನೃಪ ರಾಜನು) ನು ಹಿಮಾಲಯದ ತಪ್ಪಲನ್ನು ಸೇರಿದನು.

ಯುಸ್ಯಾಸ್ತೀರರುಹೈಃ ಕಾಶೈಃಪುಲ್ಲೈಶ್ಚಂದ್ರಾಂಶುಸನ್ನಿಭೈಃ ।
ರಾಜದ್ಭಿರ್ನಿವೃತಾಕಾಶೈ ರಮ್ಯೈಸ್ತತ್ಕ್ಷೀರ ಸಂಸ್ಥಿತೈಃ ॥ ೨೨ ॥

ಯಾ ಚ ಸದಾ ದಿವಿ ಸೇವ್ಯತಿ ದೇವೈ
ರ್ಯಾ ಚ ಸದಾ ಭುವಿ ಸೇವ್ಯತಿ ವಿಪ್ರೈಃ ।
ಯಾ ಚ ಸದಾ ಸಕಲಾಘವಿನಾಶಂ
ಭಕ್ತಜನಸ್ಯ ಕರೋತ್ಯಚಿರೇಣ ॥ ೨೩ ॥

ಯಾ ಚ ಗತಾ ಸರಿತಾಂ ಹಿ ಕದಂಬೈ-
ರ್ಯಾ ಚ ನುತಾ ಸತತಂ ಹಿ ಮಹೀನ್ಯೈಃ ।
ಯಾ ಚ ಯುತಾ ಶತತೋಯಕದಂಬೈ-
ರ್ಯಾ ಚ ಗತಾ ಸತತಂ ಹಿಮಹೀನ್ಯೈಃ ॥ ೨೪ ॥

ಯುಕ್ತಾಪಿ ಕೇಸರಿಗಣೈಃ ಕರಿವೃಂದಯಾತಾ ।
ಸನ್ನಾಗಯುಕ್ತಸಲಿಲಾಪಿ ಸುವರ್ಣಯುಕ್ತಾ

೨೨-೨೪ ಯಾವ ಇರಾವತೀ ನದಿಯು ದಡದಲ್ಲಿ ಹುಟ್ಟಿದ ಚಂದ್ರಕಿರಣ ದಂತೆ ಶೋಭಿಸುವ ಹುಲ್ಲುಗಳು ಕ್ಷೀರಸಮುದ್ರದಲ್ಲಿ ಹುಟ್ಟಿದ ಮನೋಹರವಾದ ಅಮೃತಕಿರಣದಂತೆ ಶೋಭಿಸುತ್ತಿರುವುವೋ, ಯಾವ ಆ ಇರಾವತಿಯು ದೇವತೆಗಳಿಂದ ಸದಾ ಸೇವಿತವಾಗಿರುವುದೋ ಮತ್ತು ಭೂದೇವತೆಗಳಿಂದ ಆ ದೇವನದಿಯು ಸರ್ವದಾ ಸೇವನೆಹೊಂದುತ್ತಿರುವುದೋ, ಯಾವ ಆ ಹೈಮವತಿಯು ಭಕ್ತಜನರ ಸಕಲ ಪಾಪ ಗಳನ್ನೂ ಪರಿಹರಿಸುತ್ತಿರುವುದೋ, ಮತ್ತನೇಕ ನದಿಗಳಿಂದ ಸೇರಿಕೊಂಡು ಅದಾವ ಇರಾವತಿಯು ಶೋಭಿಸುತ್ತಲಿರುವುದೋ, ಮತ್ತು ತೀರದಲ್ಲಿರುವ ವಿವಿಧ ವೃಕ್ಷಗಳಿಂದ ಶೋಭಿಸುತ್ತಿರುವುದೋ, ಮತ್ತದಾವ ಇರಾವತಿಯು ಯಾವಾಗಲೂ ಮಂಜುಗಳಿಂದ ತುಂಬಿರುವುದೋ, ಮತ್ತು ಯಾವ ಆ ಇರಾವತಿಯು ಸಿಂಹಗಳಿಂದ ಕೂಡಿದ್ದಾಗ್ಯೂ ಆನೆಗಳ ಗುಂಪಿನಿಂದ ನಡೆಯುತ್ತಿರುವುದೋ, ಒಳ್ಳೆಯ ನಾಗ (ಸರ್ಪ) ಗಳಿಂದ ಕೂಡಿದಾಗ್ಯೂ, ಸುವರ್ಣದಂತೆ ರಾರಾಜಿಪುದೋ ಮತ್ತು ಸೂರ್ಯನ ಕಠೋರ ಕಿರಣಗಳು ಸೋಕಿದಂತೆಲ್ಲಾ ಕರಗಿ ನೀರಾಗಿ ಮಹಾಪ್ರವಾಹವಾಗಿ ಹರಿಯುತ್ತಿರು

**ಸೂರ್ಯಾಂಶುತಾಪಪರಿವೃದ್ಧಿವಿವೃದ್ಧಿಶೀಲಾ**
**ಶೀತಾಂಶುತುಲ್ಯಯಶಸಾ ದದೃಶೇ ನೃಪೇಣ** ॥ ೨೫ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಇರಾವತೀ ವರ್ಣನೋ ನಾಮೈಕೋನ
ಪಂಚಾಶದುತ್ತರ ಶತತಮೋಽಧ್ಯಾಯಃ**

---

ವುದೋ, ಚಂದ್ರನಂತೆ ಪರಿಶುದ್ಧವಾದ ಯಶಸ್ಸಿನಿಂದ ಅದಾವನದಿಯು ಶೋಭಿಸುತ್ತಿರುವುದೋ ಆ ಇರಾವತಿಯನ್ನು ಮದ್ರರಾಜನು ನೋಡಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಇರಾವತಿವರ್ಣನೆಯೆಂಬ
ಹೆಸರಿನ ಒಂದು ನೂರನಲವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಾಶದುತ್ತರ ಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಆಲೋಕಯನ್ನದೀಂ ಪುಣ್ಯಾಂ ತತ್ಸಮೀರಹೃತಕ್ಲಮಃ ।
ಸ ಗಚ್ಛನ್ನೇವ ದದೃಶೇ ಹಿಮವಂತಂ ಮಹಾಗಿರಿಂ ॥ ೧ ॥

ಖಮುಲ್ಲಿಖದ್ಭಿರ್ಬಹುಭಿರ್ವೃತಂ ಶೃಂಗೈಃ ಸುಪಾಂಡುರೈಃ ।
ಪಕ್ಷಿಣಾಮಥಸಂಚಾರೈರ್ವಿನಾ ಸಿದ್ಧಗತಿಂ ಶುಭಾಂ ॥ ೨ ॥

ನದೀಪ್ರಪಾತಸಂಜಾತಮಹಾಶಬ್ದೈಃ ಸಮಂತತಃ ।
ಅಸಂಶ್ರುತಾನ್ಯಶಬ್ದಂತಂ ಶೀತತೋಯಂ ಮನೋರಮಂ ॥ ೩ ॥

### ಒಂದುನೂರ ಐವತ್ತನೆಯ ಅಧ್ಯಾಯವು.

೧ ಎಲೈ ವಜ್ರಮಹಾರಾಜನೆ! ಕೇಳು ಈರೀತಿಯಾಗಿ ಆ ಮುದ್ರರಾಜನು ಸೌಖ್ಯಕರವಾದ ಇರಾವತಿಯನ್ನು ನೋಡುತ್ತಾ ಆ ನದಿಯಮೇಲೆ ಬೀಸುತ್ತಿರುವ ಸುಗಂಧಪೂರಿತ ವಾಯುವಿನಿಂದ ಸಕಲ ಶ್ರಮವನ್ನೂ ಸರಿಹಾರಮಾಡಿಕೊಂಡು ಮುಂದೆ ಬರುತ್ತಿರುವ ಸಮಯದಲ್ಲಿ ಹಿಮವನ್ಮಹಾಪರ್ವತವನ್ನು ಕಂಡನು

೨-೪ ಹಿಮಾಲಯ ವರ್ಣನೆ.— ಶುಭ್ರವಾದ ಅನೇಕ ಶಿಖರಗಳಿಂದ ತುಂಬಿಕೊಂಡಿದ್ದ ಹಿಮಗಿರಿಯು ಶುಭಕರವಾದ ಸಿದ್ಧಮಾರ್ಗ ಸಂಚಾರಿಗಳಲ್ಲಿವಾದರೂ ಬಹು ಮೇಲೆ ಹಾರಾಡುವ, ನಾನಾವಿಧ ಪಕ್ಷಿಗಳ ಸಂಚಾರದಿಂದ ನೋಡಲು ಬಹು ಮನೋಹರವಾಗಿತ್ತು ಆ ಗಿರಿಯ ಅನೇಕ ಕಡೆಗಳಲ್ಲಿ ಹುಟ್ಟಿ ಹರಿಯುವ ಅನೇಕ ಝರಿ (ನದೀ ಪ್ರವಾಹ) ಗಳ ಮಹಾಶಬ್ದವು ಪುನಃ ಪುನಃ ಭೋರ್ಗರೆಯುತ್ತಾ ಶಬ್ದಮಾಡುತ್ತಿದ್ದುದರಿಂದ ಇತರ ಸದ್ದುಗಳೊಂದೂ

ದೇವದಾರುವನೈರ್ನೀಲೈಃ ಕೃತಾಧೋವಸನಂ ಶುಭಂ ।
ಮೇಘೋತ್ತರೀಯಂ ತಂ ಶೈಲಂ ದದೃಶೇ ಸ ನರಾಧಿಪಃ ॥ ೪ ॥

ಶ್ವೇತಮೇಘಕೃತೋಷ್ಣೀಷಂ ಚಂದ್ರಾರ್ಕಮುಕುಟಂ ಕ್ವಚಿತ್ ।
ಹಿಮಾನುಲಿಪ್ತಸರ್ವಾಂಗಂ ಕ್ವಚಿದ್ಧಾತುವಿಚಿತ್ರಿತಂ ॥ ೫ ॥

ಚಂದನೇನಾನುಲಿಪ್ತಾಂಗದತ್ತಪಂಚಾಂಗುಲಿಂ ಯಥಾ ।
ಶೀತಪ್ರದಂ ನಿದಾಘೇಽಪಿ ಶಿಲಾವಿಷಮಸಂಕಟಂ ॥ ೬ ॥

ಸಾಲಕ್ತಕೈರಪ್ಸರಸಾಂ ಮುದ್ರಿತಂ ಚರಣೈಃ ಕ್ವಚಿತ್ ।
ಕ್ವಚಿದಸ್ಪೃಷ್ಟಸೂರ್ಯಾಂಶುಂ ಕ್ವಚಿಚ್ಚ ತಮಸಾ ವೃತಂ ॥ ೭ ॥

ದರೀಮುಖೈಃ ಕ್ವಚಿದ್ಭೀಮೈಃ ಪಿಬಂತಮನಿಲಂ ಬಹು ।
ಕ್ವಚಿದ್ವಿದ್ಯಾಧರಗಣೈಃ ಕ್ರೀಡದ್ಭಿರುಪಶೋಭಿತಂ ॥ ೮ ॥

---

ಅಲ್ಲಿ ಕೇಳಿಬರುತ್ತಿರಲಿಲ್ಲ ಆ ಹಿಮಾಲಯದ ತಪ್ಪಲಿನಲ್ಲಿ ನಿಬಿಡವಾಗಿ ತುಂಬಿರುವ ದೇವದಾರುವನವನ್ನು ನೋಡಿದರೆ ಹಿಮವಂತನು ದೇವದಾರುವನವೆಂಬ ನೀಲಬಣ್ಣದ ಪಂಚೆಯನ್ನು ಉಟ್ಟಿರುವಂತೆಯೂ, ಮೇಲೆ ಪ್ರಸರಿಸುತ್ತಿರುವ ಮೋಡಗಳನ್ನು ನೋಡಿದರೆ ಮೇಘವೆಂಬ ವಸ್ತ್ರವನ್ನು ಹೊದ್ದಿರುವಂತೆಯೂ ಕಾಣುತ್ತಿತ್ತು.

೫-೧೫ ಆ ಹಿಮವತ್ಪರ್ವತವನ್ನು ಮತ್ತೂ ವರ್ಣಿಸುತ್ತಾರೆ—ಆ ಮಹಾಗಿರಿಯು ಬಹಳ ಎತ್ತರಕ್ಕೆ ಹಬ್ಬಿರುವುದನ್ನು ನೋಡಿದರೆ ಬಿಳೀಮೋಡಗಳೆಂಬ ರುಮಾಲನ್ನು ಸುತ್ತಿರುವಂತೆಯೂ, ಸೂರ್ಯಚಂದ್ರರೆಂಬ ಕಿರೀಟವನ್ನು ಧರಿಸಿರುವಂತೆಯೂ ಸಕಲ ಅವಯವಗಳಿಗೂ ಮಂಜನ್ನು ಬಳಿದುಕೊಂಡಿರುವಂತೆಯೂ, ಅಲ್ಲಲ್ಲಿ ಕಾಣುವ ಗೈರಿಕಾದಿ ಧಾತುಗಳಿಂದ ಚಿತ್ರವಿಚಿತ್ರವಾಗಿ ಅಲಂಕೃತವಾಗಿರುವಂತೆಯೂ, ಕೈಗಳಲ್ಲಿರುವ ಐದು ಬೆಟ್ಟುಗಳಿಂದಲೂ ಬಿಳೀಗಂಧವನ್ನು ತೆಗೆದು ತೆಗೆದು ಮೈಗೆಲ್ಲಾ ಲೇಪಿಸಿಕೊಂಡಂತಿರುವ ಹಿಮಗಂಧಗಳಿಂದಲೂ, ಬಹಳ ಬಿಸಿಲು ಗಾಲದಲ್ಲೂ ಸಹ ಛಳಿಯನ್ನುಂಟುಮಾಡುತ್ತಾ ವಿಷಮವಾದ ಶಿಲಾಸಮುದಾಯದಿಂದ ಕೂಡಿದುದಾಗಿಯೂ ಇರುವ ಆ ಪರ್ವತಪ್ರಾಂತವು, ಕಾಲಿಗೆಲ್ಲಾ ಅಲಕ್ತರಸವನ್ನು ಬಳಿದುಕೊಂಡಿರುವ ಅಪ್ಸರಸಿಯರ ಕಾಲಿನ ಗುರುತಿನಿಂದ ಮುದ್ರೆಯೊತ್ತಿದಂತೆಯೂ, ಕೆಲವು ಕಡೆ ಸೂರ್ಯರಶ್ಮಿಯೇ ಇಲ್ಲದೆ, ಕೆಲವು ಕಡೆ ಕತ್ತಲೆಯಾಗಿಯೇ ಇರುವ ಪ್ರದೇಶಗಳಿಂದಲೂ, ಅಲ್ಲಿಯೇ ಕಾಣುವ ಭಯಂಕರವಾದ ಗವಿಗಳಿಂದಲೂ, ಆ ಗವಿಗಳೊಳಗೆ ಹೊಕ್ಕು

ಉಪಗೀತಂ ತಥಾ ಪುಣ್ಯೈಃ ಕಿನ್ನರಾಣಾಂ ಗಣೈಃ ಕ್ವಚಿತ್ ।
ಆಪಾನಭೂಮೌ ಚ ಗಣೈರ್ಗಂಧರ್ವಾಪ್ಸರಸಾಂ ಕ್ವಚಿತ್ ॥ ೯ ॥

ಗೀತಾದಿಭಿಃ ಸಮಾಕೀರ್ಣಂ ಗಂಧರ್ವಿಣಾಂ ಮನೋಹರಂ ।
ನಿರುದ್ಧಪವನೈರ್ದೇಶೈರ್ನೀಲಶಾದ್ವಲಮಂಡಿತೈಃ ॥ ೧೦ ॥

ಕ್ವಚಿಚ್ಚ ಕುಸುಮೈರ್ಯುಕ್ತಂ ಚಾತ್ಯಂತರುಚಿರೈಃ ಶುಭಂ ।
ತಪಸ್ವಿಶರಣಂ ಸ್ಥಲಂ ಕಾಮಿನಾಮಪಿ ದುರ್ಲಭಂ ॥ ೧೧ ॥

ಮೃಗಯೂಥಾನುಚರಿತಂ ದಂತಭಿನ್ನಮಹಾದ್ರುಮಂ ।
ಯತ್ರ ಸಿಂಹನಿನಾದೇನ ತ್ರಸ್ತಾನಾಂ ಭೈರವಂ ರವಂ ॥ ೧೨ ॥

ಶ್ರುತ್ವೋತ್ಕ್ಷಿಪ್ಯತಿ ವಿಭ್ರಾಂತಂ ಗಜಾನಾಮಾಕುಲಂಕುಲಂ ।
ತಪಶ್ಚ ತಾಪಸೈರ್ಯಸ್ಯ ಕೂಲದೇಶೇಷ್ವಲಂಕೃತಂ ॥ ೧೩ ॥

ಈ ಜಗ ಒಂದು ಸದ್ದು ಮಾಡುತ್ತಿರುವ ಮಾಯುಸಿನಾದದಿಂದಲೂ ಕೂಡಿ ಶೋಭಿಸುತ್ತಿತ್ತು

ಆ ಹಿಮಾಲಯದಲ್ಲಿ ಅಲ್ಲಲ್ಲಿಯೇ ವಿದ್ಯಾಧರರು ಕ್ರೀಡಿಸುತ್ತಿದ್ದರು ಕಿನ್ನರರ ಗುಂಪು ಅಲ್ಲಲ್ಲಿಯೇ ಗುಂಪು ಕೂಡಿ ಹಾಡುವ ಗೀತಧ್ವನಿಯು ಶ್ರುತಿ ಮನೋಹರವಾಗಿತ್ತು. ಗಂಧರ್ವರೂ ಅಪ್ಸರಸ್ತ್ರೀಯರೂ ಸಹ ಜತೆ ಜತೆಯಾಗಿ ಸೇರಿ ಅಲ್ಲಿ ವಿಹರಿಸುತ್ತಿದ್ದರು ಮತ್ತು ಅಪ್ಸರಸ್ತ್ರೀಯರು ಮನೋಹರವಾದ ಗೀತವನ್ನು ಅಲ್ಲಲ್ಲಿಯೇ ಹಾಡುತ್ತಿದ್ದರು

ಗಾಳಿಯು ಬೀಸುವುದಕ್ಕೇ ಅವಕಾಶವಿಲ್ಲದಂತಹ ಕೆಲವು ಪ್ರದೇಶಗಳು ಹಚ್ಚಗಿರುವ ಹುಲ್ಲಿನಿಂದ ಮನೋಹರವಾಗಿದ್ದುವು ಕೆಲವು ಕಡೆ ಮನೋಹರವಾದ ಸುವಾಸನಾಪೂರಿತವಾದ ಹೂಗಳು ಗಿಡಗಳಲ್ಲಿ ಕಾಣುತ್ತಿದ್ದುವು ಆ ಹಿಮಗಿರಿಯು ತಪಸ್ವಿಗಳ ಆವಾಸಕ್ಕೆ ಯೋಗ್ಯವಾಗಿದ್ದಿತೇ ಹೊರತು ಕಾಮುಕರಿಗೆ ಇದು ತೀರಾ ದುರ್ಲಭವಾದುದಾಗಿತ್ತು ಈ ಗಿರಿಯಲ್ಲಿ ಅನೇಕ ಮೃಗಗಳ ಗುಂಪು ಸಂಚರಿಸುತಿದ್ದುವು ದೊಡ್ಡ ದೊಡ್ಡ ಆನೆಗಳು ದೊಡ್ಡ ದೊಡ್ಡ ಮರಗಳನ್ನು ಕೆಳಕ್ಕೆ ಉರುಳಿಸಿಬಿಟ್ಟಿದ್ದುವು ಎಲ್ಲಿಯಾದರೂ ಸಿಂಹಗಳ ಧ್ವನಿ ಕೇಳಿಸಿತೆಂದರೆ ಅವು ಗಾಬರಿಯಾಗಿ ದಿಕ್ಕು ದಿಕ್ಕಿಗೆ ಚದರಿ ಓಡುತ್ತಲಿರುವ ಆನೆಗಳನ್ನು ಅಲ್ಲಿ ನೋಡಬಹುದಾಗಿತ್ತು.

ರತ್ನೈರ್ಯಸ್ಯ ತೈಃ ಸಮುತ್ಪನ್ನೈಸ್ತ್ರೈಲೋಕ್ಯಂ ಚಾಪ್ಯಲಂಕೃತಂ ।
ಅಹೀನಶರಣಂ ನಿತ್ಯಮಹೀನಜನಸೇವಿತಂ ॥ ೧೪ ॥

ಅಹೀನಃ ಪಶ್ಯತಿ ಗಿರಿಮಹೀನಂ ರತ್ನಸಂಪದಂ ।
ಅಲ್ಪೇನ ತಪಸಾ ಯತ್ರ ಸಿದ್ಧಿಃ ಪ್ರಾಪ್ಯೇತ ತಾಪಸೈಃ ॥ ೧೫ ॥

ಯಶ್ಚ ದರ್ಶನ ಮಾತ್ರೇಣ ಸರ್ವಕಲ್ಮಷನಾಶನಃ ।
ಮಹಾಪ್ರಪಾತಸಂಪಾತಪ್ರಭೀತಖಗಬಂಧುಭಿಃ ॥ ೧೬ ॥

ವಾಯುನೀತಸದಾವೃಷ್ಟಿಃ ಕೃತದೇಶಂ ಕ್ವಚಿತ್ಕ್ವಚಿತ್ ।
ಅಲಬ್ಧಜಲದೈಃ ಶೃಂಗೈಃ ಕ್ವಚಿಚ್ಚಾತಿಸಮುಚ್ಛ್ರಿತೈಃ ॥ ೧೭ ॥

ನಿತ್ಯಾರ್ಕತಾಪವಿಷಮೈರಗಮ್ಯೈರ್ಮನಸಾ ಯುತಂ ।
ದೇವದಾರುಮಹಾವೃಕ್ಷಪುಂಜಶಾಖಾನಿರಂತರೈಃ ॥ ೧೮ ॥

ಅಲ್ಲಲ್ಲಿ ಕಾಣುವ ಮಾನಸಸರೋವರವಂತಹ ಸರಸ್ಸುಗಳ ತೀರದಲ್ಲಿ ತಪಸ್ಸುಮಾಡುತ್ತಾ ಕುಳಿತಿರುವ ತಪಸ್ವಿವೃಂದವು ಗೋಚರವಾಗುತ್ತಲಿದ್ದಿತು. ಅಲ್ಲಲ್ಲಿ ಬಿದ್ದಿರುವ ರತ್ನರಾಶಿಗಳಿಂದ ಮೂರು ಲೋಕವೂ ಅಲಂಕೃತವಾದಂತೆ ಕಾಣಬರುತ್ತಲಿದ್ದಿತು. ಆ ಪರ್ವತದಲ್ಲಿ ಹೀನ ದೀನ ಜನರಾರೂ ಪ್ರವೇಶಮಾಡುತ್ತಲಿರಲಿಲ್ಲ. ಮಹಾತ್ಮರಾದ ದೊಡ್ಡವರೇ ಇಲ್ಲಿ ಬರುತ್ತಿದ್ದರು. ಅವರಿಗೆಲ್ಲಾ ಇದು ಶರಣಪ್ರದೇಶವಾಗಿತ್ತು. ಮಹನೀಯರೇ ಇಲ್ಲಿ ಬಂದು ವಾಸಮಾಡುವರು. ಈ ಗಿರಿಯಲ್ಲಿ ಹೀನಜನರ ಸುಳಿವೇ ಇಲ್ಲದ ಮಹಾ ಮಹಾ ರತ್ನಗಳಿಗೆ ಆಶ್ರಯಸ್ಥಾನವಾಗಿರುವುದರಿಂದ ಈ ಗಿರಿಯು ಅಷ್ಟೈಶ್ವರ್ಯ ಭರಿತನಾದ ಮಹಾತ್ಮನಂತೆ ಶೋಭಿಸುತ್ತಿತ್ತು. ಇಂತಹ ಅತಿ ಪವಿತ್ರವೂ ಅತ್ಯುತ್ತಮವೂ ಆದ ಪರ್ವತದಲ್ಲಿ ಸ್ವಲ್ಪ ಕಾಲ ತಪಸ್ಸುಮಾಡಿದಾಗ್ಯೂ ಸಿದ್ಧಿಯನ್ನು ನಿರಾಯಾಸವಾಗಿ ಹೊಂದಬಹುದು.

೧೬-೨೦. ಹಿಮವತ್ಪರ್ವತವು ದರ್ಶನ ಮಾತ್ರದಿಂದಲೇ ಸಕಲ ಪಾಪವನ್ನೂ ಪರಿಹಾರಮಾಡತಕ್ಕ ಶಕ್ತಿಯುಳ್ಳದು, ಎಂದೂ ಗಾಳಿಯು ಮುಖವನ್ನೇ ನೋಡದ ಆಳವಾದ ಕಮರಿಗಳನ್ನು ನೋಡಿ ಹೆದರಿಕೊಂಡು ಕೆಳಕ್ಕೆ ಬೀಳುವೆನೆಂಬ ಶಂಕೆಯಿಂದ ಭರ್ರನೆ ಆಕಾಶಕ್ಕೆ ಹಾರುತ್ತಿರುವ, ಹಕ್ಕಿಗಳ ಗುಂಪಿನಿಂದ ಉತ್ಪತ್ತಿಯಾದ ಗಾಳಿಗಳಿಂ ಮೊಡಗೂಡಿದ ಮೋಡಗಳಿಂದ ಸರ್ವದಾ ವೃಷ್ಟಿಯನ್ನುಂಟುಮಾಡುತ್ತಿರುವ ಶಿಖರ

ಸಮಸ್ತಭುವನಾಕಾರೈಃ ಪ್ರದೇಶೈರುಪಶೋಭಿತಂ ।
ಹಿಮಾಚ್ಛನ್ನಮಹಾಶೃಂಗಂ ಪ್ರಪಾತಮಿತನಿರ್ಝರಂ ।
ಶಬ್ದಲಭ್ಯಾಂಬುವಿಷಮಂ ಹಿಮಸಂರುದ್ಧಕಂದರಂ ॥ ೧೯ ॥

ದೃಷ್ಟ್ವೈವ ತಾಂ ಚಾರುನಿತಂಬಭೂಮಿಂ
ಮಹಾನುಭಾವಃ ಸ ಮಹೀಂದ್ರನಾಥಃ ।
ಬಭ್ರಾಮ ತತ್ರೈವ ಮುದಾ ಸಮೇತಃ
ಸ್ಥಾನಂ ತತಃ ಕಿಂಚಿದಥಾಸಸಾದ ॥ ೨೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಹಿಮವದ್ವರ್ಣನೋ ನಾಮ ಪಂಚಾಶದುತ್ತರ
ಶತತಮೋಽಧ್ಯಾಯಃ

---

ಪ್ರದೇಶಗಳಿಂದಲೂ, ಅಲ್ಲಲ್ಲಿ ಮಳೆಯೇ ಆಗದೆ ನೆಲವೇ ನನೆಯದೆ ಇರುವ ಎತ್ತರವಾದ ಶಿಖರಪ್ರದೇಶಗಳಿಂದಲೂ, ಪ್ರತಿದಿನವೂ ಸೂರ್ಯನ ಬಿಸಿಲಿನ ತಾಪದಿಂದ ವಿಷಮವಾದ ಮನಸ್ಸಿನಿಂದ ಊಹಿಸಲೂ ಅಶಕ್ಯವಾದ ಅಗಮ್ಯಪ್ರದೇಶಗಳಿಂದಲೂ, ಬಿಸಿಲಿನ ಮುಖವನ್ನೇ ಕಾಣದ ದೇವದಾರುವೃಕ್ಷಗಳಿಂದ ಮರೆಯಾದ ಗಹನಾರಣ್ಯಗಳಿಂದಲೂ, ಸಮಸ್ತ ಲೋಕದ ಆಕಾರವನ್ನೂ ಧರಿಸಿರುವ ಪ್ರದೇಶಗಳಿಂದಲೂ, ಹಿಮದಿಂದ ಮುಚ್ಚಲ್ಪಟ್ಟ ಮಹಾ ಶಿಖರಗಳಿಂದಲೂ ಅಷ್ಟೇ ಆಳವುಳ್ಳ ಪಾತಾಳಸದೃಶವಾದ ಕಮರಿಗಳೊಳಗೆ ಬೀಳುತ್ತಲಿರುವ ಝರಿಗಳಿಂದಲೂ ಶಬ್ದದಿಂದಲೇ ಹೊಂದಲ್ಪಡಬಹುದಾದ ನೀರಿನಿಂದ ವಿಷಮವಾದುದಾಗಿಯೂ ಹಿಮದಗಡ್ಡೆಗಳಿಂದ ಮುಚ್ಚಿಹೋದ ಕಂದರ ಪ್ರದೇಶಗಳಿಂದಲೂ ಕೂಡಿದ ಆ ಮನೋಹರವಾದ ಹಿಮಾಲಯ ಪರ್ವತವನ್ನು ಆ ಮಹಾನುಭಾವನಾದ ಮದ್ರರಾಜನು ನೋಡಿದ ಮಾತ್ರದಿಂದಲೇ ಸಂತೋಷಪಟ್ಟು ಅಲ್ಲಲ್ಲಿಯೇ ಸುತ್ತಾಡುತ್ತಾ ಸುತ್ತಾಡುತ್ತಾ ಅಲ್ಲೊಂದು ರಮ್ಯಪ್ರದೇಶದಲ್ಲಿ ಕುಳಿತುಕೊಂಡನು

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಹಿಮವತ್ಪರ್ವತ ವರ್ಣನವೆಂಬ
ಹೆಸರಿನ ಒಂದುನೂರ ಐವತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕಪಂಚಾಶದುತ್ತರ ಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ತಸ್ಯೈವ ಪರ್ವತೇಂದ್ರಸ್ಯ ಪ್ರದೇಶಂ ಸುಮನೋಹರಂ ।
ಅಗಮ್ಯಂ ಮಾನುಷೈರನ್ಯೈರ್ದೈವಯೋಗಾದುಪಾಗತಃ ॥ ೧ ॥

ಇರಾವತೀ ಸರಿಚ್ಛ್ರೇಷ್ಠಾ ಯಸ್ಮಾದ್ದೇಶಾ ದ್ವಿನಿರ್ಗತಾ ।
ಮೇಘಶ್ಯಾಮಂ ಚ ತಂ ದೇಶಂ ದ್ರುಮಖಂಡೈರನೇಕಶಃ ॥ ೨ ॥

ಸಾಲೈಸ್ತಾಲೈಸ್ತಮಾಲೈಶ್ಚ ಕರ್ಣಿಕಾರೈಃ ಸಶಾಲ್ಮಲೈಃ ।
ನ್ಯಗ್ರೋಧೈಶ್ಚ ತಥಾಽಶ್ವತ್ಥೈಃ ಶಿರೀಷೈಃ ಶಿಂಶುಪಾದ್ರುಮೈಃ ॥ ೩ ॥

### ಒಂದು ನೂರ ಐವತ್ತೊಂದನೆಯ ಅಧ್ಯಾಯವು

೧ ಮಾರ್ಕಂಡೇಯನು ಹೇಳುತ್ತಾನೆ —ಇನ್ನಾವ ಮನುಷ್ಯಮಾತ್ರನಿಂದಲೂ ಪ್ರವೇಶಿಸಲಸದಳವಾದ ಆ ಹಿಮವತ್ಪರ್ವತದ ಆ ಮನೋಹರವಾದ ಪ್ರದೇಶವನ್ನು ಮದ್ರರಾಜನು ದೈವಯೋಗದಿಂದ ಪ್ರವೇಶಿಸಿದನೇ ಹೊರತು ಮಾನುಷ ಪ್ರಯತ್ನವು ಅಲ್ಲಿ ಏನೇನೂ ಸಾಗುವ ಹಾಗಿಲ್ಲ

೨ ಇರಾವತೀನದಿಯು ಹಿಮಾಲಯದ ಯಾವ ಭಾಗದಲ್ಲಿ ಉತ್ಪನ್ನಯಾಗುವುದೋ ಅಂತಹ ನಾನಾವಿಧವೃಕ್ಷಗಳಿಂದ ವ್ಯಾಪ್ತವಾದ, ಮೇಘದಂತೆ ಶ್ಯಾಮಲವರ್ಣವುಳ್ಳ ಪ್ರದೇಶದಲ್ಲಿ ಮದ್ರರಾಜನು ಮಂಡಿಸಿದನು.

೩-೨೩ ಟಿಪ್ಪಣಿ —ಈ ಅಧ್ಯಾಯಕ್ಕೆ ಋಷ್ಯಾಶ್ರಮ ವರ್ಣನೆಯೆಂಬ ಹೆಸರನ್ನು ಕೊಟ್ಟಿದ್ದಾರೆ. ಋಷಿಗಳು ಕಾಡುಗಳಲ್ಲಿ ಪರ್ಣಶಾಲೆಗಳನ್ನು ಕಟ್ಟಿಕೊಂಡು

ಶ್ಲೇಷ್ಮಾತಕೈರಾಮಲಕೈರ್ಹರೀತಕವಿಭೀತಕೈಃ ।
ರಸ್ಯೈಶ್ಚಂದನವೃಕ್ಷೈಶ್ಚ ಕಪಿತ್ಥೈ ರಕ್ತಚಂದನೈಃ ॥ ೪ ॥

ವಟಮಾಹಿಂಸಕಾಕ್ಷೋಟೈರಶ್ವಕರ್ಣೈಸ್ತಥಾರ್ಜುನೈಃ ।
ಹಸ್ತಿಕರ್ಣೈಃ ಸಪನಸೈಃ ಕೋವಿದಾರೈಃ ಸುಪುಷ್ಪಿತೈಃ ॥ ೫ ॥

ದೇವದಾರುಮಹಾವೃಕ್ಷೈಸ್ತಥಾ ಕಾಲೀಯಕದ್ರುಮೈಃ ।
ಪದ್ಮಕೈಶ್ಚಂದನೈರ್ಬಿಲ್ವೈಃ ಕುಟಜೈರ್ಹರಿಚಂದನೈಃ ॥ ೬ ॥

ಪ್ರಾಚೀನಾಗುರುಕೈಶ್ಚೈವ ಸ್ಥೌಣೇಯೈಃ ಸಮುಶಂಡಿಕೈಃ ।
ಖರ್ಜೂರೈರ್ನಾರಿಕೇಲೈಶ್ಚ ಪ್ರಿಯಾಲಾಮ್ರಾತಕೇಂಗುದೈಃ ॥ ೭ ॥

ನೀರುಮಾನ್ಯೈರ್ವಟೈರ್ಭವ್ಯೈಃ ಕಾಶ್ಮೀರ್ಯೈಃ ಫಲಿಭಿಸ್ತಥಾ ।
ಜಾತೀಫಲೈಃ ಪೂಗಫಲೈಃ ಕಟ್ಫಲೈರ್ಲವಲೀಫಲೈಃ ॥ ೮ ॥

ತಪಸ್ಸು ಮಾಡುತ್ತಾರೆಂದು ಎಲ್ಲರೂ ಕೇಳಿರುವರೇ ಹೊರತು ಈಗಿನ ಕಾಲದಲ್ಲಿ ಯಾರೂ ಅಂತಹ ಸನ್ನಿವೇಶವನ್ನು ನೋಡಿಲ್ಲ ಸಮೀಪದಲ್ಲಿರುವ ನಗರ ಗ್ರಾಮಗಳಲ್ಲಿಯೂ ದೊಡ್ಡ ದೊಡ್ಡ ಊರುಗಳಲ್ಲಿಯೂ ಇರುವ ಕೆಲವು ಕೆಲವು ಸಾಧುಗಳು ಕಟ್ಟಿಕೊಂಡಿರುವ ಆಶ್ರಮವೆಂಬ ಹೆಸರಿನ ಸೌಧಗಳನ್ನೂ, ಮಠಗಳನ್ನೂ, ಭವನಗಳನ್ನೂ ನಾಗರಿಕರು ನೋಡಿದಾರೆ ಉದಾಹರಣೆ--ರಾಮಕೃಷ್ಣಾಶ್ರಮ, ಕಬೀರಾಶ್ರಮ, ವಿವೇಕಾನಂದಾಶ್ರಮ, ಶ್ರದ್ಧಾನಂದಭವನ, ಇತ್ಯಾದಿ ಇತ್ಯಾದಿ ಈ ಸ್ಥಳಗಳೆಲ್ಲಾ ತಪಸ್ಸಿಗೂ, ಧ್ಯಾನಕ್ಕೂ, ಭಜನೆಗಳಿಗೂ, ಉಪನ್ಯಾಸಗಳಿಗೂ ವೇದಾಂತ ವಿಚಾರಕ್ಕೂ ಸಹ ಮೀಸಲಾಗಿಡಲ್ಪಟ್ಟಿವೆ ಋಷಿಗಳು ನಗರವಾಸಕ್ಕೆ ಮನಸೋಲದ ಗೊಂಡಾರಣ್ಯಗಳಲ್ಲಿ, ಪರ್ವತದ ತಪ್ಪಲಲ್ಲಿ, ಗಿರಿನದಿಗಳ ವನನದಿಗಳ ಸಮೀಪದಲ್ಲಿ, ಎಲೆಮನೆಗಳನ್ನು ವಿರಚಿಸಿಕೊಂಡು ಅಲ್ಲಿ ವಾಸಮಾಡುತ್ತಿದ್ದರು ಈಗಲೂ ನಾವು ಎಲ್ಲಿಯಾದರೂ ಊರಿನ ಹೊರಗಿನ ವನ ಪ್ರದೇಶಗಳಲ್ಲಿ ಇಂತಹ ಸನ್ನಿವೇಶಗಳನ್ನು ಅಪರೂಪವಾಗಿ ನೋಡಬಹುದು

> ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
> ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥
> ಯೋ ದೇವೋ ಗರ್ಭಗತಸ್ಯಾಪಿ ವೃತ್ತಿಂ ಕಲ್ಪಿತವಾನ್ ಪ್ರಭುಃ ।
> ಶೇಷವೃತ್ತಿವಿಧಾನಾಯ ಸುಪ್ತಃ ಕಿಮಥವಾ ಮೃತಃ ॥

ಮಂದಾರೈಃ ಕೋವಿದಾರೈಶ್ಚ ಕಿಂಶುಕೈಃ ಕುಸುಮಾಂಬುಭಿಃ ।
ಪಲಾಶೈಃ ಶಮಿಸೂಲ್ಲಾಸೈರ್ವೇತಸೈರಾಮ್ಲವೇತಸೈಃ ॥ ೯ ॥

ರಕ್ತಾತಿರಂಗನಾರಿಗ್ಯೈರಿಂಗುದ್ಯೈಃ ಸಪಿಯಂಗುಭಿಃ ।
ರಕ್ತಾಶೋಕೈಸ್ತಥಾಽಶೋಕೈರಾರುಕೈಃ ಸಜಿರಾರುಕೈಃ ॥ ೧೦ ॥

ಮುಚುಕುಂದೈಸ್ತಥಾ ಕುಂದೈರಾಟಿರೂಷಪರೂಷಕೈಃ ।
ಕಿಂಕಿರಾತೈಃ ಕಿರಾತೈಶ್ಚ ಕೇತಕೈಶ್ಚ ಸಕೇತಕೈಃ ॥ ೧೧ ॥

ಶೋಭಾಂಜನೈರಂಜನೈಶ್ಚ ಮುಕೂಲಕನಿಕೋಚಕೈಃ ।
ಸುಪೂರ್ಣಚಾರುವಸನೈರ್ದ್ರುಮೈಃ ಶ್ರೇಷ್ಠೈಸ್ತಥಾಸನೈಃ ॥ ೧೨ ॥

ಮನ್ಮಥಸ್ಯ ಶರಾಕಾರೈಸ್ಸಹಕಾರೈರ್ಮನೋಹರೈಃ ।
ಪೀತಯೂಥಿಕಯಾ ರಾಜಂಚ್ಛ್ವೇತಯೂಥಿಕಯಾತಥಾ ॥ ೧೩ ॥

ಇದರ ಅರ್ಥವೇನೆಂದರ -- ಸರ್ವಲೋಕಪರಿಪಾಲಕನಾದ ಭಗವಂತನ ಸಕಲ ಜನರನ್ನೂ ಕುರಿತು ಎಲೈ ಮನುಷ್ಯರಿರಾ ! ಯಾರು ಇನ್ನಾವ ಚಿಂತೆಯನ್ನೂ ಹಚ್ಚಿಕೊಳ್ಳದೆ ನನ್ನಲ್ಲಿ (ದೇವರಲ್ಲಿ) ನಂಬಿಕೆಯಿಟ್ಟು ನನ್ನನ್ನೇ ನಂಬಿಕೊಂಡು ಅನನ್ಯ ಭಕ್ತಿಯಿಂದ ಧ್ಯಾನಿಸುತ್ತಾ ನನ್ನನ್ನು ಉಪಾಸನೆ ಮಾಡುವರೋ, ನಿತ್ಯವೂ ನನ್ನ ಮೇಲೆ ಭಾರಹಾಕಿರುವ ಅಂಥವರ ಸಕಲ ಯೋಗಕ್ಷೇಮವನ್ನೂ ನಾನು ವಹಿಸಿಕೊಳ್ಳುತ್ತೇನೆಂದು ಹೇಳಿರುತ್ತಾನೆ ಭಗವದ್ಗೀತೆಯೂ ಸಕಲ ಶ್ರುತಿ ಸ್ಮೃತಿ ಪುರಾಣೇತಿಹಾಸಗಳೂ ಇದನ್ನೇ ಸಾರಿ ಸಾರಿ ಹೇಳುತ್ತಲಿವೆ.

ಎರಡನೆಯ ಶ್ಲೋಕದ ಅರ್ಥವೇನೆಂದರೆ —ಆಪಾದ ಪರಮಾತ್ಮನು ನಾನು ತಾಯಿಯ ಗರ್ಭದಲ್ಲಿದ್ದಾಗಲೂ ನನಗೆ ಅನ್ನವನ್ನು ಕಲ್ಪಿಸಿ ಕಾಪಾಡಿ ಭೂಲೋಕಕ್ಕೆ ತಂದನೋ ಅಂತಹ ಮಹಾನುಭಾವನು, ನಾನು ಪ್ರಪಂಚದಲ್ಲಿ ಬದುಕಿ ಬಾಳುವಾಗ ನನ್ನ ಜೀವನವನ್ನು ಕಲ್ಪಿಸದೆ ಸುಮ್ಮನೆ ಮಲಗಿರುತ್ತಾನೆಯೋ ? ಅಥವಾ ಸತ್ತವರಂತೆ ಸುಮ್ಮನಿರುತ್ತಾನೆಯೋ ? ಕಾಡಿನಲ್ಲಿ ಬಂಡೆಯೊಳಗಿರುವ ಕಪ್ಪೆಗೆ ಅನ್ನನೀರನ್ನು ಕೊಟ್ಟು ಕಾಪಾಡುವ ಭಗವಂತನು, ಎಂಭತ್ತನಾಲ್ಕು ಲಕ್ಷ ಅಗಣಿತ ಜೀವರಾಶಿಗಳನ್ನು ಕಾಪಾಡುವ ಪರಮಾತ್ಮನು, ಬುದ್ಧಿಜೀವಿಗಳಾದ ಮನುಷ್ಯರನ್ನು ಅವರವರ ಪ್ರಯತ್ನ ವಿಶೇಷದಿಂದ ಮಹದೈಶ್ವರ್ಯವಂತರನ್ನಾಗಿ ಮಾಡಲು ಆಡ್ಡಿಯೋಸಿದ ?

ಜಾತ್ಯಾ ಚಂಪಕಜಾತ್ಯಾ ಚ ತುಂಬುರ್ಯೈಶ್ಚಾಪ್ಯುದುಂಬುರೈಃ ।
ಮಾಷ್ಯೈರ್ಭಲ್ಲಾತೈಸ್ಸಲಕುಚೈಸ್ತಿಲಂಬಲಕುಶಂಬಲೈಃ ॥ ೧೪ ॥

ತಥಾ ಸುಪುಷ್ಪಾಪರಣ್ಯೈಪರಣ್ಯೈಃ ಕಾಮಿವಲ್ಲಭೈಃ ।
ಪುಷ್ಪಾಕುಲ್ಯೈಶ್ಚ ವಕುಲೈಃ ಪಾರಿಭದ್ರಕಭದ್ರಕೈಃ ॥ ೧೫ ॥

ಧಾರಾಕದಂಬೈಃ ಕುಟಜೈಃ ಕದಂಬೈರ್ಗಿರಿಕೂಟಜೈಃ ।
ಆಕ್ರಾಂತಸರ್ಪಕಕುಭೈಃ ಕಕುಭೈಃ ಕಮನೀಯಕೈಃ ॥ ೧೬ ॥

ಕರ್ಕಂಧುಬದರ್ಯೈರ್ನಿಂಬೈಃ ದೀಪ್ತೈರಿವ ಮಹೋಜ್ವಲೈಃ ।
ರಕ್ತೈಃ ಪಾಲೀವತೈಃ ಶ್ವೇತೈರ್ದಾಡಿಮ್ಯೈಶ್ಚಾಮ್ರಕದ್ರುಮೈಃ ॥ ೧೭ ॥

ಪ್ರತಾನೈಃ ಪಿಪ್ಪಲೀನಾಂ ಚ ನಾಗವಲ್ಲ್ಯಾಶ್ಚ ಭಾಗಶಃ ।
ಮರೀಚಸ್ಯ ತಥಾ ಗುಲ್ಮೈರ್ನವಮಲ್ಲಿಕಯಾ ತಥಾ ॥ ೧೮ ॥

ಈ ಪ್ರಕಾರದಲ್ಲಿ ಈ ಟಿಪ್ಪಣಿಯನ್ನು ನಾವು ಬರೆಯಲು **ಕಾರಣವೇನೆಂದರೆ**— ಕಾಡಿನಲ್ಲಿ ಮಹರ್ಷಿಗಳು ವಾಸಮಾಡುವಾಗ ನಾನಾವಿಧ ಫಲವೃಕ್ಷಗಳೂ, ಗೆಡ್ಡೆಗೆಣಸುಗಳೂ ಔಷಧೋಪಯೋಗೀ ಗಿಡ ಮೂಲಿಕೆಗಳೂ, ನಾನಾವಿಧ (ಶಾಕ) ತರಕಾರಿಗಳೂ ಸಹ ಭಗವಂತನಿಂದ ಅವರಿಗೆ ನಿಜವಾದ ಅಕೃತ್ರಿಮವಾದ ಪ್ರೇಮದಿಂದ ಅನುಗ್ರಹಿಸಲ್ಪಟ್ಟಿವೆ ಕಾಡನ್ನು ಉಳುವವರಿಲ್ಲ, ಬಿತ್ತುವವರಿಲ್ಲ, ಬೆಳೆಯುವವರಿಲ್ಲ, ಕೊಯ್ಯುವವರಿಲ್ಲ, ರಕ್ಷೆಮಾಡುವವರಿಲ್ಲ ಭಗವಂತನು ಅನಂತಾನಂತವಾದ ಆಹಾರವಸ್ತುಗಳನ್ನು ಸಕಲ ಪ್ರಾಣಿಗಳಿಗೂ ಮೊದಲು ಕಲ್ಪಿಸಿಯೇ ಬಳಿಕ ಪ್ರಾಣಿಗಳನ್ನೂ ಸೃಷ್ಟಿಸಿರುವನೆಂದು ಸರ್ವರೂ ತಿಳಿದು, ತಾವು ದೊಡ್ಡವರೆಂಬ ದುರಭಿಮಾನವನ್ನು ಬಿಟ್ಟು ಬಿಡಬೇಕು ತೇನ ವಿನಾ ತೃಣಮಪಿ ನ ಚಲತಿ—ಭಗವಂತನ ಆಜ್ಞೆಯಿಲ್ಲದೆ ಒಂದು ಹುಲ್ಲುಕಡ್ಡಿಯೂ ಅಲ್ಲಾಡುವುದಿಲ್ಲ ಈ ತತ್ವವನ್ನೆಲ್ಲರೂ ಮನನಮಾಡಲಿ

ಕಾಡಿನಲ್ಲಿ ತಾನೇತಾನಾಗಿ ಹುಟ್ಟಿ ಬೆಳೆದಿರುವ ಮರಗಳನ್ನೂ, ಗಿಡಗಳನ್ನೂ, ಹಣ್ಣು ಹೂಗಳ ತರಕಾರಿಗಳ ಗಿಡಗಳನ್ನೂ, ಪಕ್ಷಿಮೃಗಾದಿಗಳನ್ನೂ ವರ್ಣಿಸಿ ವ್ಯಾಸರು ಈ ಅಧ್ಯಾಯವನ್ನು ಬರೆದಿರುವರು ಕಗ್ಗಾಡಿನಲ್ಲಿ ಬೆಳೆದಿರುವ ಗಿಡಗಳನ್ನು ನೋಡಿದವರಿಲ್ಲ, ಬೆಳೆಸಿದವರಿಲ್ಲ, ಭಗವನ್ನಿರ್ಮಿತವಾದ ಸಕಲ ವಸ್ತುಗಳನ್ನೂ ಅರಿತವರಿಲ್ಲ ಆದರೆ ಈಗ ಪ್ರಸಕ್ತವಾಗಿರುವ ಅಧ್ಯಾಯದಲ್ಲಿ ಅಮರದಲ್ಲೂ ಇತರ ಕೋಶಗಳಲ್ಲೂ

**ಮೃದ್ವೀಕಾಮಂಡಲೈರ್ಮುಖ್ಯೈ ರತಿಮುಕ್ತಕಮಂಡಲೈಃ ।**
**ತ್ರಪುಸೈರ್ವಾರುಕಾನಾಂ ಚ ಪ್ರತಾನೈಃ ಸಫಲೈಃ ಶುಭೈಃ ॥ ೧೯ ॥**

**ಕೂಷ್ಮಾಂಡಾನಾಂ ಪ್ರತಾನೈಶ್ಚ ಅಲಾಬೂನಾಂ ತಥಾ ಕ್ವಚಿತ್ ।**
**ಚಿರ್ಭಟಸ್ಯ ಪ್ರತಾನೈಶ್ಚ ಪಟೋಲೈಃ ಕಾರವೇಲ್ಲಕೈಃ ॥ ೨೦ ॥**

**ಕರ್ಕೋಟಕೈಃ ಪ್ರತಾನೈಶ್ಚ ವಾತಾರ್ಕೈರ್ಬೃಹತೀಫಲೈಃ ।**
**ಕಲ್ಹಾರೈರ್ಮೂಲಕೈರ್ಮುಖ್ಯೈಃ ಶಾಕೈಶ್ಚ ವಿವಿಧೈಸ್ತಥಾ ॥ ೨೧ ॥**

**ಸುವರ್ಚಲಾಭಿಃ ಸರ್ವಾಭಿಃ ಸರ್ಷಪಾಭಿಸ್ತಥೈವ ಚ ।**
**ಕಾಕೋಲೀಕ್ಷೀರಕಾಕೋಲೀಛತ್ರಯಾ ಚಾತಿಚ್ಛತ್ರಯಾ ॥ ೨೨ ॥**

**ಕಾಕಮಾಚೀಮಹಾಬುದ್ಧಿ ಶಶಕರ್ದಲಕಂದಲೈಃ ।**
**ತಥಾ ಕ್ಷೀರಿಕಶಾಕೇನ ಕಾಲಶಾಕೇನ ಚಾಪ್ಯಥ ॥ ೨೩ ॥**

ಹೇಳದೆ ಇರುವ ಅನೇಕ ಹೆಸರುಗಳು ಬಂದಿವೆ. ಅವುಗಳ ಹೆಸರನ್ನೇ ಕೇಳಿರುವಾಗ ಅದನ್ನು ಕನ್ನಡಭಾಷೆಯ ಪದಗಳಲ್ಲಿ ಬರೆಯುವುದೆಂದರೆ ಸಾಧ್ಯವೂ ಇಲ್ಲ. ಅದಕಾರಣ ವನವೃಕ್ಷಗಳ-ವನಮೃಗಗಳ-ವನಶಾಕಗಳ-ವನ ಪಕ್ಷಿಗಳನ್ನು ಕುರಿತು ೨೧ ಶ್ಲೋಕಗಳಲ್ಲಿ ಬಂದಿರುವ ಸಾರಾಂಶವನ್ನು ಇಲ್ಲಿ ಬರದಿರುವೆವು. ಕೆಲಕೆಲವು ಪದಗಳ ಹೆಸರನ್ನೂ ಅದರ ಅರ್ಥವನ್ನೂ ಸ್ವಲ್ಪಮಾತ್ರವೇ ಮೊದಲು ಬರೆಯುವೆವು.

ಪರುಷ-ಈಚಲಗಿಡ, ಕಿರಾತ-ನೆಲಬೇವು, ಕೇತಕ-ಗೇದಿಗೇಗಿಡ (ತಾಳೇಗಿಡ) ಆಟರೂಷ-ಅಡ್ಡಸರದ ಮರ, ಕಕುಭ-ರಕ್ತಾರ್ಜುನವೃಕ್ಷ, ಋಷಭ-ಕರೀಮತ್ತಿ ಬಿಳೀ ಮತ್ತಿ ಮುಂತಾದ ಮರಗಳ ಭೇದ, ಚಿರಬಿಲ್ವ-ಹೊಂಗೇಮರ, ಕಾರವೇಲ್ಲ-ಹಾಗಲಗಿಡ ಕರ್ಕೋಟಕ-ಬಿಲ್ವಪತ್ರೆ, ಕರ್ಕೋಟಕೀ-ಲೋಳಸರ, ಹಿರೀಹೀರ-ಯಲಹಾಗಲಕ್ಕೂ ಹೆಸರು. ಕಾಕೋಲೀ-ಚೇಳುಕೊಂಡಿನೊಪ್ಪು, ಛತ್ರಾತಿಚ್ಛತ್ರ-ಛತ್ರಾಕಾರದ ಹುಲ್ಲು ಗಿಡ ಅಥವಾ ಹೆತ್ತುಂಬೆ. ಕಾಕಮಾಚಿ-ಕಾಚೀಗಿಡ, ಕಾಲೇಯಕ-ಮರದ ಅರಸಿನ, ಕಾಲಶಾಕ-ಕರೀಬೇವು

ಅಮರದಲ್ಲಿರುವ ವನೌಷಧಿವರ್ಗದಲ್ಲಿ ಅನೇಕ ಪದಗಳು ಬಂದಿರುವುವಾದರೂ ಈ ಗ್ರಂಥದಲ್ಲಿ ಪ್ರಯೋಗಿಸಿರುವ ಅನೇಕ ಪದಗಳು ಶಬ್ದಾರ್ಥಕಲ್ಪದ್ರುಮ, ತ್ರಿಕಾಂಡ ಕೋಶ, ನಾಮಲಿಂಗಾನುಶಾಸನಗಳಲ್ಲೆಲ್ಲಿಯೂ ಬಂದಿರುವಂತೆ ಕಾಣುವುದಿಲ್ಲವಾದ್ದರಿಂದ

ಆಯುಷ್ಯಾಭಿರ್ಯಶಸ್ಯಾಭಿರ್ವರ್ಣ್ಯಾಭಿಶ್ಚ ನರಾಧಿಪ ।
ಜರಾಮೃತ್ಯುಭಯಘ್ನಾಭಿಃ ಕ್ಷುತ್ಪ್ರಯುಘ್ನಾಭಿರೇವ ಚ ॥ ೨೬ ॥

ಸೌಭಾಗ್ಯಜನನೀಭಿಶ್ಚ ವೃಷ್ಯಾಭಿಶ್ಚಾಪ್ಯನೇಕಶಃ ।
ವೇತ್ರವೇಣುಲತಾಭಿಶ್ಚ ತಥಾ ಕೀಚಕವೇಣುಭಿಃ ॥ ೨೭ ॥

ಕಾಶೈಃ ಶಶಾಂಕಸಂಕಾಶೈಃ ಶರಗುಲ್ಮೈಸ್ತಥಾ ಕ್ವಚಿತ್ ।
ಕುಶಗುಲ್ಮೈಸ್ತಥಾ ರಮ್ಯೈರ್ಗುಲ್ಮೈಶ್ಚ ಮನೋಹರೈಃ ॥ ೨೮ ॥

ಕಾರ್ಪಾಸಯಾ ತುವರ್ಯಾ ಚ ದುಕೂಲೇನ ಶುಭೇನ ಚ ।
ತಥಾ ಚ ಕದಲೀಖಂಡೈರ್ಮನೋಹಾರಿಭಿರುತ್ತಮೈಃ ॥ ೨೯ ॥

ತಥಾ ಮರಕತಪ್ರಖ್ಯೈಃ ಪ್ರದೇಶೈಃ ಶಾದ್ವಲಾನ್ವಿತೈಃ ।
ಇರಾಪುಷ್ಪಸಮಾಯುಕ್ತೈಃ ಕುಂಕುಮಸ್ಯ ಚ ಭಾಗಶಃ ॥ ೩೦ ॥

---

ಹೂದ ಗಣಸುಗೆಪ್ಪೆಗಳೂ ಅಲ್ಲಿ ಯಥೇಚ್ಛವಾಗಿ ಸಿಕ್ಕುತ್ತಿದ್ದುವು ಮುಪ್ಪು, ಸಾವು, ಹೆದರಿಕೆಗಳನ್ನು ಹೋಗಲಾಡಿಸುವ ಶಕ್ತಿಯುಳ್ಳ ವಸ್ತು ಹೊಟ್ಟೆ ಹಸಿವನ್ನು ಹಾಳು ಮಾಡುವ ಸಾಮರ್ಥ್ಯವುಳ್ಳ ಸೌಭಾಗ್ಯವನ್ನುಂಟುಮಾಡುವ ಯೋಗ್ಯತೆಯುಳ್ಳ ಆಯುರಾರೋಗ್ಯೈಶ್ವರ್ಯಗಳನ್ನಭಿವೃದ್ಧಿಗೊಳಿಸುವ ಶಕ್ತಿಯುಳ್ಳ ಗಿಡಮೂಲಿಕೆಗಳು ಅಲ್ಲಿ ಯಥೇಚ್ಛವಾಗಿ ದೊರಕುತ್ತಿದ್ದವು

ಆ ಕಾಡಿನಲ್ಲಿ ಬಿದಿರುಮೆಳೆಗಳೂ ಗಾಳಿತುಂಬಿ ಸುಯ್ಯನ ಸದ್ದು ಮಾಡುವ ಹೆಬ್ಬಿದಿರುಮೆಳೆಗಳೂ ಬೆಳ್ಳಗಿರುವ ಜೊಂಡು ಹುಲ್ಲುಗಳೂ, ವಿವಿಧ ಬಳ್ಳಿಗಳ ಪೊದೆಗಳೂ, ದರ್ಭೆ ಹುಲ್ಲಿನ ಪೊದೆಗಳೂ, ಕಬ್ಬಿನ ಪೊದೆಗಳೂ, ಯಥೇಚ್ಛವಾಗಿ ಕಾಣುತ್ತಿದ್ದುವು ಹತ್ತೀಗಿಡ, ತೊಗರೀಗಿಡ, ನಾರಿನಗಿಡ, ಬಾಳೆಗಿಡ, ಕಡಕತ್ತಿ ಗಿಡ, ಮರಕತಮಣಿಯಂತೆ ಶೋಭಿಸುವ ಹುಲ್ಲು ಗಾವಲುಗಳು ಅಲ್ಲಿ ತುಂಬಿ ತುಳುಕಾಡುತ್ತಿದ್ದುವು ಕುಂಕುಮಕೇಸರಿ ಗಿಡ, ವಿಷಾಪಹಾಂಸೀ, ಗಂಪಿಗೆ ನಳಿದಾವರ ನಿಂಬೆ, ಹೇರಿಳ, ಚಕೋತ, ಉಗ್ರಗ್ರಂಥ, ಪ್ರಿಯಾಳು, ನಾನಾವರ್ಣಗಳಿಂದ ಕೂಡಿದ ಸುವಾಸನಾಯುಕ್ತವಾದ ತಾವರೇಗಿಡಗಳು, ಸೂರ್ಯನಂತೆ ಕಂಗೊಳಿಸುವ ಚಂದ್ರನಂತೆ ಹೊಳೆಯುವ ಚಿನ್ನದಂತೆ ಹೊಳೆಯುವ ಗಿಣಿ ಹಸುರಿನಂತೆ ಹೊಳೆಯುವ ಪಂಚ ವರ್ಣಗಳಿಂದ ಪ್ರಕಾಶಿಸುವ ಬಹು ವರ್ಣಗಳಿಂದ ಕೂಡಿರುವ ನಾನಾವಿಧವಾದ ಹೂಗಿಡ

ತಗರಾತಿವಿಷಾಮಾಂಸೀಗ್ರಂಥಿಪರ್ಣೀಸುರಾಗದೈಃ ।
ಸುವರ್ಣಪುಷ್ಪೈಶ್ಚ ತಥಾ ಭೂಮಿಪುಷ್ಪೈಸ್ತಥಾಽಪರೈಃ ॥ ೩೧ ॥

ಜಂಬೀರಿಕಾಭೂಸ್ತೃಣೈಶ್ಚ ಸರಸೈಃ ಸುಮುಖೈಸ್ತಥಾ ।
ಶೃಂಗವೇರಾಜನೋದಾಭಿಃ ಕುರೀರಕಪ್ರಿಯಾಲುಕೈಃ ॥ ೩೨ ॥

ಜಲಜೈಶ್ಚ ತಥಾ ಪದ್ಮೈರ್ನಾನಾವರ್ಣೈಃ ಸುಗಂಧಿಭಿಃ ।
ಉದಯಾದಿತ್ಯಸಂಕಾಶೈಃ ಪೂರ್ಣಚಂದ್ರನಿಭೈಸ್ತಥಾ ॥ ೩೩ ॥

ತಪನೀಯಸವರ್ಣೈಶ್ಚ ಅತಸೀಪುಷ್ಪಸನ್ನಿಭೈಃ ।
ಶುಕಪತ್ರನಿಭೈಶ್ಚಾನ್ಯೈಃ ಸ್ಥಲಪದ್ಮೈಶ್ಚ ಭಾಗಶಃ ॥ ೩೪ ॥

ಪಂಚವರ್ಣೈಃ ಸಮಾಕೀರ್ಣಂ ಬಹುವರ್ಣೈಸ್ತಥೈವ ಚ ।
ಪುಷ್ಪದೃಷ್ಟ್ಯಾಹಿತಮುದೈಃ ಕುಸುಮೈಶ್ಚಂದ್ರಸನ್ನಿಭೈಃ ॥ ೩೫ ॥

ಗಳು ಅಲ್ಲಿ ವಿರಾಜಿಸುತ್ತಲಿದ್ದುವು. ಅಗ್ನಿಜ್ವಾಲೆಯಂತೆ ಕಾಣುವ ಕೋಕನದಾಕಾರದಿಂದೊಡಗೂಡಿದ ಕಮಲಕಹ್ಲಾರಗಳಿಂದಲೂ ಸ್ಪೃಹಾಳಾದಿ ಪುಷ್ಪತರುಗಳಿಂದಲೂ ಭೂಮಿಯಲ್ಲಿ ಹುಟ್ಟುವ, ನೀರಿನಲ್ಲಿ ಬೆಳೆಯುವ, ನೀರೊಳಗೆ ಬೆಳೆಯುವ ನಾನಾವಿಧ ಗಿಡಗಳಿಂದಲೂ ಆ ಅರಣ್ಯವು ತುಂಬಿತುಳುಕುತ್ತಿತ್ತು. ಋಷಿಯೋಗ್ಯವಾದ ನಾನಾ ಪ್ರಕಾರ ಧಾನ್ಯಗಳಿಂದಾವೃತವಾಗಿದ್ದಾ ವನವನ್ನು ಎಲ್ಲೆಲ್ಲಿ ನೋಡಿದರೂ ಆನಂದವೇ ತುಂಬಿದಂತೆ ತೋರುತ್ತಿತ್ತು. ಈ ಕಾಡಿನಲ್ಲಿಲ್ಲದ ಧಾನ್ಯಸಸ್ಯಗಳಿಲ್ಲ. ಈ ಕಾಡಿನಲ್ಲಿಲ್ಲದ ಮದಗಳಿಲ್ಲ. ಈ ಕಾಡಿನಲ್ಲಿಲ್ಲದ ತರಕಾರೀಗಿಡಗಳಿಲ್ಲ. ಈ ಕಾಡಿನಲ್ಲಿಲ್ಲದ ಹಣ್ಣಿನ ಗಿಡಗಳಿಲ್ಲವೇ ಇಲ್ಲ. ಈ ಕಾಡಿನಲ್ಲಿಲ್ಲದ ಹೂವಿನ ಗಿಡಗಳಿಲ್ಲ. ಈ ಕಾಡಿನಲ್ಲಿಲ್ಲದ ಗೆಡ್ಡೆಗೆಣಸುಗಳಿಲ್ಲ. ನಾಗಲೋಕದಲ್ಲಿ ಯಾವ ಯಾವ ಪದಾರ್ಥಗಳುಂಟೋ ದೇವಲೋಕದಲ್ಲಿ ಯಾವ ಯಾವ ಮರಗಳುಂಟೋ ಅವೆಲ್ಲವೂ ಈ ಹಿಮಾಲಯದಲ್ಲಿ ತುಂಬಿವೆ. ಇಲ್ಲಿ ಇಲ್ಲದೆ ಇರುವ ವೃಕ್ಷವಿಶೇಷಗಳು ಇನ್ನೆಲ್ಲಿಯೂ ಇಲ್ಲವೇ ಇಲ್ಲ. ಯಾವಾಗ ನೋಡಿದರೂ ಆರು ಋತುಗಳಲ್ಲೂ ಪುಷ್ಪಿತವಾಗುವ ಫಲಿತವಾಗುವ ಗಿಡಮರಗಳು ಇಲ್ಲಿ ಸದಾಕಾಲಗಳಲ್ಲಿಯೂ ಪುಷ್ಪ ಫಲೋಪೇತವಾಗಿ ರಾರಾಜಿಸುತ್ತಿರುವುವು. ತಪಸ್ಸಿಗೋಸ್ಕರ ಬಂದ ಯಾವ ಸಮುದ್ರರಾಜನುಂಟೋ ಅವನು ಈ ವನ

ತಥಾ ಪದ್ಮಿನಿಖಂಡಾಢ್ಯೈ ರಾಜನ್ರಕ್ತೋತ್ಪಲೈಃ ಶುಭೈಃ ।
ನೀಲೋತ್ಪಲೈಃ ಸಕಲ್ಹಾರೈರ್ದುರ್ಜಾತಕಕಶೇರುಕೈಃ ॥ ೩೬ ॥

ಶೃಂಗಾಟಕೈರ್ಮೃಣಾಲೈಶ್ಚ ಕವಾಕ್ಷೈ ರಾಕ್ಷಸೋತ್ಪಲೈಃ ।
ಜಲಜೈಃ ಸ್ಥಲಜೈರ್ಮಾಲ್ಯೈಃ ಫಲೈಃ ಪುಷ್ಪೈರಶೇಷತಃ ॥ ೩೭ ॥

ವಿವಿಧೈಶ್ಚೈವ ನೀವಾರೈರ್ಮುನಿಭೋಜ್ಯೈರ್ನರಾಧಿಪ ।
ನ ತದ್ಧಾನ್ಯಂ ನ ತತ್ಸಸ್ಯಂ ನ ತಚ್ಛಾಕಂ ನ ತತ್ಫಲಂ ॥ ೩೮ ॥

ನ ತನ್ಮೂಲಂ ನ ತತ್ಕಂದಂ ನ ತತ್ಪುಷ್ಪಂ ನರಾಧಿಪ ।
ನಾಗಲೋಕೋದ್ಭವಂ ಯಚ್ಚ ನಾಕಲೋಕೋದ್ಭವಂ ಚ ಯತ್ ॥ ೩೯ ॥

ಅನೂಪಬಂಧನೋತ್ಥಂ ಚ ತಸ್ಮಿನ್ ಯನ್ನಾಸ್ತಿ ಯಾದವ ।
ಸದಾ ಪುಷ್ಪಫಲಂ ಸರ್ವಮುಪಸ್ಪೃಶ್ಯತು ಯೋಗತಃ ॥ ೪೦ ॥

ಮದ್ರೇಶ್ವರಃ ಸ ದದೃಶೇ ತಪಸೋಽರ್ಥಾಯ ಯೋ ಗತಃ ।
ದದೃಶೇ ಚ ತಥಾ ತತ್ರ ನಾನಾರೂಪಾನ್ಪತತ್ರಿಣಃ ॥ ೪೧ ॥

ಮಯೂರಾನ್ ಶತಪತ್ರಾಂಶ್ಚ ಕಲನಾದಕಕೋಕಿಲಾನ್ ।
ತಥಾ ಕಾದಂಬಕಾನ್ಹಂಸಾನ್ಕುಕ್ಕುಟಾನ್ ಜಲಕುಕ್ಕುಟಾನ್ ॥ ೪೨ ॥

ಕೃಕರಾನ್ಪರ್ವತಾನ್ ಶ್ಯಾಮಾಂಸ್ತಿತ್ತಿರಾನ್ಸಕಪಿಂಜಲಾನ್ ।
ಧಾರ್ತರಾಷ್ಟ್ರಾನ್ಪ್ಲವಾನ್ಮದ್ಗೂನ್ಕಲವಿಂಕಾಂಛುಕಾನ್ಬಕಾನ್ ॥ ೪೩ ॥

ಸ್ವೈಪುರಿಯನ್ನೆಲ್ಲಾ ನೋಡಿ ಅಚ್ಚರಿಗೊಂಡನಲ್ಲದೆ ಈ ಕಾಡಿನಲ್ಲಿದ್ದ ನಾನಾವಿಧ ಪಕ್ಷಿಗಳ ಗುಂಪನ್ನು ಸಹ ನೋಡಿದನು ಈ ಪಕ್ಷಿಗಳ ಹೆಸರನ್ನು ಇಲ್ಲಿ ವಿವರಿಸುವೆವು

ಅವುಗಳು— ನವಿಲು, ಕೋಗಿಲೆ, ಕದಂಬ, ಹಂಸ, ಕೋಳಿ, ನೀರುಕೋಳಿ, ಲಾವನಪಕ್ಷಿ, ಕಪಿಂಜಲ, ಕಲವಿಂಕ, ಶುಕ, ಬಕ, ಚಟಕ (ಗುಬ್ಬಚ್ಚಿ) ಚಕ್ರವಾಕ, ತಿಲಕ, ಟಿಟ್ಟಿಭ, ಪಟು, ಪುತ್ರಪ್ರಿಯ, ಲೋಹಪೃಷ್ಠ, ಗೋನಂದ, ಗಿರಿವರ್ತಕ, ವಾರನಾಪ, ಶಾರಕ, ಜೀವಜೀವಕ, ಆತಪವರ್ತಕ, ವರ್ತೀರ, ಪ್ರಭದ್ರಕ, ತಾಮ್ರಚೂಡ,

**ಚಟಿಕಾಂಶ್ಚಕ್ರವಾಕಾಂಶ್ಚ ಆಟಿಕಾಂಷ್ಟಿಟ್ಟಿಭಾನ್ಸಟಾನ್ ।**
**ಪುತ್ರಪ್ರಿಯಾಂಲ್ಲೋಹಪೃಷ್ಠಾನ್ನಂದಗಿರಿವರ್ತಕಾನ್** ॥ ೪೪ ॥

**ಪಾರಾವತಾನ್ಕಾಮಲಾಂಶ್ಚ ಶಾರ್ಙ್ಗ ಜೀವಕಜೀವಕಾನ್ ।**
**ಲಾನವರ್ತಕವರ್ತೀರಾಸ್ರಕ್ತಧರ್ಮಪ್ರಭದ್ರಕಾನ್** ॥ ೪೫ ॥

**ತಾಮ್ರಚೂಡಾನ್ವರ್ಣಚೂಡಾನ್ಸ್ಕೇಯಷ್ಟೀನ್ಖಂಜರೀಟಕಾನ್ ।**
**ಋಷಿಪುತ್ರಾನ್ಸಹಾರೀತಾನ್ಕ್ರಕ್ಕರಾನ್ಪಷ್ಟ ಕುಕ್ಕುಟಾನ್** ॥ ೪೬ ॥

**ಲಟ್ವಾಂಲ್ಲಟೇಷೂನ್ಗೋಕ್ಷ್ವೇಡಾಂಸ್ತ್ರದಾ ಕುಂಕುಮಚೂಡಕಾನ್ ।**
**ಭೃಂಗರಾಜಾಂಚ್ಛಾರಪಾದಾನ್ಭೂಲಿಂಗಾನ್ಪಿಂಡಿಮಾಲವಾನ್** ॥ ೪೭ ॥

**ಮಂಜೂಲೀಯಕದಾತ್ಯೂಹಗೋಸಪುತ್ರಾಂಸ್ಸವಂಜುಲಾನ್ ।**
**ಭಾರದ್ವಾಜಾಂಸ್ತಥಾ ಚಾಷಾಂತ್ಸುವರ್ಣಾನ್ರಜನೀಯಕಾನ್** ॥ ೪೮ ॥

**ಏತಾಂಶ್ಚಾನ್ಯಾಂಶ್ಚ ಹಿ ಬಹೂನ್ಪಕ್ಷಿಸಂಘಾನ್ಮನೋಹರಾನ್ ।**
**ಪ್ರವದಾನ್ವಿವಿಧಾಕಾರಾನ್ಮೃಗಾಂಶ್ಚೈವ ಮಹಾಮೃಗಾನ್** ॥ ೪೯ ॥

**ವ್ಯಾಘ್ರಾನ್ಕೇಸರಿಣಃ ಸಿಂಹಾನ್ವೀಚಿನಃ ಶರಭಾನ್ವೃಕಾನ್ ।**
**ಋಕ್ಷಾಂಸ್ತರಕ್ಷೂನ್ಸ್ಪಂಘೂಕಾನ್ಗೋಲಾಂಗೂಲಾನ್ಸವಾನರಾನ್** ॥ ೫೦ ॥

**ಶಶಾಂಲ್ಲೋಕಾಂಚ್ಛರಪಲಾನ್ಮಾರ್ಜಾರಾನ್ಮಾಯುವಃ ಶುನಃ ।**
**ಮೂಷಿಕಾನ್ನಕುಲಾನ್ಕಾಕಾನ್ಸಿಂಹಾನ್ಗೋಧ್ರಸುರೋಮಕಾನ್** ॥ ೫೧ ॥

---

(ಕೋಳಿ) ವರ್ಣಚೂಡ, ಟಿಟ್ಟಿಭ, ಖಂಜರೀಟ, ಋಷಿಪುತ್ರ, ಲಟ್ವ, ಲಟೇಷು, ಭೃಂಗರಾಜ, ಶಾರಪಾದ, ಭೂಲಿಂಗ, ಪಿಂಡಮಾಲವ, ಮಂಜುಲೀಯಕ, ದಾತ್ಯೂಹ, ಗೋಸಪುತ್ರ, ವಂಜುಲ, ಭಾರದ್ವಾಜ, ಚಾಷ, ಸುವರ್ಣ ರಜನೀಯಕ, ಇವೇ ರೀತಿ ನಾನಾರೀತಿಯಾದ ನಾನಾರೂಪವಾದ ನಾನಾಬಣ್ಣವುಳ್ಳ ವಿವಿಧವಾದ ಮನೋಹರವಾದ ಹಕ್ಕಿಗಳ ಗುಂಪನ್ನು ಆ ರಾಜನು ನೋಡಿದನು ಪಕ್ಷಿಗಳ ಗುಂಪನ್ನು ನೋಡಿದ ಬಳಿಕ ಅನೇಕ ವಿಧ ಮೃಗಗಳ ಗುಂಪನ್ನು ನೋಡಿದನು ಆ ಮೃಗಗಳ ಹೆಸರುಗಳನ್ನಿಲ್ಲಿ ಬರೆಯುತ್ತೇವೆ

೫೦-೫೭ ಹುಲಿ, ಆನೆ, ಸಿಂಹ, ಕಿರಬ, ಕತ್ತೆಕಿರುಬ, ತೋಳ, ಕರಡಿ ...ಗಳೀಕ ಕೋತಿ, ನೊಲ, ಚಿಕ್ಕ, ನರಿ, ನಾಯಿ ಇಲಿ ಮುಂಗಿಲಿ ಓಷ್ಟ್ರಮೃಗ,

ತಥಾ ಮತ್ತಾಂಶ್ಚ ಮಾತಂಗಾನ್ಮಹಿಷಾನ್ಗವಯಾನ್ಸೃಷಾನ್ ।
ಚರಮಾನ್ಸೃಮರಾಂಶ್ಚೈವ ತಥಾ ಗೋರಾನ್ಖಾನಪಿ ॥ ೫೨ ॥

ಉರಭ್ರಾಂಶ್ಚ ತಥಾ ಮೇಷಾನ್ಸಾರಂಗಾನಥ ಕರ್ಕಶಾನ್ ।
ರುರೂನ್ನಮೃಷ್ಪದಾನ್ಪೃಷ್ಟಾನ್ಮರ್ಕಟಾನ್ಕರ್ಕಟಾನ್ಮೃಗಾನ್ ।
ನೀಲಾಂಶ್ಚೈವ ಮಹಾನೀಲಾನ್ಕರಾಲಮೃಗಮಾರ್ದಕಾನ್ ।೫೩ ॥

ಶ್ವದಂಷ್ಟ್ರಾನ್ಸ್ರಾಮಶರಬಾನ್ಕ್ರೋಡಕಾಕಪಶಂಬರಾನ್ ॥ ೫೪ ॥

ಕರಾಲಾನ್ಕ ತಮಾಲಾಂಶ್ಚ ಕಾಲಪುಚ್ಛಾಂಸ್ತಥಾರುಣಾನ್ ।
ಉಷ್ಟ್ರಾನ್ಗಜಾನ್ವರಾಹಾಂಶ್ಚ ತುರಗಾನ್ಖರಗರ್ದಭಾನ್ ॥ ೫೫ ॥

ಏತಾನ್ ಪಶ್ಯನ್ಸ ಮದ್ರೇಶೋ ವಿರುದ್ಧಾಂಶ್ಚ ಪರಸ್ಪರಂ ।
ಅವಿರುದ್ಧಾನ್ವನೇ ತಸ್ಮಿನ್ನಿರ್ವೃತ್ತಿಂ ಚ ಪರಾಂ ಯಯೌ ॥ ೫೬ ॥

ತದಾಶ್ರಮಪದೇ ಮುಖ್ಯೋ ಬಭೂವಾತ್ರೇಃ ಪುರಾ ನೃಪ ।
ತತ್ಪ್ರಸಾದಾತ್ಸದಾ ಯುಕ್ತಂ ಸ್ಥಾವರ್ಯಜಂಗಮೈಸ್ತಥಾ ॥ ೫೭ ॥

ಹಿಂಸಂತಿ ನ ತದಾನ್ಯೋನ್ಯಂ ಹಿಂಸಕಾಸ್ತು ಪರಸ್ಪರಂ ।
ಕ್ರವ್ಯಾದಾಃ ಪ್ರಾಣಿನಸ್ತತ್ರ ಸರ್ವೇ ಕ್ಷೀರಫಲಾಶನಾಃ ॥ ೫೮ ॥

ನಿರ್ಮಿತಾಸ್ತತ್ರ ರತ್ಯರ್ಥಮತ್ರಿಣಾ ಸುಮಹಾತ್ಮನಾ ।
ಶಿಲಾನಾಂ ನಿಮ್ನದೇಶೇಷು ತತ್ರ ಗಾವಃ ಸ್ವಯಂ ನೃಪ ॥ ೫೯ ॥

ಮದ್ದಾನ,ಕಾಡೆಮ್ಮೆ, ಕಾಡುಕೋಣ, ನೀಲ ಮಹಾನೀಲ,ಕಾಡುಹಂದಿ,ಗಂಡಭೇರುಂಡ ಚೇಳು, ಒಂಟೆ, ಆನೆ, ಹಂದಿ, ಕತ್ತೆ ಇತ್ಯಾದಿ ಪ್ರಾಣಿಗಳು ಪರಸ್ಪರ ವೈರವನ್ನು ಬಿಟ್ಟು ಆ ಕಾಡಿನಲ್ಲಿ ಸಂಚರಿಸುತ್ತಲಿದ್ದುವು ಅಲ್ಲಿನ ಆ ಆಶ್ರಮಗಳಲ್ಲಿ ಅತ್ರಿಋಷಿಗಳ ಆಶ್ರಮವೇ ಮುಖ್ಯವಾದುದಾಗಿತ್ತು ಆ ತಪೋವನದ ಸಮೀಪದಲ್ಲಿ ಸ್ಥಾವರ ಜಂಗಮ ಪ್ರಾಣಿಗಳು ವಿಶೇಷವಾಗಿ ವಾಸಿಸುತ್ತಿದ್ದುವು ಇದನ್ನೆಲ್ಲಾ ನೋಡಿ ಆ ಮದ್ರರಾಜನು ಪರಮಸುಖವನ್ನನುಭವಿಸಿದನು

೫೭-೬೬ ಆ ಹಿಮಾಲಯದ ಕಾಡಿನಲ್ಲಿದ್ದ ಹಿಂಸ್ರಮೃಗಗಳು ಅನ್ಯೋನ್ಯ ವಾಗಿ ಒಂದು ಪ್ರಾಣಿಯನ್ನೂ ಹಿಂಸೆಮಾಡುತ್ತಲಿರಲಿಲ್ಲ ಅಂದರೆ ಆ ಭಯಂಕರ

**ಪಯಃ ಕ್ಷರಂತಿ ತದ್ದಿವ್ಯಮಮೃತಸ್ವಾದುಸನ್ನಿಭಂ ।**
**ಕ್ವಚಿದ್ರಾಜಮಹಿಷ್ಯಶ್ಚ ಕ್ವಚಿದ್ರಾಜಾ ಚ ಭಾಗಶಃ** ॥ ೬೦ ॥

**ಶಿಲಾಃ ಕ್ಷೀರೇಣ ಸಂಪೂರ್ಣಾ ದಧ್ನಾ ಚಾನ್ಯತ್ರ ಯಾದವ ।**
**ಸ ಪಶ್ಯನ್ಪರಮಾಂ ಪ್ರೀತಿಮವಾಪ ವಸುಧಾಧಿಪಃ** ॥ ೬೧ ॥

**ಸರಾಂಸಿ ತತ್ರ ದಿವ್ಯಾನಿ ನದ್ಯಶ್ಚ ವಿಮಲೋದಕಾಃ ।**
**ಮೃಣಾಲಕಾನಿ ದಿವ್ಯಾನಿ ಶೀತಲಾನಿ ಚ ಭಾಗಶಃ** ॥ ೬೨ ॥

**ಕಂದರಾಣಿ ಚ ಶೈಲಸ್ಯ ಸುಖಸೇವ್ಯಾನಿ ಯಾದವ ।**
**ಹಿಮಪಾತೋ ನ ತತ್ರಾಸ್ತಿ ಸಮಂತಾತ್ಪಂಚಯೋಜನಂ** ॥ ೬೩ ॥

ಕಾಡಿನಲ್ಲಿ ಋಷಿಗಳು ವಾಸವಾಗಿದ್ದಾಗ್ಯೂ ಅವರಿಗೆ ವನಮೃಗಗಳ ಬಾಧೆಯಿರಲಿಲ್ಲ ನಾವು ತಿಳಿಯಬೇಕು. ಮಾಂಸಾಹಾರಿಗಳಾದ ಪ್ರಾಣಿಗಳೂ ಸಹ ಆ ಕಾಡಿನಲ್ಲಿ ಯಥೇಚ್ಛವಾಗಿ ಹಣ್ಣು ತಿಂದುಕೊಂಡು ಹಾಲು ಕುಡಿದುಕೊಂಡು ಜೀವಿಸುತ್ತಿದ್ದುವು ಅಷ್ಟು ಹಾಲು ಅಲ್ಲಿ ಎಲ್ಲಿ ಸಿಕ್ಕುತ್ತಿತ್ತೆಂದರೆ--ಅತ್ರಿಋಷಿಗಳು ಅಲ್ಲಿ ಒಂದು ಆಟದ ಬಯಲನ್ನು ನಿರ್ಮಿಸಿ ಅಲ್ಲಲ್ಲಿ ಹಳ್ಳ ಪ್ರದೇಶಗಳಲ್ಲಿ ಕಲ್ಲುಗಳನ್ನು ಹರಡಿಸಿ ನಡಿದ್ದರು ಆ ಕಲ್ಲುಗಳಲ್ಲಿ ಹಸುಗಳು ಬಂದು ಯಥೇಚ್ಛವಾಗಿ ಹಾಲನ್ನು ಸುರಿಸಿ ಹೊರಟುಹೋಗುತ್ತಿದ್ದುವು ಆ ಹಾಲು ಅಮೃತದಂತೆ ಒಳ್ಳೆ ರುಚಿಯಾಗಿದ್ದುದರಿಂದ ಸಕಲ ಮೃಗಗಳೂ ಆ ಹಾಲಿನ ಹಳ್ಳಕ್ಕೆ ಬಂದು ಹಾಲು ಕುಡಿದು ಹೋಗುತ್ತಲಿದ್ದವು ಹಸುಗಳ ಹಾಲೇ ಅಲ್ಲ ಮಹಿಷಿಗಳಂತಿರುವ ಕಾಡೆಮ್ಮೆಗಳೂ ಸಹ ಅಲ್ಲಿಗೆ ಬಂದು ಕೊಡಗಟ್ಟಲೆ ಹಾಲನ್ನು ಅಲ್ಲಿ ಹಿಂಡಿ ಹೊರಟುಹೋಗುತ್ತಿದ್ದುವು ಮತ್ತೊಂದು ಕಡೆ ಕಲ್ಲುಹಳ್ಳದಲ್ಲಿ ಅವರಂತೆ ಹಾಲೆಲ್ಲಾ ಹೆತ್ತುಕೊಂಡು ಮೊಸರಾಗುತ್ತಿತ್ತು ಅಂತಹ ಕೆನೆಮೊಸರನ್ನು ವನ್ಯಜೀವಿಗಳು (ಮೃಗಗಳೂ, ತಾಪಸರೂ) ಯಥೇಚ್ಛವಾಗಿ ಉಪಯೋಗಿಸುತ್ತಿದ್ದರು ಇದನ್ನೆಲ್ಲಾ ನೋಡಿ ವಜ್ರಮಹಾರಾಜನಿಗೆ ಪರಮಾಶ್ಚರ್ಯವುಂಟಾಯಿತು ಮತ್ತು ಆ ಅರಣ್ಯದಲ್ಲಿ ನಿರ್ಮಲ ಜಲವುಳ್ಳ ನದಿಗಳೂ, ಸರೋವರಗಳೂ ವಿಶೇಷವಾಗಿದ್ದುವು ಅಲ್ಲಿದ್ದ ತಾಪಸ ಹೂಪ್ರಗ

**ಉಪತ್ಯಕಾಸು ಶೈಲಸ್ಯ ಶಿಖರೇಷು ತು ವಿದ್ಯತೇ ।**
**ತತ್ರಾಪಿ ರಾಜಂಚ್ಛಿಖರಂ ಪರ್ವತೇಂದ್ರಸ್ಯ ಪಾಂಡುರಂ ॥ ೬೪ ॥**

**ಹಿಮಪಾತಂ ಸದಾ ತತ್ರ ಘನಾಃ ಕುರ್ವಂತಿ ಸಂಹತಾಃ ।**
**ತತ್ರಾಸ್ತಿ ಚಾಪರಂ ಶೃಂಗಂ ಯತ್ರ ತೋಯಂ ಘನಾ ಘನಾಃ ॥ ೬೫ ॥**

**ನಿತ್ಯಮೇವಾಭಿವರ್ಷಂತಿ ಶಿಲಾಭಿಃ ಶಿಖರಂ ಖರಂ ।**
**ತದಾಶ್ರಮಂ ಮನೋಹಾರಿ ಯತ್ರ ಕಾಮಧರಾ ಧರಾಃ ॥ ೬೬ ॥**

ಸನಿಹದಲ್ಲಿ ರಾಜಹಂಸಗಳು ಕ್ರೀಡಿಸುತ್ತಲಿದ್ದವು ಆ ಬೆಟ್ಟದ ಬುಡದಲ್ಲೆಲ್ಲಿಯೂ ಸುಖವಾಸಕ್ಕೆ ಯೋಗ್ಯವಾದ ಅನೇಕ ಪ್ರದೇಶಗಳಿದ್ದವು ಹಿಮಾಲಯ ಪ್ರದೇಶವು ಎಲ್ಲೆಲ್ಲಿಯೂ ಮಂಜುಗಡ್ಡೆಗಳಿಂದ ತುಂಬಿರುವುದಾದರೂ ಆ ಅತ್ರಿಋಷಿಗಳು ವಾಸವಾಗಿದ್ದ ತಪೋವನ ಭಾಗದ ಸುತ್ತಲೂ ಐದು ಗಾವುದ ದೂರದವರೆಗ ಸುತರಾಂ ಹಿಮವು ಬೀಳುತ್ತಲೇ ಇರಲಿಲ್ಲ ಇದು ಭಗವದಿಚ್ಛೆಯೆಂದು ತಿಳಿಯಬೇಕು ಆ ತಪೋವನದಲ್ಲಿ ವಾಸಮಾಡುವ ಋಷಿಗಳೆಲ್ಲರೂ ಈ ವಿಧವಾದ ಸುಖವನ್ನುಗಳನ್ನು ಪರಮಾತ್ಮನ ಕೃಪೆಯಿಂದ ಹೊಂದಿ ನಾಗರಿಕರಾದ (ಪಟ್ಟಣ ವಾಸಿಗಳ) ಶ್ರೀಮಂತ ಜನರಿಗಿಂತ ಹೆಚ್ಚು ಸುಖವನ್ನು ಪಡೆದು ಬಹು ಕಾಲ ಜೀವಿಸುತ್ತಿದ್ದರೆಂದು ತಿಳಿಯಬೇಕು (ಈಗಲೂ ಆ ಹಿಮಾಲಯದಲ್ಲಿ ತಪಸ್ವಿಗಳಾದ ಋಷಿ ಜನರು ಇದ್ದಾರೆ.) ಈರೀತಿ ಆ ಅರಣ್ಯದಲ್ಲಿ ಅತ್ರಿಋಷಿಗಳ ಆಶ್ರಮದ ಸುತ್ತಲೂ ಹಿಮಬಾಧೆ ಇಲ್ಲವಾದಾಗ್ಯೂ ಉಳಿದ ಆ ಹಿಮಾಲಯದ ತಪ್ಪಲು ಪ್ರದೇಶಗಳಲ್ಲೆಲ್ಲಾ ಮಂಜು ಧಾರಾಕಾರವಾಗಿ ಸುರಿಯುತ್ತಲೇ ಇರುತ್ತದೆ ಈರೀತಿ ಹಿಮವತ್ಪರ್ವತದ ಶಿಖರದವರೆಗೂ ಹಿಮವು ಗಡ್ಡೆಗಳಾಗಿ ಜಾರಿ ಬೀಳುತ್ತಲಿರುತ್ತವೆ ಇದರಿಂದ ಆ ಪರ್ವತವಾದ್ಯಂತವೂ ಬೆಳ್ಳಗೆ ಕಾಣುತ್ತಲಿರುತ್ತದೆ ಅಷ್ಟು ಹಿಮಗಳ ಸಾಮ್ರಾಜ್ಯವಿರುವುದರಿಂದಲೇ ಇದಕ್ಕೆ ಹಿಮಾಲಯ (ಮಂಜಿನ ತೌರುಮನೆ) ಎಂದು ಹೆಸರಾಗಿದೆ ಆ ಬೆಟ್ಟದ ತುದಿಯೇ ಮೇಘಗಳು ಓಡಾಡುವ ಸ್ಥಳ ಆ ಪರ್ವತದ ಮೇಲೆ ಮತ್ತೊಂದು ಶಿಖರದಲ್ಲಂತೂ ಯಾವಾಗಲೂ ಮೋಡಗಳು ಹೆಪ್ಪುಗಟ್ಟಿ ಹಿಮದ ಕಲ್ಲುಗಳ (ಆನೆಕಲ್ಲು) ಮಳೆಯೇ ಸುರಿಯುತ್ತಿರುತ್ತದೆ ಹೀಗಿರುವುದರಿಂದ ಮದ್ರರಾಜನು ಪ್ರವೇಶಿಸಿದ ವನಪ್ರದೇಶವೇ ಬಹು ಮನೋಹರವಾದ ಸ್ಥಳವೆಂದು ತಿಳಿಯಬೇಕು.

ಸುರಮುಖ್ಯೋಪಭೋಗ್ಯತ್ವಾಚ್ಛಾಖಿನಃ ಸಫಲಾಃ ಸದಾ ।
ಸದೋಪಗೀತಭ್ರಮರಂ ಸುರಸ್ತ್ರೀಸೇವಿತಾಮರಂ ॥ ೬೭ ॥

ಸರ್ವಪಾಪಕ್ಷಯಕರಂ ಶೈಲಸ್ಯೈವ ಮಹಾಕರಂ ।
ಪಾನದ್ಯೈಃ ಕ್ರೀಡಮಾನ್ಯೈಶ್ಚ ದೇಶೇ ದೇಶೇ ನರಾಧಿಪ ॥ ೬೮ ॥

ಹಂಸಪುಂಜಾಃ ಕೃತಾಸ್ತತ್ರ ಚಂದ್ರಬಿಂಬಸಮಪ್ರಭಂ ।
ತಪಾಶ್ರಮಸಮಂತಾಚ್ಚ ಹಿಮಸಂರುದ್ಧಕಂದರಂ ॥ ೬೯ ॥

ಶೈಲಪಾಲೈಃ ಪರಾವೃತಮಗಮ್ಯಂ ಮನುಜೈಃ ಸದಾ ।
ಪೂರ್ವಾರಾಧಿತದೇವೇಶೋ ಮಹಾರಾಜಃ ಪುರೂರವಾಃ ॥ ೭೦ ॥
ತಪಾಶ್ರಮಮನುಪ್ರಾಪ್ತೋ ದೇವದೇವ ಪ್ರಸಾದತಃ ।

ತದಾಶ್ರಮಂ ಶ್ರಮಶಮನಂ ಮನೋಹರಂ
ಮನೋಹರ್ಯೈಃ ಕುಸುಮಶತೈರಲಂಕೃತಂ ।

೬೭-೭೧. ದೇವತಾಗಣಗಳು ಅಲ್ಲಿಗೆ ಬಂದು ಉಪಭೋಗಿಸುತ್ತಿದ್ದುದರಿಂದ ಸಕಲ ವೃಕ್ಷಗಳೂ ಹಣ್ಣುಗಳಿಂದ ನಿಬಿಡವಾಗಿದ್ದುವು. ಪುಷ್ಪವಾಟಿಕೆಗಳಲ್ಲಿ ಭ್ರಮರಗಳು ಝೇಂಕರಿಸುತ್ತಾ ಗಾನಮಾಡುತ್ತಿದ್ದ ಅಪ್ಸರಸ್ತ್ರೀಯರ ಮುಖಕಮಲ ಮಕರಂದವನ್ನು ಸೇವಿಸುತ್ತಿದ್ದುವು. ಆ ಪ್ರದೇಶವು ಸಕಲ ಪಾಪಗಳನ್ನೂ ನಾಶ ಮಾಡುತ್ತೇನೆಂಬ ಅಭಯವನ್ನು ಕೊಟ್ಟಿರುವ ಹಿಮಗಿರಿರಾಜನ ಅಭಯಹಸ್ತದಂತೆ ತೋರುತ್ತಿದ್ದಿತು. ಆ ಶೈಲದ ಅನೇಕ ಸ್ಥಳಗಳಲ್ಲಿ ಋಷ್ಯಾಶ್ರಮಗಳು ಕಂಗೊಳಿಸುತ್ತಲಿದ್ದುವು. ಇತರ ಮನುಷ್ಯರು ಆ ಸ್ಥಳಕ್ಕೆ ಬರಲು ಸಾಧ್ಯವಿಲ್ಲ. ಇಂತಹ ಪುಣ್ಯ ಪ್ರದೇಶದಲ್ಲಿ ಪುರೂರವನು ಹಿಂದಿನಜನ್ಮದಲ್ಲಿ ಮದ್ರರಾಜನಾಗಿ ಅವತರಿಸಿದ್ದ ಸಮಯದಲ್ಲಿ ಪರಮಾತ್ಮನ ಪರಮಾನುಗ್ರಹದಿಂದಲೇ ಆ ಆಶ್ರಮವನ್ನು ಪ್ರವೇಶಿಸಿ ತಪಸ್ಸು ಮಾಡಿದನು. ಆ ರಾಜನು ತಪಸ್ಸಿಗೆ ಕುಳಿತಿದ್ದ ಆ ಆಶ್ರಮವು ಶ್ರಮಪರಿಹಾರ ಮಾಡುವುದಾಗಿಯೂ ಮನೋಹರವಾದ ನೂರಾರು ಹೂವಿನ ಗಿಡಗಳಿಂದ ಸುಂದರವಾಗಿಯೂ

ಕೃತಂ ಚ ತತ್ಸ್ವಯಮಥ ಚಕ್ರಿಣಾ ಶುಭಂ
ಶುಭಪ್ರದಂ ತಂ ದದೃಶೇ ಸ ಮದ್ರರಾಟ್ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಹಾಶ್ರಮ ವರ್ಣನೋ ನಾಮ
ಏಕಪಂಚಾಶದುತ್ತರ ಶತತಮೋಽಧ್ಯಾಯಃ

---

ಇರುವಂತೆ ಅತ್ರಿಋಷಿಗಳಿಂದ ನಿರ್ಮಾಣಮಾಡಲ್ಪಟ್ಟಿದ್ದಾಗಿತ್ತು. ಇಂತಹ ಶುಭ
ಪ್ರದವಾದ ಪ್ರದೇಶವನ್ನು ಮದ್ರರಾಜನು ನೋಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಮಹಾಶ್ರಮ ವರ್ಣನವೆಂಬ
ಹೆಸರಿನ ಒಂದುನೂರ ಐವತ್ತೊಂದನೆಯ
ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ದ್ವಿಪಂಚಾಶದಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ತತ್ರ ಯೌ ತೌ ಮಹಾಶೃಂಗೌ ಮಹಾವರ್ಷಮಹಾಹಿಮೌ ।
ತೃತೀಯಂ ತು ತಯೋರ್ಮಧ್ಯೇ ಶೃಂಗಮತ್ಯಂತಮುಚ್ಛ್ರಿತಂ ॥ ೧ ॥

ನಿತ್ಯಾತಪಂ ತಪ್ತಶಿಲಂ ಸದಾ ಭಗತಿವರ್ಜಿತಂ ।
ತಸ್ಯಾಧಸ್ತಾದ್ದಕ್ಷಿಣೇ ದೇಶೇ ಭಾಗೇ ಚ ಪಶ್ಚಿಮೇ ॥ ೨ ॥

ಜಾತೀಲತಾಪರಿಕ್ಷಿಪ್ತಂ ವಿವರಂ ಚಾರುದರ್ಶನಂ ।
ದೃಷ್ಟ್ವೈವ ಕೌತುಕಾ ವಿಷ್ಟಸ್ತಂ ವಿವೇಶ ಮಹೀಪತಿಃ ॥ ೩ ॥

### ಒಂದು ನೂರ ಐವತ್ತೆರಡನೆಯ ಅಧ್ಯಾಯವು.

೧-೩ ಮಾರ್ಕಂಡೇಯನು ಹೇಳುತ್ತಾನೆ ---ಆ ಹಿಮಗಿರಿಯ ಮೇಲೆ ಮಹಾವರ್ಷದಿಂದಲೂ ಮಹಾಹಿಮಸಂತತಿಯಿಂದಲೂ ಕೂಡಿರುವ ಎರಡು ಶೃಂಗಗಳ ಮಧ್ಯದಲ್ಲಿ ಮತ್ತೊಂದು ಮೂರನೆಯ ಎತ್ತರವಾದ ಶಿಖರವು ಕಾಣುತ್ತಿರುವುದು. ಆ ಶಿಖರವು ನಿತ್ಯವೂ ಬಿಸಲಿನಿಂದ ಸುಡುತ್ತಿರುವುದು. ಅಲ್ಲಿರುವ ಕಲ್ಲುಗಳೂ ಸದಾ ಯಾವಾಗಲೂ ಕಾದು ಬಿಸಿಯಾಗಿರುವುವು ಅಲ್ಲಿ ನಕ್ಷತ್ರಸಂಚಾರವಿಲ್ಲ ಅದಕ್ಕೆ ಪಶ್ಚಿಮಭಾಗದ ಕೆಳಗಡ ದಕ್ಷಿಣ ದೇಶದಿದ ಅಲ್ಲೊಂದು ಗುಹೆಯಿದ ಆ ಗುಹೆಯ ಮುಂದೆ ಜಾಜೀಹೂವಿನ ಬಳ್ಳಿಯು ಹಬ್ಬಿದೆ ಅದನ್ನು ನೋಡಿ ಮದ್ರರಾಜನು ಸಂತೋಷಾಶ್ಚರ್ಯಗಳಿಂದೊಡಗೂಡಿದವನಾಗಿ ಆ ಪ್ರದೇಶಕ್ಕೆ ಬಂದನು

ತಮಸಾ ಚಾತಿನಿಬಿಡಂ ನಲ್ವಮಾತ್ರಂ ಮಹೀಪತಿಃ ।
ನಲ್ವಮಾತ್ರಮತಿಕ್ರಮ್ಯ ಸ್ವಪ್ರಭಾಭರಣೋಜ್ವಲಂ ॥ ೪ ॥

ಸಮುಚ್ಛ್ರಿತಮಥಾತ್ಯಂತಂ ಗಂಭೀರಂ ಪರಿವರ್ತುಲಂ ।
ನ ತತ್ರ ಸೂರ್ಯಸ್ತಪತಿ ನ ವಿರಾಜತಿ ಚಂದ್ರಮಾಃ ॥ ೫ ॥

ತಥಾಪಿ ದಿವಸಾಕಾರಂ ಪ್ರಾಕಾಶ್ಯಂ ತದಹರ್ನಿಶಂ ।
ಕ್ರೋಶಾಧಿಕಪರೀಮಾಣಂ ಸರಸಾ ಚ ವಿರಾಜಿತಂ ॥ ೬ ॥

ಸಮಂತಾತ್ಸರಸಸ್ತಸ್ಯ ಶೈಲಲಗ್ನಾ ತು ವೇದಿಕಾ ।
ಸೌವರ್ಣೈ ರಾಜತೈರ್ವೃಕ್ಷೈರ್ವಿದ್ರುಮೈರಪಿ ಶೋಭಿತಾ ॥ ೭ ॥

ನಾನಾಮಾಣಿಕ್ಯಕುಸುಮೈಃ ಸ್ವಪ್ರಭಾಭರಣೋಜ್ಜ್ವಲೈಃ ।
ತಸ್ಮಿನ್ಸರಸಿ ಪದ್ಮಾನಿ ಪದ್ಮರಾಗಚ್ಛದಾನಿ ಚ ॥ ೮ ॥

ವಜ್ರಕೇಸರಜಾಲಾನಿ ಸುಗಂಧೀನಿ ತಥಾಪ್ಯತಿ ।
ಪತ್ರೈರ್ಮರಕತೈರ್ನೀಲೈರ್ವೈಡೂರ್ಯೈಶ್ಚ ಮಹೀಪತೇ ॥ ೯ ॥

೪ ಅನಂತರ ಆ ಪಾತಾಳಗುಹೆಯು ಬಹು ಇದ್ದ ಗುಹೆಯು ಬಹು ಎರಡು ಅಲ್ಲಿ ನಾಲ್ಕುನೂರು ಹಸ್ತಮಾಣದವರೆಗೆ ಗಾಢಾಂಧಕಾರವು ವ್ಯಾಪಿಸಿತ್ತು ಆ ಕತ್ತಲೆಯನ್ನು ದಾಟಿ ಮದ್ರರಾಜನು ಮುಂದ ಹೋಗಿ ನೋಡಿದಾಗ ವಿಶೇಷವಾದ ಸ್ಥಳ ಕಾಣಿಸಿತು

೫-೧೮ ಆ ಪ್ರದೇಶವು ದುಂಡಗೂ ಗಂಭೀರವಾಗಿಯೂ ಬಹು ಎತ್ತರವಾಗಿಯೂ ಇತ್ತು ಅಲ್ಲಿ ಸೂರ್ಯನ ಬೆಳಕಾಗಲೀ, ಚಂದ್ರನ ಬೆಳದಿಂಗಳಾಗಲೀ ಇರಲಿಲ್ಲ ಈರೀತಿ ಸೂರ್ಯಚಂದ್ರರ ಬೆಳಕಿಲ್ಲದೆ ಇದ್ದರೂ ಆ ಸ್ಥಳದಲ್ಲಿ ಹಗಲೂ ರಾತ್ರಿಯೂ ಹಗಲು ಬೆಳಕಿರುವಂತೆ ಪ್ರಕಾಶಿಸುತ್ತ ಇತ್ತು ಆ ಬೆಳಕು ಹನ್ನೆರಡು ಮೈಲಿಗಿಂತಲೂ ದೂರವಾಗಿ ರಾರಾಜಿಸುತ್ತಲಿದ್ದ ಒಂದು ಮಹಾಸರೋವರದಿಂದ ಬಂದುದಾಗಿತ್ತು ಆ ಕೊಳದ ಸುತ್ತಲೂ ಬೆಟ್ಟಕ್ಕೆ ತಗಲಿ (ಸೇರಿ) ಕೊಂಡಿದ್ದಂತೆ ಜಗಲಿಗಳು ಕಾಣುತ್ತಿದ್ದುವು ಆ ಜಗಲಿಯ ಮೇಲೆ ಸುಖವಾಗಿ ಕುಳಿತು ತಪಸ್ಸು ಮಾಡಲು ಅನುಕೂಲವಾಗಿತ್ತು ಆ ವಿಧವಾದ ಸುತ್ತಲೂ ಪ್ರಸರಿಸಿದ ಜಗುಲಿಯ ಪಕ್ಕದಲ್ಲೆಲ್ಲೆಲ್ಲಿಯೂ ಚಿನ್ನ ಬೆಳ್ಳಿಯ ಮರಗಳೂ, ಹವಳದ ಮರಗಳೂ ಬೆಳೆದು ನಿಂತಿ

ಕರ್ಣಿಕಾಶ್ಚ ತಥಾ ಶ್ರೇಷ್ಠಾ ಜಾತರೂಪಸ್ಯ ಪಾರ್ಥಿವ ।
ತಸ್ಮಿನ್ಸರಸಿ ಯಥಾ ಭೂಮಿರ್ನಸಾ ಕರ್ದಮಸಂಕುಲಾ ॥ ೧೦ ॥

ನಾನಾರತ್ನೈರುಪಚಿತಾ ಜಲಜಾನಾಂ ಸಮಾಶ್ರಯಾ ।
ಕಪರ್ದಕಾನಾಂ ಶುಕ್ತೀನಾಂ ಶಂಖಾನಾಂ ಚ ಮಹೀಪತೇ ॥ ೧೧ ॥

ಮಕರಾಣಾಂ ಚ ಮತ್ಸ್ಯಾನಾಂ ಶೈಂಡಾನಾಂ ಕಚ್ಛಪೈಃ ಸಹ ।
ತತ್ರ ಮರಕತಖಂಡಾನಿ ವಜ್ರಾಣಿ ಚ ಸಹಸ್ರಶಃ ॥ ೧೨ ॥

ಪದ್ಮರಾಗೇಂದ್ರನೀಲಾನಿ ಮಹಾನೀಲಾನಿ ಪಾರ್ಥಿವ ।
ಪುಷ್ಯರಾಗಾಣಿ ರಮ್ಯಾಣಿ ತಥಾ ಕರ್ಕೇತಕಾನಿ ಚ ॥ ೧೩ ॥

ತುರೂಕಸ್ಯ ಚ ಖಂಡಾನಿ ತಥಾ ಶೇಷಸ್ಯ ಭಾಗಶಃ ।
ರಾಜಾವರ್ತ್ತಸ್ಯ ಮುಖ್ಯಸ್ಯ ರುಧಿರಾಖ್ಯಸ್ಯ ಚಾಪ್ಯಥ ॥ ೧೪ ॥

ಸೂರ್ಯೇಂದುಕಾಂತಯೋಶ್ಚೈವ ಪೀಲೋರ್ಭಲ್ಲಾತಕಸ್ಯ ಚ ।
ಜ್ಯೋತೀರಸಸ್ಯ ರಮ್ಯಸ್ಯ ಶಂಖಕಸ್ಯ ಚ ಭಾಗಶಃ ॥ ೧೫ ॥

ದ್ದುವು ಆ ಮರಗಳಲ್ಲಿ ನಾನಾ ವಿಧವಾದ ಮಾಣಿಕ್ಯವೆಂಬ ಕುಸುಮಗಳು ಬಿಟ್ಟು, ಅದರ ಪ್ರಭೆಯಿಂದ ಬೆಳಕು ಬಹುದೂರ ಪ್ರಸರಿಸಿತ್ತು ಆ ಮಹಾಸರೋವರದಲ್ಲಿ ಪದ್ಮರಾಗ ಮಣಿಯಂತೆ ಕಂಗೊಳಿಸುವ ಪದ್ಮಗಳು ವಿಪರೀತವಾಗಿ ಬೆಳೆದಿದ್ದುವು ಆ ಪದ್ಮಗಳು ವಜ್ರವೆಂಬ ದಂಟುಗಳಿಂದ ಕೂಡಿ ವಿಶೇಷವಾದ ಪರಿಮಳವನ್ನು ಸುತ್ತಲೂ ಸೂಸುತ್ತಿದ್ದುವು ಮತ್ತು ಆ ತಾವರೆಗಿಡಗಳಲ್ಲಿ ಮರಕತರತ್ನ, ವೈಡೂರ್ಯ, ನೀಲ ರತ್ನಗಳೆಂಬ ಎಲೆಗಳು ಬಿಟ್ಟಿದ್ದುವು ಮತ್ತು ಅವರ ಕರ್ಣಿಕೆಗಳು ಚಿನ್ನದ ರೇಖೆಗಳಾಗಿ ಕಂಗೊಳಿಸುತ್ತಿದ್ದುವು ಆ ಕೊಳದೊಳಗಿದರೆ ಕೆಸರೆಂಬುವುದು ಸುತರಾಂ ಇರಲೇ ಇಲ್ಲ ತಾವರೆಗಿಡಗಳಲ್ಲೆಲ್ಲಾ ನಾನಾ ವಿಧವಾದ ರತ್ನಗಳೇ ತುಂಬಿಕೊಂಡಿದ್ದುವು ತಾವರೆ-ಮೊಗ್ಗುಗಳೆಲ್ಲಾ ಶಂಖವಾಗಿಯೂ ಕಪ್ಪೆಚಿಪ್ಪುಗಳಾಗಿಯೂ ಕಾಣುತ್ತಿದ್ದುವು ಆಮೆ, ಮೊಸಳೆ, ಮೀನುಗಳಾವುವೆಂದರೆ ಮರಕತಗಳ ತುಂಡು, ವಜ್ರಗಳ ಹಿಂಡೆ, ಪದ್ಮರಾಗ ಮಣಿ, ಇಂದ್ರನೀಲಮಣಿಗಳ ಸಾವಿರಾರು ತುಂಡುಗಳೇ ಜಲಚರ ಪ್ರಾಣಿಗಳಾಗಿದ್ದುವು ಮತ್ತು ಆ ಸರೋವರದ ಯಾವ ಯಾವ ಭಾಗಗಳಲ್ಲಿ ನೋಡಿ, ನೀಲ ಪುಷ್ಯರಾಗದ ಬಂಡೆ, ರಾಜರತ್ನಗಳ ಮುದ್ದೆ, ಸ್ಫಟಿಕ ರತ್ನಗಳ ಚಪ್ಪಡಿ

ಮಸಾರಗವಲಂಕಾನಾಂ ಸ್ಫಟಿಕಸ್ಯ ತಥೈವ ಚ ।
ಗೋಮೇದಪಿತ್ತಕಾನಾಂ ಚ ಧೂಲೀ ಮರಕತಸ್ಯ ಚ ॥ ೧೬ ॥

ವೈಡೂರ್ಯಸೌಗಂಧಿಕಯೋಸ್ತಥಾ ರಾಜಮಣೇರ್ನೃಪ ।
ಖಂಡಸ್ಯ ಚೈವ ಮುಖ್ಯಸ್ಯ ತಥಾ ಬ್ರಹ್ಮಮಣೇರಪಿ ॥ ೧೭ ॥

ಮುಕ್ತಾಫಲಾನಾಂ ಮುಖ್ಯಾನಾಂ ತಾರಾವಿಗ್ರಹಧಾರಿಣಾಂ ।
ಸುಖೋಷ್ಣಂ ಚೈವ ತತ್ತೋಯಂ ಸ್ನಾನಾಚ್ಛೀತವಿನಾಶನಂ ॥ ೧೮ ॥

ವೈಡೂರ್ಯಸ್ಯ ಶಿಲಾಮಧ್ಯೇ ಸರಸಸ್ತಸ್ಯ ಶೋಭನಾ ।
ಪ್ರಮಾಣೇನ ತಥಾ ಸಾ ಚ ದ್ವೇ ಚ ರಾಜರ್ಧನುಃ ಶತೇ ॥ ೧೯ ॥

ಚತುರಸ್ರಾ ತಥಾ ರಮ್ಯಾ ತಪಸಾ ನಿರ್ಮಿತಾತ್ರಿಣಾ ।
ಬಿಲದ್ವಾರಸಮೋ ದೇಶೇ ಕೇತುಸ್ತತ್ರ ಹಿರಣ್ಮಯಃ ॥ ೨೦ ॥

---

ನಕ್ಷತ್ರರಾಶಿಗಳಂತೆ ಕಾಣುತ್ತಿದ್ದ ಮುತ್ತುಗಳ ರಾಶಿ, ಇವುಗಳೇ ತುಂಬಿಕೊಂಡಿದ್ದುವು ಆ ಸರೋವರದ ನೀರಾದರೋ ಬೆಚ್ಚಗೆ ಸ್ನಾನಮಾಡುವುದಕ್ಕೆ ಯೋಗ್ಯವಾಗಿತ್ತು ಆ ನೀರಿನಲ್ಲಿ ಸ್ನಾನಮಾಡಿದರೆ ಚಳಿಯೆಲ್ಲಾ ಅಡಗಿಹೋಗುತ್ತಿತ್ತು

೧೯-೨೧ ಆ ಕೊಳದ ಮಧ್ಯದಲ್ಲಿ ಮಂಗಳಕರವಾದ ಒಂದು ವೈಡೂರ್ಯದ ಕಲ್ಲಿದೆ. ಅದರ ಅಳತೆ ಇನ್ನೂರು ಧನುಸ್ಸಿನ ಪ್ರಮಾಣವಿದೆ ಅದು ಚಚ್ಚೌಕನಾಗಿದೆ ಇದು ಅತ್ರಿಮಹರ್ಷಿಗಳಿಂದ ತಪೋನಿರ್ಮಿತವಾದುದು ಬಿಲದ್ವಾರಕ್ಕೆ ಸಮನಾದ ಆ ಪ್ರದೇಶದಲ್ಲಿ ಒಂದು ಹಿರಣ್ಮಯ ದ್ವೀಪವಿದೆ ಅಲ್ಲಿ ಕೇತುವು ವಾಸವಾಗಿದ್ದಾನೆ ಮನೋಹರವಾದ ಆ ದ್ವೀಪದಲ್ಲಿ ಒಂದು ಪುಷ್ಕರಿಣಿಯು ಸಹ ಇದೆ ಅಲ್ಲಿ ತಂಪಾದ ಸಿಹಿ ನೀರಿದೆ ಅಲ್ಲಿ ಕಮಲ ಕಲ್ಹಾರಗಳು ವಿಶೇಷವಾಗಿವೆ ಆ ಕೊಳದ ನೀರು ಬಹು ಸುಗಂಧಮಯವಾಗಿಯೂ ಬಹು ರುಚಿಕರವಾಗಿಯೂ ಇದೆ ಈ ನೀರನ್ನು ಕುಡಿದರೆ ಹೊಟ್ಟೆ ತುಂಬುತ್ತದೆ. ಒಂದಾವರ್ತಿ ಇಲ್ಲಿನ ನೀರನ್ನು ಕುಡಿದ ಮನುಷ್ಯನ ದೇಹವು ಎಂದೆಂದಿಗೂ ಕುಗ್ಗುವುದಿಲ್ಲ ಮತ್ತು ಅವನು ಸರ್ವದಾ ಹೊಟ್ಟೆ ತುಂಬಿ ತೃಪ್ತನಾಗಿಯೇ ಇರುತ್ತಾನೆ. ಮತ್ತು ದೇಹಸೌಖ್ಯವನ್ನೂ ಸಹ ಹೊಂದಿರುತ್ತಾನೆ ಆ ಕೊಳದ ಮಧ್ಯದಲ್ಲಿ ಒಂದು ದಿವ್ಯವಾದ ಮಹಡಿಯ ಮನೆಯಿದೆ, ಅದನ್ನು ಅತ್ರಿ ಋಷಿಗಳೇ ತಾವು ಗಳಿಸಿದ ಸುಕೃತರಾಶಿಯಿಂದ ನಿರ್ಮಿಸಿರುತ್ತಾರೆ. ಆ ಮಹಡಿಗೆ ಹತ್ತುವ ಕಲ್ಲುಗಳೆಲ್ಲಾ ಚಿನ್ನದ ಕಲ್ಲುಗಳಾಗಿವೆ ಅದಕ್ಕೆ ರತ್ನಗಳನ್ನು ಕೆತ್ತಿದ್ದಾರೆ.

ಪ್ರದೇಶಃ ಸ ತು ರಾಜೇಂದ್ರ ದ್ವೀಪೇ ತಸ್ಮಿನ್ಮನೋಹರೇ ।
ತಥಾ ಪುಷ್ಕರಿಣೀರಮ್ಯಾ ತಸ್ಮಿನ್ರಾಜಂಚ್ಛಿಲಾತಲೇ ॥ ೨೦ ॥

ಸುಶೀತಾಮಲಪಾನೀಯಾ ಜಲಜೈಶ್ಚ ವಿರಾಜಿತಾ ।
ಆಕಾಶವಿಮಲಾ ರಾಜಂಶ್ಚತುರಸ್ರಾ ಮನೋಹರಾ ॥ ೨೨ ॥

ತಸ್ಯಾಸ್ತದುದಕಂ ಸ್ವಾದು ಲಘು ಶೀತಂ ಸುಗಂಧಿ ಚ ।
ನ ಕ್ಷೀಣೋಽತಿ ತಥಾ ಕಾಯಂ ಕುಕ್ಷಿಮಾಪೂರಯತ್ಯಪಿ ॥ ೨೩ ॥

ತೃಪ್ತಿಂ ವಿಧತ್ತೇಽಪರಮಾಂ ಶರೀರೇ ಚ ಮಹತ್ಸುಖಂ ।
ಮಧ್ಯೇ ಚ ತಸ್ಯಾಃ ಸುಕೃತಂ ಪ್ರಾಸಾದಂ ತಪಸಾ ತ್ರಿಣಾ ॥ ೨೪ ॥

ರುಕ್ಮಸೇತುಪ್ರವೇಶಂ ತತ್ಸರ್ವರತ್ನಮಯಂ ಶುಭಂ ।
ಶಶಾಂಕರಶ್ಮಿಸಂಕಾಶಂ ಪ್ರಾಸಾದಂ ರಾಜತಂ ಹಿತಂ ॥ ೨೫ ॥

ರಮ್ಯಂ ವೈಡೂರ್ಯಸೋಪಾನಂ ವಿದ್ರುಮಾಮಲತಾರಕಂ ।
ಇಂದ್ರನೀಲಮಹಾಚಕ್ರಂ ಜಾತರೂಪವಿಭೂಷಿತಂ ॥ ೨೬ ॥

ಪದ್ಮರಾಗಮಹಾಸ್ತಂಭಂ ತಥಾ ಮರಕತವೇದಿಕಂ ।
ವಜ್ರಾಂಶುಜಾಲೈಶ್ಛುರಿತಂ ರಮ್ಯಂ ದೃಷ್ಟಿಮನೋಹರಂ ॥ ೨೭ ॥

---

ಆ ಮಹಡಿಯು ಶಶಾಂಕನಾದ ಚಂದ್ರನಂತೆ ಬೆಳ್ಳಗಿರುವ ಬೆಳ್ಳಿಯ ಗೋಡೆಯಿಂದ ಕಟ್ಟಲಾಗಿದೆ ಆ ಮಹಡಿಯ ಮೇಲೆ ಇರುವ ಚಿಕ್ಕಮನೆಗಳ ಮೆಟ್ಟಲು ರಮ್ಯವಾದ ವೈಡೂರ್ಯದಿಂದ ನಿರ್ಮಿತವಾಗಿವೆ ಹವಳಗಳೆಂಬ ನಕ್ಷತ್ರ ಚಕ್ರಗಳಿಂದ ಅವು ಶೋಭಾಯಮಾನವಾಗಿವೆ ಆ ಸಭೆಯ ಅಂಗಣ ಮಧ್ಯದಲ್ಲಿ ಚಿನ್ನದ ಒಂದು ಚಕ್ರ ವನ್ನು ನಿರ್ಮಿಸಿ ಅದಕ್ಕೆ ಇಂದ್ರನೀಲಮಣಿಗಳನ್ನು ಹೂಳಿದ್ದಾರೆ. ಆ ಮಹಡಿಯ ಸಭಾಭವನವು (ಹಾಲ್) ಪದ್ಮರಾಗಗಳ ದೊಡ್ಡ ದೊಡ್ಡ ಕಂಭಗಳಿಂದ ಕೂಡಿದೆ ಅಲ್ಲಲ್ಲೇ ಮರಕತಮಯವಾದ ಜಗುಲಿಗಳನ್ನು ಕುಳಿತುಕೊಳ್ಳುವುದಕ್ಕಾಗಿ ನಿರ್ಮಾಣ ಮಾಡಿದ್ದಾರೆ ಆ ಭವನದ ಕಿಟಿಕಿಗಳಿಗೆಲ್ಲಾ ವಜ್ರದ ಕಿರಣಗಳಿಂದೊಡಗೂಡಿದ ಮನೋಹರವಾದ ತೆರಗಳನ್ನು ಬಿಟ್ಟಿದ್ದಾರೆ ಆ ಪ್ರಾಸಾದದಲ್ಲಿ ದೇವದೇವೋತ್ತಮ ನಾದ ಮಹಾವಿಷ್ಣುವು ಆದಿಶೇಷನೆಂಬ ಹಾಸಿಗೆಯ ಮೇಲೆ ಮಲಗಿರುತ್ತಾನೆ ಸರ್ವಾ

ಪ್ರಾಸಾದೇ ತತ್ರ ಭಗವಾನ್ದೇವದೇವೋ ಜನಾರ್ದನಃ ।
ಭೋಗಿಭೋಗಾವಲೀಸುಪ್ತಃ ಸರ್ವಾಲಂಕಾರಭೂಷಿತಃ ॥ ೨೮ ॥

ಜಾನುಮಾಕುಂಚಿತಂತ್ವೇಕಂ ದೇವದೇವಸ್ಯ ಚಕ್ರಿಣಃ ।
ಫಣೀಂದ್ರಸನ್ನಿವಿಷ್ಟಾಂಘ್ರಿರ್ದ್ವಿತೀಯಶ್ಚ ತಥಾ ನೃಪ ॥ ೨೯ ॥

ಲಕ್ಷ್ಮ್ಯುತ್ಸಂಗಗತಾಂಘ್ರಿಸ್ತು ಶೇಷಭೋಗಪ್ರಸಾರಿತಃ ।
ಫಣೀಂದ್ರಭೋಗವಿನ್ಯಸ್ತಬಾಹುಕೂರ್ಪರಶೋಭಿತಃ ॥ ೩೦ ॥

ಸ್ವಾಂಗುಲೀಪೃಷ್ಠವಿನ್ಯಸ್ತ ದೇವಶೀರ್ಷಧರಂ ವಿಭುಂ ।
ಏಕಂ ತು ದೇವದೇವಸ್ಯ ದ್ವಿತೀಯಂ ಸಂಪ್ರಸಾರಿತಂ ॥ ೩೧ ॥

ಸಮಾಕುಂಚಿತಜಾನುಸ್ಥಮಣಿಬಂಧಸುಶೋಭಿತಂ ।
ಕಿಂಚಿದಾಕುಂಚಿತಂ ಚೈವ ನಾಭಿದೇಶೇ ಕರಸ್ಥಿತಂ ॥ ೩೨ ॥

ತೃತೀಯಂ ಚ ಭುಜಂ ತಸ್ಯ ಚತುರ್ಥಂ ತು ತಥಾ ಶೃಣು ।
ಆತ್ತಸಂತಾನಕುಸುಮಂ ಘ್ರಾಣದೇಶಾನುಸರ್ಪಿಣಂ ॥ ೩೩ ॥

ಲಂಕಾರಭೂಷಿತನಾದ ಪರಮಾತ್ಮನು ತನ್ನ ಒಂದು ಕಾಲನ್ನು ಮಡಿಚಿ ಕೊಂಡು ಅಲ್ಲಿ ಮಲಗಿದ್ದಾನೆ. ಇನ್ನೊಂದು ಕಾಲನ್ನು ನೀಡಿಕೊಂಡಿದ್ದಾನೆ. ಆ ಕಾಲಿನ ಬಳಿ ಮಹಾಲಕ್ಷ್ಮಿಯು ಕುಳಿತು ಆ ಕಾಲನ್ನು ತನ್ನ ತೊಡೆಯ ಮೇಲಿಟ್ಟು ಕೊಂಡು ಹಿತವಾಗಿ ಒತ್ತುತ್ತಿದ್ದಾಳೆ. ಆದಿಶೇಷನ ಹೆಡೆಗಳು ಅರಳಿವೆ. ಅದರ ಮೇಲೆ ಭಗವಂತನು ತನ್ನ ಒಂದು ತೋಳನ್ನು ಪ್ರಸರಿಸಿದ್ದಾನೆ. ಮತ್ತೊಂದು ತೋಳನ್ನು ತಲೆದಿಂಬಾಗಿ ಮಾಡಿಕೊಂಡಿದ್ದಾನೆ.

೨೮-೩೩ ಆ ಮಹಾವಿಷ್ಣುವು ಮಡಿಸಿಕೊಂಡು ಮಲಗಿರುವ ಮೊಣಕಾಲಿನ ಮೇಲೆ ಒಂದು ಕೈಯನ್ನೂ ಇನ್ನೊಂದು ಕೈಯನ್ನು ಹೊಕ್ಕಳ ಬಳಿಯಲ್ಲಿ ಇಟ್ಟು ಕೊಂಡು ಮಲಗಿದ್ದನು. ಆತನ ನಾಭೀಕಮಲದಿಂದ ಬ್ರಹ್ಮನೆಂಬ ಸಂತಾನವೆಂಬ ಕುಸುಮವು ಜನಿಸಿ ಶೋಭಿಸುತ್ತಿತ್ತು. ಮಹಾಲಕ್ಷ್ಮಿಯು ಅರಳಿದ ತಾವರೆಗಳಂ ತಿದ್ದ ತನ್ನ ಕರಪಲ್ಲವಗಳಿಂದ ಮಹಾವಿಷ್ಣುವಿನ ಪಾದಾರವಿಂದವನ್ನೊತ್ತುತ್ತಿದ್ದಳು. ಆ ಮಹಾಸ್ವಾಮಿಯು ಕೈಬೆರಳುಗಳಲ್ಲಿ ದಿವ್ಯರತ್ನಖಚಿತವಾದ ಉಂಗುರಗಳನ್ನೂ ಬಾಹುಗಳಲ್ಲಿ ಭುಜ ಭೂಷಣವನ್ನು ಇಟ್ಟುಕೊಂಡು ಶೋಭಿಸುತ್ತಿದ್ದನು. ಫಣಾ

ಲಕ್ಷ್ಮ್ಯೈ ಸಂಪಾದ್ಯಮಾನಾಂಘ್ರಿಃ ಪುಲ್ಲಪದ್ಮನಿಭೈಃ ಕರೈಃ ।
ಸಂತಾನಮಾಲಾಮುಕುಟಂ ಹಾರಕೇಯೂರಭೂಷಿತಂ ॥ ೩೪ ॥

ಭೂಷಿತಂ ಚ ತಥಾ ದೇವಮಂಗದೈರಂಗುಲೀಯಕೈಃ ।
ಫಣೀಂದ್ರಫಣವಿನ್ಯಸ್ತಚಾರುರತ್ನಶಿಖೋಜ್ವಲಂ ॥ ೩೫ ॥

ಅಜ್ಞಾತವಸ್ತು ಚರಿತಂ ಪ್ರತಿಷ್ಠಿತಮಧ್ಯಾತ್ರಿಣಾ ।
ಸಿದ್ಧಾಂತಪೂಜ್ಯಂ ಸತತಂ ಸಮಂತಾತ್ಕುಸುಮಾರ್ಚಿತಂ ॥ ೩೬ ॥

ದಿವ್ಯಗಂಧಾವಲಿಪ್ತಾಂಗಂ ದಿವ್ಯಧೂಪೇನ ಧೂಪಿತಂ ।
ಗೋರಸೈಃ ಸಫಲೈರ್ಹೃದ್ಯೈಃ ಸಿದ್ಧೈರುಪಹೃತೈಃ ಸದಾ ॥ ೩೭ ॥

ಸುಶೋಭಿತಂ ಪುರಃಪಾರ್ಶ್ವಂ ದೇವಮುತ್ತಮಶೀರ್ಷಕಂ ।
ತಥಾ ಪಶ್ಚಾನ್ಮುಖಂ ದೃಷ್ಟ್ವಾ ವವಂದೇ ಸ ನರಾಧಿಪಃ ॥ ೩೮ ॥

ಜಾನುಭ್ಯಾಂ ಶಿರಸಾ ಚೈವ ಗತ್ವಾ ಭೂಮಿಂ ಯಥಾವಿಧಿ ।
ನಾಮ್ನಾಂ ಸಹಸ್ರೇಣ ತಥಾ ತುಷ್ಟಾವ ಮಧುಸೂದನಂ ॥ ೩೯ ॥

---

ರಾಜನಾದ ಆದಿಶೇಷನ ಐದು ಹೆಡೆಗಳಲ್ಲೂ ಇರುವ ರತ್ನಗಳ ಕಾಂತಿಯು ಎಲ್ಲ ಕಡೆಗಳಲ್ಲೂ ಪ್ರಸರಿಸಿದ್ದಿತು.

ಅತ್ರಿಮಹರ್ಷಿಗಳು ಕಾಣದೇ ಕೇಳದೇ ಇದ್ದ ವಿಚಿತ್ರ ವಸ್ತುಗಳನ್ನೆಲ್ಲಾ ತಂದು ಈ ಸನ್ನಿವೇಶವನ್ನು ಕಲ್ಪಿಸಿದ್ದರು. ಈ ಪರಮಾತ್ಮನ ಸುತ್ತಲೂ ಭಕ್ತಾದಿಗಳು ತುಂಬಿಕೊಂಡಿದ್ದರು. ಎಲ್ಲ ಕಡೆಗಳಿಂದಲೂ ಪುಷ್ಪಗಳ ಪೂಜೆಯು ನಡೆಯುತ್ತಿತ್ತು. ದಿವ್ಯಗಂಧವನ್ನು ಮಹಾಸ್ವಾಮಿಯ ಮೈಗೆ ಅನೇಕರು ಲೇಪಿಸುತ್ತಿದ್ದರು. ದಿವ್ಯಧೂಪಗಳಿಂದ ಉತ್ಪತ್ತಿಯಾದ ಧೂಪದ ವಾಸನೆಯು ಅಲ್ಲಿ ವ್ಯಾಪಿಸಿಕೊಂಡಿತ್ತು. ಅಲ್ಲಿಗ ಸಿದ್ಧಪುರುಷರು ಒಂದು ಹಸುವಿನ ಹಾಲು, ಹಸುವಿನ ಮೊಸರು, ತುಪ್ಪ ಮುಂತಾದುವುಗಳನ್ನು ಸ್ವಾಮಿಗೆ ಸಮರ್ಪಿಸುತ್ತಿದ್ದರು. ಭಗವಂತನು ಮುಂದುಗಡೆ ತಲೆಯನ್ನೂ ಹಿಂದುಗಡೆ ಮುಖವನ್ನೂ ಮಾಡಿಕೊಂಡು ಅಲ್ಲಿ ಮಲಗಿದ್ದನು. ಹೀಗಿದ್ದ ಮಹಾಪುರುಷನ ಮುಖದ ಸಮೀಪಕ್ಕೆ ಬಂದು ಮದ್ರರಾಜನು ಸಾಷ್ಟಾಂಗವಾಗಿ ನಮಸ್ಕಾರಮಾಡಿ ಆ ಸ್ವಾಮಿಯ ಮುಂದೆ ನಿಂತುಕೊಂಡು ವಿಷ್ಣು ಸಹಸ್ರನಾಮ ಸ್ತೋತ್ರದಿಂದ ಸ್ವಾಮಿಯನ್ನು ಸ್ತೋತ್ರಮಾಡಿದನು. ಸ್ತೋತ್ರಾನಂತರದಲ್ಲಿ ಪ್ರದ

ಪ್ರದಕ್ಷಿಣಮಥೋ ಚಕ್ರೇ ಸ ತುಷ್ಟಾವ ಪುನಃಪುನಃ ।
ರಮ್ಯಮಾಯತನಂ ದೃಷ್ಟ್ವಾ ತತ್ರೋವಾಸಾಶ್ರಮೋ ನೃಪಃ ॥ ೪೦ ॥

ವಿಶಾಲಾಂ ಹಿ ಗುಹಾಂ ಕಾಂಚಿದಾಶ್ರಿತ್ಯ ಸುಮನೋಹರಾಂ ।
ತಪಶ್ಚಚಾರ ತತ್ರೈವ ಪೂಜಯಾನೋ ಜನಾರ್ದನಂ ॥ ೪೧ ॥

ನಾನಾವಿಧೈಃ ಸದಾ ಪುಷ್ಪೈಃ ಫಲೈರ್ಮೂಲೈಃ ಸ ಗೋರಸೈಃ ।
ನಿತ್ಯಂ ತ್ರಿಷವಣಸ್ನಾಯೀ ವಹ್ನಿಪೂಜಾಪರಾಯಣಃ ॥ ೪೨ ॥

ದೇವವಾಪೀ ಜಲೈಃ ಕುರ್ವನ್ಸತತಂ ಪ್ರಾಣಧಾರಣಂ ।
ಸರ್ವಾಹಾರಪರಿತ್ಯಾಗಂ ಸ ಕೃತ್ವಾ ಮನುಜೇಶ್ವರಃ ॥ ೪೩ ॥

ಅನಾಶ್ರಿತಗುಹಾಶಾಯೀ ಕಾಲಂ ನಯತಿ ಪಾರ್ಥಿವಃ ।
ತ್ಯಕ್ತಾಹಾರಕ್ರಿಯಸ್ಯಾಸ್ಯ ಕೇವಲಾಂಭೋಽಶಿನಸ್ತಥಾ ।
ಗ್ಲಾನಿಸ್ತಸ್ಯ ಸಮಾಯಾತಿ ನ ಶರೀರೇ ತದದ್ಭುತಂ ॥ ೪೪ ॥

ಕ್ಷಿಣೆಮಾಡಿ ನಮಸ್ಕಾರಮಾಡಿದನು. ಹೀಗೆ ಅನೇಕ ಬಾರಿ ನಮಸ್ಕರಿಸಿದ ಬಳಿಕ ಆ ಪ್ರಾಸಾದದಲ್ಲೇ ವಾಸಮಾಡಿಕೊಂಡಿದ್ದು, ಆ ಬಳಿಕ ಅಲ್ಲಿಯೇ ಶೋಭಿಸುತ್ತಿದ್ದ ಒಂದು ವಿಶಾಲವಾದ ಗುಹೆಯನ್ನು ಕಂಡು ಅದರೊಳಹೊಕ್ಕು ಸ್ವಾಮಿಯನ್ನು ಕುರಿತು ತಪಸ್ಸು ಮಾಡುತ್ತಾ ಪ್ರತಿದಿನವೂ ಸ್ವಾಮಿಯನ್ನು ಪೂಜಿಸಲಾರಂಭಿಸಿದನು. ಆ ಪ್ರದೇಶದಲ್ಲಿ ದೊರೆಯುವ ದಿವ್ಯಕುಸುಮಗಳಿಂದರ್ಚಿಸುತ್ತಾ ದಿವ್ಯಫಲಗಳನ್ನು ನಿವೇದನ ಮಾಡುತ್ತಾ, ಪ್ರತಿದಿವಸವೂ ತ್ರಿಕಾಲಸ್ನಾನಮಾಡುತ್ತಾ, ತ್ರಿಕಾಲ ಸಂಧ್ಯಾ ಅಗ್ನಿ ಪೂಜೆಗಳನ್ನು ಮಾಡುತ್ತಾ, ಅಲ್ಲಿದ್ದೊಂದು ದೇವತಾರ್ಹವಾದ ಭಾವಿಯ ನೀರಿನಿಂದ ಪ್ರಾಣಧಾರಣೆಮಾಡಿಕೊಂಡಿದ್ದನು. ಈ ರೀತಿ ಆ ದೊರೆಯು ಸಕಲ ವಿಧವಾದ ಆಹಾರವನ್ನು ತ್ಯಾಗಮಾಡಿ ಗುಹೆಯಲ್ಲಿ ಮಲಗಿ ನಿದ್ರಿಸುತ್ತಾ ಕಾಲಗಳೆಯುತ್ತಿದ್ದನು. ಈರೀತಿ ಆ ರಾಜನು ಆಹಾರವಿಲ್ಲದೆ ಬರೀ ನೀರನ್ನು ಕುಡಿಯುತ್ತಿದ್ದಾಗ್ಯೂ ಅವನಿಗೆ ಸ್ವಲ್ಪವೂ ಆಯಾಸವಿರಲಿಲ್ಲ. ದೇಹವು ಕುಗ್ಗಿರಲಿಲ್ಲ. ಹಸಿವಾಗುತ್ತಿರಲಿಲ್ಲ. ಇದೇನ ಆಶ್ಚರ್ಯವಲ್ಲವೆ? ಆ ಸ್ಥಳಮಹಿಮೆಯೇ ಅಂತಹದ. ಈರೀತಿ ಆ ಮದ್ರರಾಜನು

**ಏವಂ ಸ ರಾಜಾ ತಪಸಿ ಪ್ರಸಕ್ತಃ**
**ಸಂಪೂಜಯನ್ ದೇವವರಂ ಸದೈವ ।**
**ತತ್ರಾಶ್ರಮೇ ಕಾಲಮುವಾಸ ಕಂಚಿ**
**ತ್ಸ್ವರ್ಗೋಪಮೇ ದುಃಖಮವಿಂದಮಾನಃ** ॥ ೪೫ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಆಶ್ರಮವರ್ಣನೋ ನಾಮ ದ್ವಿಪಂಚಾಶ**
**ದಧಿಕ ಶತತಮೋಽಧ್ಯಾಯಃ**



ಸ್ವರ್ಗೋಪಮವಾದ ಆ ಪ್ರದೇಶದಲ್ಲಿ ಯಾವ ಆಲೋಚನೆಯನ್ನು ಇಡದೆ ಭಗವಂತನನ್ನು ಪೂಜಿಸುತ್ತಾ ಕೆಲವು ವರ್ಷಗಳ ಕಾಲವನ್ನು ಕಳೆದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಆಶ್ರಮವರ್ಣನೆಯೆಂಬ
ಹೆಸರಿನ ಒಂದು ನೂರಐವತ್ತೆರಡನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರಿಪಂಚಾಶದಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಗತ್ವಾಶ್ರಮಪದೇ ರಾಜಾ ತ್ಯಕ್ತಾಹಾರಪರಿಚ್ಛದಃ ।
ಕ್ರೀಡಾವಿಹಾರೈರ್ಗಂಧರ್ವೈಃ ಪಶ್ಯತ್ಯಪ್ಸರಸಸ್ಸಹ ॥ ೧ ॥

ಕೃತ್ವಾ ಪುಷ್ಪೋಚ್ಚಯಂ ಭೂರಿ ಗ್ರಥಯಿತ್ವಾ ತಥಾ ಸ್ರಜಃ ।
ಅಗ್ರೇ ನಿವೇದ್ಯ ದೇವಾಯ ಗಂಧರ್ವೇಭ್ಯಸ್ತಥಾ ದದೌ ॥ ೨ ॥

ಪುಷ್ಪೋಚ್ಚಯಪ್ರಸಕ್ತಾನಾಂ ಕ್ರೀಡಂತೀನಾಂ ಯಥಾಸುಖಂ ।
ಚೇಷ್ಟಾ ನಾನಾವಿಧಾಕಾರಾಃ ಪಶ್ಯನ್ನಪಿ ನ ಪಶ್ಯತಿ ॥ ೩ ॥

### ಒಂದುನೂರ ಐವತ್ತಮೂರನೆಯ ಅಧ್ಯಾಯವು.

೧-೩ ಮಾರ್ಕಂಡೇಯನು ಹೇಳುತ್ತಾನೆ :— ಆ ಆಶ್ರಮದಲ್ಲಿ ತಪಸ್ಸು ಮಾಡುತ್ತಿದ್ದಾಗ ಆ ರಾಜನು ಪ್ರತಿದಿವಸವೂ ಆಹಾರವನ್ನು ತ್ಯಾಗಮಾಡಿ, ಕ್ರೀಡಾ ವಿಹಾರಕ್ಕಾಗಿ ಅಪ್ಸರಸ್ತ್ರೀಯರೊಡನೆ ಆ ಸ್ಥಳಕ್ಕೆ ಬರುತ್ತಿದ್ದ ಗಂಧರ್ವರ ಗುಂಪನ್ನು ನೋಡುತ್ತಲಿದ್ದನು. ಆಗ ಆ ರಾಜನು ಪ್ರತಿದಿನವೂ ದಿವ್ಯವಾದ ಕುಸುಮಗಳನ್ನು ಕುಯ್ದು ಒಳ್ಳೊಳ್ಳೆಯ ಮಾಲೆಗಳನ್ನು ಮಾಡಿ ಮೊದಲು ಅದನ್ನು ದೇವರಿಗೊಪ್ಪಿಸಿ ಆ ಬಳಿಕ ಆ ಹೂಗಳನ್ನು ಗಂಧರ್ವರಿಗೆ ಕೊಡುತ್ತಿದ್ದನು. ಅವರೆ ಅಪ್ಸರನಾರಿಯರೊಡನೆ ಅನೇಕ ಆಟಗಳನ್ನಾಡುತ್ತಿದ್ದಾಗ್ಯೂ ಅದನ್ನು ನೋಡಿದರೂ ನೋಡದ ಇದ್ದವನಂತೆ ಇರುತ್ತಿದ್ದನು

ಕಾಶ್ಚಿತ್ಪುಷ್ಪೋಚ್ಚಯೇ ಸಕ್ತಾ ಲತಾಜಾಲೇನ ವೇಷ್ಟಿತಾಃ ।
ಸಖೀಜನೇನ ಸಂತ್ಯಕ್ತಾಃ ಕಾಂತೇನ ಪರಿಮೋಕ್ಷಿತಾಃ ॥ ೪ ॥

ಮಕರಂದಸಮಾಕ್ರಾಂತನಯನಾಃ ಕಾಶ್ಚಿದಂಗನಾಃ ।
ಕಾಂತನಿಃಶ್ವಾಸವಾತೇನ ನೀರಜಸ್ಕೀಕೃತೇಕ್ಷಣಾಃ ॥ ೫ ॥

ಕಾಚಿದುಚ್ಚಿತ್ಯ ಪುಷ್ಪಾಣಿ ದದೌ ಕಾಂತಸ್ಯ ಭಾಮಿನೀ ।
ಕಾಂತಸಂಗ್ರಥಿತೈಶ್ಚೈವ ರರಾಜ ಕೃತಶೇಖರಾ ॥ ೬ ॥

ಸ್ವಯಮುಚ್ಚಿತ್ಯ ಸಂಗ್ರಂಥ್ಯ ಕಾಂತೇನಕೃತಶೇಖರಾ ।
ಕೃತಕೃತ್ಯಮಿವಾತ್ಮಾನಂ ಮೇನೇ ಮನ್ಮಥವರ್ಧಿನೀ ॥ ೭ ॥

ಅನ್ಯಸ್ಮಿನ್ಗಹನೇ ಕುಂಜೇ ವಿಶೇಷಕುಸುಮಾ ಲತಾ ।
ಕಾಚಿದೇವಂ ರಹೋ ನೀತಾ ರಮಣೇನ ರಿರಂಸುನಾ ॥ ೮ ॥

೪-೬ ಗಂಧರ್ವರ ಜಲಕ್ರೀಡಾವರ್ಣನೆ --ಆದಿಪ್ರೇಮವನದಲ್ಲಿ ಹೂವನ್ನು ಕೊಯ್ಯುತ್ತಿದ್ದ ಕೆಲವು ಮಂದಿ ಅಪ್ಸರಸ್ತ್ರೀಯರನ್ನು ಕೆಲವು ಮಂದಿ ಸಖಿಯರು ಹಿಂದುಗಡೆಯಿಂದ ಬಂದು ಅವರು ಕಾಣದಂತೆ ಬಳ್ಳಿಗಳಿಂದ ಕಟ್ಟಿ ಹೊರಟುಹೋಗುತ್ತಿದ್ದರು ತರುವಾಯ ಅವರವರ ಕಾಂತರೇ ಬಂದು ಬಿಚ್ಚುತ್ತಿದ್ದರು. ಕೆಲವು ಮಂದಿ ಅಪ್ಸರನಾರಿಯರು ಪುಷ್ಪರಸದಲ್ಲಿ ತಗಲಿಕೊಂಡ ನೇತ್ರವುಳ್ಳವರಾಗಿದ್ದು ತಮ್ಮ ಕಾಂತರ ನಿಶ್ವಾಸ ವಾಯುವಿನಿಂದ ಎಚ್ಚರಗೊಂಡವರಾಗಿ ದೃಷ್ಟಿಯನ್ನು ಕಾಂತರ ಕಡೆಗೆ ತಿರುಗಿಸುತ್ತಿದ್ದಳು ಒಬ್ಬಳು ಅಪ್ಸರಸ್ತ್ರೀಯು ಹೂಗಳನ್ನು ಬಿಡಿಸಿ ಗಂಡನ ಕೈಗೆ ಕೊಡುತ್ತಿದ್ದಳು ಕಾಂತನಿಂದ ಕೊಡಲ್ಪಟ್ಟ ಆ ಕಟ್ಟಿದ ಹೂಗಳನ್ನು ಆ ಕಾಂತೆಯು ತಲೆಗೆ ಮುಡಿದುಕೊಳ್ಳುತ್ತಲಿದ್ದಳು.

೭-೮ ಕಾಮವನ್ನು ತ್ತೇಜನಗೊಳಿಸುವ ಅಪ್ಸರನಾರಿಯೋರ್ವಳು ಹೂಗಳನ್ನು ತಾನೇ ಕೊಯ್ದು ತಾನೇ ಕಟ್ಟಿ ಕಾಂತನಿಗೆ ಕೊಡುವಳು ಆ ಕಾಂತನು ಆ ಹೂಮಾಲೆಯನ್ನು ಅವಳ ತಲೆಗೆ ಮುಡಿಸಿದುದನ್ನು ನೋಡಿ ಆ ಸುಂದರಿಯು ತಾನೇ ಧನ್ಯಳೆಂದು ಭಾವಿಸಿಕೊಳ್ಳುತ್ತಿದ್ದಳು ಇಲ್ಲಿ ಬಾ! ಇಲ್ಲೊಂದು ಪ್ರದೇಶದಲ್ಲಿ ವಿಶೇಷವಾದ ತರಹೆಯ ಹೂಗಳ ಬಳ್ಳಿಯಿದೆ ಅದನ್ನು ತರೋಣವೆಂದು ಹೇಳಿ ಒಬ್ಬ ಗಂಧರ್ವನು ತನ್ನ ಕಾಂತೆಯನ್ನು ಸಂಭೋಗೇಚ್ಛೆಯಿಂದ ರಹಸ್ಯವಾದ ಸ್ಥಳಕ್ಕೆ ಕರೆದುಕೊಂಡು

ಕಾಂತಸಂನಾಮಿತಲತಾಕುಸುಮಾನಿ ವಿಚಿನ್ವತೀ ।
ಸರ್ವಾಭ್ಯಃ ಕಾಚಿದಾತ್ಮಾನಂ ಮೇನೇ ಸರ್ವಗುಣಾಧಿಕಂ ॥ ೯ ॥

ಕ್ವಚಿತ್ಪಶ್ಯತಿ ಭೂಪಾಲೋ ನಲಿನೀಷು ಪೃಥಕ್ಪೃಥಕ್ ।
ಕ್ರೀಡ್ಯಮಾನಾಸ್ತು ಗಂಧರ್ವೈರ್ದೇವರಾಮಾ ಮನೋರಮಾಃ ॥ ೧೦ ॥

ಕಾಚಿಚ್ಚಾತಾಡಯತ್ಕಾಂತಮುದಕೇನ ಶುಚಿಸ್ಮಿತಾ ।
ತಾಡ್ಯಮಾನಾ ತಥೈವಾನ್ಯಾ ಕಾಂತೇನ ರತಿಮಾಯಯೌ ॥ ೧೧ ॥

ಕಾಂತಾ ತು ತಾಡಯಾಮಾಸ ಜಾತಖೇದಾ ವರಾಂಗನಾ ।
ಅದೃಶ್ಯತ ವರಾರೋಹಾ ಶ್ವಾಸನೃತ್ಯತ್ಪಯೋಧರಾ ॥ ೧೨ ॥

ಕಾಂತಾಂಬುತಾಡನಭ್ರಷ್ಟಕೇಶಪಾಶನಿಬಂಧನಾ ।
ಶ್ವಾಸಾಕುಲಮುಖೀ ಭಾತಿ ಮಧುಪೈರಿವ ಪದ್ಮಿನೀ ॥ ೧೩ ॥

ಹೋಗುತ್ತಿದ್ದನು ಇನ್ನೊಬ್ಬಳು ಕಾಂತನೊಡನೆ ಪುಷ್ಪಾವಚಯಕ್ಕೆ ಹೋಗಿ ತ(?) ಕಾಂತನು ಒಂದು ಒಳ್ಳೆಯದನ್ನು ಒಗ್ಗಿಸಿ, ಇಲ್ಲಿ ನೋಡು ! ಎಷ್ಟು ಸೊಗಸಿದೆ ! ಅದನ್ನು ಬಿಡಿಸೆಂದು ಹೇಳುತ್ತಿದ್ದುದನ್ನು ನೋಡಿ, ತಾನು ಎಲ್ಲ ಅಪ್ಸರನಾರಿಯರಿಗಿಂತಲೂ ಸರ್ವಗುಣಾಧಿಕಳೆಂದು ತನ್ನಷ್ಟಕ್ಕೆ ತಾನೇ ಹಿಗ್ಗಿಹೋಗುತ್ತಿದ್ದಳು

೧೦-೧೧ ಆ ಮದ್ರರಾಜನು ಒಂದು ಕಡೆಯಲ್ಲಿ ಬೇರೆ ಬೇರೆಯಾಗಿ ವಿಹರಿಸುತ್ತಿದ್ದ ಗಂಧರ್ವದಂಪತಿಗಳನ್ನು ನೋಡಿದನು ಒಬ್ಬಳು ಅಪ್ಸರಸೆಯು ತನ್ನ ಕಾಂತನನ್ನು ಹುಸಿನಗೆಯಿಂದ ನೋಡುತ್ತಾ ನೀರೆರಚಿದಳು ಇನ್ನೊಬ್ಬ ಅಪ್ಸರಾಂಗನೆಯು ಗಂಡನ ನೀರೆರಚುವಿಕೆಯಿಂದುಂಟಾದ ಆನಂದದಿಂದ ಅತ್ಯಂತವಾಗಿ ಸುಖಪಟ್ಟಳು

೧೨ ಒಬ್ಬಳು ಕಾಂತೆಯು ಗಂಡನ ಮೇಲೆ ಖೇದವನ್ನು ಹೊಂದಿ ಅವನನ್ನು ಹೊಡೆದಳು ಅವಳು ಹೊಡೆಯುವಾಗ ಅವಳು ಬಿಡುತ್ತಿದ್ದ ನಿಶ್ವಾಸದೊಡನೆ ಅವಳ ಕುಚಗಳೂ ಕುಣಿಯುತ್ತಿದ್ದುವು

೧೩ ಮತ್ತೊರ್ವ ಅಪ್ಸರಸೆಯು ತನ್ನ ಕಾಂತನಿಂದುಂಟಾದ ಉದಕತಾಡನ (ನೀರಾಟ) ದಿಂದ ಜಡೆ (ತುರುಬು) ಬಿಚ್ಚಿಹೋಗಲಾಗಿ ಬೇಗ ಬೇಗ ಉಸಿರು ಬಿಡುತ್ತಿರುವುದನ್ನು ನೋಡಿದರೆ ತಾವರೇಕಮಲಕ್ಕೆ ಭ್ರಮರಗಳು ಮುತ್ತಿಕೊಂಡಂತೆ ತೋರುತ್ತಿತ್ತು

ಸ್ವವಕ್ತ್ರಸದೃಶೈಃ ಪುಷ್ಪೈಃ ಸಂಛನ್ನನಲಿನೀವನೇ ।
ಛನ್ನಾ ಕಾಚಿಚ್ಚಿರಾತ್ಪ್ರಾಪ್ತಾ ಕಾಂತೇನಾನ್ವಿಷ್ಯ ಯತ್ನತಃ ॥ ೧೪ ॥

ಸ್ನಾತಾ ಶೀತಾಪದೇಶೇನ ಕಾಚಿತ್ಪ್ರೌಢಾಂಗನಾ ಭೃಶಂ ।
ರಮಣಾಲಿಂಗನಂ ಚಕ್ರೇ ಮನೋಽಭಿಲಷಿತಂ ಚಿರಂ ॥ ೧೫ ॥

ಜಲಾರ್ದ್ರಂ ವಸನಂ ಸೂಕ್ಷ್ಮಮಂಗಲೀನಂ ಶುಚಿಸ್ಮಿತಾ ।
ಧಾರಯಂತೀ ಜನಂ ಚಕ್ರೇ ಕಾಚಿತ್ತತ್ರ ಸಮನ್ಮಥಂ ॥ ೧೬ ॥

ಗಂಧಮಾಲ್ಯಗುಣೈಃ ಕಾಚಿತ್ಕಾಂತೇನಾಕೃಷ್ಯ ಚಾಂಭಸಿ ।
ತ್ರುಟ್ಯೈತ್ಸ್ರಗ್ದಾಮಪತಿತಂ ರಮಣಂ ಪ್ರಾಹಸಚ್ಚಿರಂ ॥ ೧೭ ॥

ಕಾಚಿನ್ಮಗ್ನಸಖೀದತ್ತಚಾಸುದೇಶನಖಕ್ಷತಾ ।
ಸಂಭ್ರಮಾತ್ಕಾಂತರಮಣಮಗ್ನಾ ನಾಪಿ ಸ್ಯಮುಜ್ಝತ ॥ ೧೮ ॥

೧೪ ತನ್ನ ಕಮಲದಂತಹ ಮುಖವನ್ನು ಹೋಲುವ ಕಮಲಪುಷ್ಪಗಳಿಂದ ಮುಚ್ಚಿಹೋಗಿದ್ದ ಆ ಸರೋವರದಲ್ಲಿ, ತನ್ನ ಕಾಂತೆಯನ್ನು ಹುಡುಕಿ ಹುಡುಕಿ ಕಡೆಗೆ ಆ ಕಮಲಮಧ್ಯದಲ್ಲಿ ಮುಚ್ಚಿದ್ದ ತನ್ನ ಕಾಂತೆಯ ಮುಖವನ್ನು ನೋಡಿ ಆಕೆಯ ಕಾಂತನು ಇವಳೇ ತನ್ನ ಕಾಂತೆಯೆಂದು ಕಂಡುಹಿಡಿದನು.

೧೫ ಓರ್ವ ನಿತಂಬಿನಿಯು ಆ ಕೊಳದಲ್ಲಿ ಚನ್ನಾಗಿ ಸ್ನಾನಮಾಡಿ ಮೇಲೆ ಕ್ಕೆದ್ದುಬಂದು ತನಗೆಲ್ಲಿ ಶೀತವಾಗುವುದೋ ಎಂಬ ನೆಪಮಾಡಿಕೊಂಡು ಬಹು ಕಾಲ ದಿಂದ ತನ್ನ ಮನಸ್ಸಿನಲ್ಲಿದ್ದ ರಮಣಾಲಿಂಗನ ರೂಪವಾದ ಮನಸ್ಸಿನ ಆಶೆಯನ್ನು ತೀರಿಸಿಕೊಂಡಳು

೧೬ ಒಬ್ಬಳು ಸುಂದರಿಯು ನೀರಿನಿಂದ ನೆನೆದಿದ್ದ ಬಹು ಸೂಕ್ಷ್ಮ (ತೆಳು) ವಾದ ಸೀರೆಯನ್ನುಟ್ಟು ಅದು ತನ್ನ ಸರ್ವಾವಯವಕ್ಕೂ ಅಂಟಿಕೊಂಡಿರಲು ಆರೀತಿ ಯಾದ ತನ್ನ ಅಂಗಕಾಂತಿಯನ್ನು ನೋಡಿದ ಜನರನ್ನೂ ಮನ್ಮಥನ ಬಾಣದೇಟಿಗೆ ಗುರಿಮಾಡುತ್ತಲಿದ್ದಳು.

೧೭-೨೧ ಒಬ್ಬ ನಾಯಕನು ಸುಗಂಧಪೂರಿತವಾದ ಪುಷ್ಪಮಾಲೆಯ ನಾರಿ ನಿಂದ ತನ್ನ ಹೆಂಡತಿಯನ್ನು ನೀರಿನೊಳಗೆ ಎಳೆಯಲು ಪ್ರಯತ್ನಮಾಡಿ ಆ ಹೂವನ್ನು ಕಟ್ಟಿದ್ದ ನಾರು ಕಿತ್ತುಹೋಗಲು ನೀರಿನೊಳಗೆ ಜಾರಿಬಿದ್ದ ನಾಯಕನನ್ನು ನೋಡಿ

ಕಾಚಿತ್ಪ್ರೇಂಖತ್ಕೃತಾದಿತ್ಯಾ ಕೇಶನಿಸ್ತೋಯಕಾರಿಣೀ ।
ಶಿಲಾತಲಗತಾ ಭರ್ತ್ರಾ ದೃಷ್ಟಾ ಕಾಮಾರ್ತಚಕ್ಷುಷಾ ॥ ೧೯ ॥

ಹೃತಮಾಲ್ಯಂ ಸುಲಲಿತಂ ಸಂಕ್ರಾಂತಕುಚಕುಂಕುಮಂ ।
ರತಾಂತಕ್ಲಾಂತಕಾಂತಾಭಮಭವತ್ತತ್ಸರೋದಕಂ ॥ ೨೦ ॥

ಸುಸ್ನಾತದೇವಗಂಧರ್ವದೇವನಾರೀಗಣೇನ ಚ ।
ಪೂಜ್ಯಮಾನಂ ಸ ದದೃಶೇ ದೇವದೇವಂ ಜನಾರ್ದನಂ ॥ ೨೧ ॥

ಕ್ವಚಿಚ್ಚ ದದೃಶೇ ರಾಜಾ ಲತಾಗೃಹಗತಾಃ ಸ್ತ್ರಿಯಃ ।
ಮಂಡಯಂತ್ಯಃ ಸ್ವಗಾತ್ರಾಣಿ ಕಾಂತನ್ಯಸ್ತಮಾನಸಾಃ ॥ ೨೨ ॥

ಗೇಲಿಮಾಡಿಕೊಂಡು ನಕ್ಕಳು. ಒಬ್ಬಳು ಸಖಿಯು ನೀರಿನೊಳಗೇ ಬಂದು ಮತ್ತೊಬ್ಬಳು ಸಖಿಯ ಮೊಳಕಾಲಮೇಲೆ ಉಗುರಿನಿಂದ ಗೀಚಿ ಅವಳನ್ನು ಗಾಬರಿಪಡಿಸಲು, ಆಗ ಆಕೆಯ ಕಾಂತನು ಅವಳನ್ನು ಬಂದು ಆಕ್ರಮಿಸಿದನ್ನು ಕಂಡು ಆ ಸಖಿಯು ತಾನೂ ನೀರಿನೊಳಗೆ ಮುಳುಗಿದಳು.

ಮತ್ತೊಬ್ಬಳು ಅಪ್ಸರಾಂಗನೆಯು ಒದ್ದೆಯಾಗಿದ್ದ ತಲೆಗೂದಲನ್ನು ಒಣಗಿಸಿಕೊಳ್ಳುವುದಕ್ಕಾಗಿ ಬೆನ್ನಮೇಲೆ ಕೂದಲನ್ನು ಹರಡಿಕೊಂಡು ಆಗಸದಲ್ಲಿದ್ದ ಸೂರ್ಯನ ಕಡೆಗೆ ಆ ಬೆನ್ನನ್ನು ತಿರುಗಿಸಿಕೊಂಡು ಶಿಲಾತಲದ ಮೇಲೆ ಕುಳಿತಿದ್ದವಳನ್ನು ಆಕೆಯ ಗಂಡನು ಕಾಮಾರ್ತನಾದ ದೃಷ್ಟಿಯಿಂದ ನೋಡಿದನು. ಒಂದು ಕಡೆ ಆ ಕೊಳದ ನೀರು ಕೆಂಪಾಗಿದ್ದುದನ್ನು ನೋಡಿದರೆ ಅಪ್ಸರೆಯರ ಕುಚಗಳಲ್ಲಿ ಲಿಪ್ತವಾಗಿದ್ದ ಕುಂಕುಮದಿಂದ ಬೆರೆತ ಹೂವುಗಳ ಮಾಲೆಯು ನೀರಿನಲ್ಲಿ ಬಿದ್ದು ಸುರತಾಂತ್ಯದಲ್ಲಿ ಬಳಲಿ ಬೆಂಡಾಗಿ ಸೋತುಹೋದ ಕಾಂತನ ಮುಖದಂತೆ ತೋರುತ್ತಿತ್ತು.

ಈರೀತಿ ನಾನಾವಿಧವಾದ ಜಲಕ್ರೀಡೆಗಳನ್ನಾಡಿ ಕೊನೆಗೆ ಆ ಸರೋವರದಲ್ಲಿ ಸ್ನಾನಮಾಡಿ ದೇವಸ್ಥಾನಕ್ಕೆ ಬಂದು ಸಕಲ ಗಂಧರ್ವರೂ ಅಪ್ಸರನಾರಿಯರೂ ಭಗವಂತನಾದ ಜನಾರ್ದನನ್ನು ಪೂಜೆಮಾಡುತ್ತಿದ್ದುದನ್ನು ಆ ಇಂದ್ರರಾಜನು ನೋಡಿದನು.

೨೨-೨೩ ಕೆಲವು ಸ್ತ್ರೀಯರು ಲತಾಗೃಹಗಳಲ್ಲಿ ಕುಳಿತು ತಮ್ಮ ತಮ್ಮ ಕಾಂತರಲ್ಲೇ ನಟ್ಟಮನಸ್ಸುಳ್ಳವರಾಗಿ ತಮ್ಮ ತಮ್ಮ ದೇಹಗಳನ್ನು ಆಭರಣಗಳಿಂದ ಅಲಂಕರಿಸಿಕೊಳ್ಳುತ್ತಲಿದ್ದರು. ಒಬ್ಬಳು ಅಪ್ಸರನಾರಿಯು ಕನ್ನಡಿಯನ್ನು ಕೈಯಲ್ಲಿ

ಕಾಚಿದಾದರ್ಶಮುದಗ್ರಕರಾ ದೂತೀಮುಖೋದ್ಗತಂ ।
ಶೃಣ್ವತೀ ಕಾಂತವಚನಮತಿಕ್ಲಾಂತಮುಖಾ ಬಭೌ ॥ ೨೩ ॥

ಕಾಚಿತ್ಸತ್ವರಿತಾ ದೂತ್ಯಾ ಭೂಷಣಾನಾಂ ವಿಪರ್ಯಯಂ ।
ಕುರ್ವಾಣಾ ನೈವ ಬಬುಧೇ ಮನ್ಮಥಾವಿಷ್ಟಚೇತನಾ ॥ ೨೪ ॥

ಪಾಯುನುನ್ನಾಂತಸುರಭಿಕುಸುಮೋತ್ಕರಮಂಡಿತೇ ।
ಕ್ವಚಿತ್ಪಿಬಂತ್ಯೋ ದದೃಶೇ ಪ್ರದೇಶೇ ನೀಲಶಾದ್ವಲೇ ॥ ೨೫ ॥

ಪಾಯಯಾಮಾಸ ರಮಣಂ ಸ್ವಯಂ ಕಾಚಿದ್ವರಾಂಗನಾ ।
ಕಾಚಿತ್ಪಪೌ ವರಾರೋಹಾ ಕಾಂತಪಾಣಿ ಸಮರ್ಪಿತಂ ॥ ೨೬ ॥

ಕಾಚಿತ್ಸ್ವನೇತ್ರಸಂಕ್ರಾಂತ ನೀಲೋತ್ಪಲಯುತಂ ಮಧುಃ ।
ಪೀತ್ವಾ ಪಪ್ರಚ್ಛ ರಮಣಂ ಕ್ವ ಗತೇ ತೇ ಮಹೋತ್ಪಲೇ ॥ ೨೭ ॥

ತ್ವಯೈವ ಪೀತೇ ತೇ ನೂನಮಿತ್ಯುಕ್ತ್ವಾ ರಮಣೇನ ಸಾ ।
ಸತ್ಯಂ ವಿದಿತ್ವಾ ಮುಗ್ಧತ್ವಾದ್ಬಭೂವ ವ್ರೀಡಿತಾ ಚಿರಂ ॥ ೨೮ ॥

ಹಿಡಿದುಕೊಂಡು ತನ್ನ ಮುಖವನ್ನು ನೋಡಿಕೊಳ್ಳುತ್ತಲಿದ್ದಾಗ ದೂತಿಯ ಬಾಯಿಯಿಂದ ತನ್ನ ಕಾಂತನ ವರ್ತಮಾನವನ್ನು ಕೇಳಿದವಳಾಗಿ ಬಾಡಿದ ಮುಖವುಳ್ಳವಳಾದಳು.

೨೪-೩೦ ಒಬ್ಬ ಅಪ್ಸರನಾರಿಯು ದೂತಿಯಿಂದ ಬೇಗ ಬಾರೆಂದು ತ್ವರಿತಮಾಡಲ್ಪಟ್ಟವಳಾಗಿ ಕಾಮಾತುರಳಾಗಿ ಆಭರಣವನ್ನು ವಿಪರ್ಯಾಸಮಾಡಿಕೊಂಡವಳಾಗಿ ಅದನ್ನು ತಿಳಿಯಲೇ ಇಲ್ಲ (ಅಂದರೆ ಕಾಲಿನ ಒಡವೆಯನ್ನು ಕೈಗೂ ಹಸ್ತಾಭರಣವನ್ನು ಕಾಲಿಗೂ ಈರೀತಿ ಬೇರೆ ಬೇರೆ ಬದಲಾಯಿಸಿ ಇಟ್ಟುಕೊಳ್ಳುತ್ತಿದ್ದಳೆಂದು ತಾತ್ಪರ್ಯ) ಹಚ್ಚಗಿರುವ ಹುಲ್ಲುಗಾವಲಿನಲ್ಲಿ ಕುಳಿತೋರ್ವ ನಾರಿಯು ಪಾನವಿಶೇಷವನ್ನು ಪಾನಮಾಡಿ ಗಂಡನಿಗೂ ಕುಡಿಸಿದಳು. ಒಬ್ಬಳು ತನ್ನ ಗಂಡನು ಕಚ್ಚಿ ಕುಡಿದು ಮಿಕ್ಕ ಪಾನೀಯವನ್ನು ಕುಡಿದು ಮದನಾತುರಳಾದಳು. ಈರೀತಿ ಪಾನಭೂಮಿಯಲ್ಲಿ ನಡೆಯುತ್ತಿದ್ದ ವಿಚಿತ್ರಗಳನ್ನು ಆ ರಾಜನು ನೋಡಿದನು. ಮತ್ತೆ ಆ

ಕಾಚಿತ್ಕಾಂತಾರ್ಪಿತಂ ಸುಭ್ರೂಃ ಕಾಂತಪೀತಾವಶೇಷಿತಂ ।
ಸವಿಶೇಷರಸಂ ಪಾನಂ ಪಪೌ ಮನ್ಮಥವರ್ಧನಂ ॥ ೨೯ ॥

ಆಪಾನಗೋಷ್ಠೀಷು ತದಾ ತಾಸಾಂ ಸ ನರಪುಂಗವಃ ।
ಶುಶ್ರಾವ ವಿವಿಧಂ ಗೀತಂ ತಂತ್ರೀಸ್ವರವಿಮಿಶ್ರಿತಂ ॥ ೩೦ ॥

ಪ್ರದೋಷಸಮಯೇ ತಾಶ್ಚ ದೇವದೇವಂ ಜನಾರ್ದನಂ ।
ರಾಜನ್ನಥೋಪನೃತ್ಯಂತಿ ನಾನಾವಾದ್ಯಪುರಃಸರಾಃ ॥ ೩೧ ॥

ಯಾಮಮಾತ್ರೇ ಗತೇ ರಾತ್ರೌ ವಿನಿರ್ಗತ್ಯ ಗುಹಾಮುಖಾತ್ ।
ಆಯಾಂತಿ ಸಂಯುತಾಃ ಕಾಂತೈಃ ಸ್ವಯಮುದ್ಧಿರಚಿತಾನ್ಗೃಹಾನ್ ॥ ೩೨ ॥

ನಾನಾಗಂಧಾರ್ಚಿತತಲಾನ್ನಾನಾಗಂಧಸುಗಂಧಿನಃ ।
ನಾನಾವಿಚಿತ್ರಶಯನಾನ್ಕುಸುಮೋತ್ಕರ ಮಂಡಿತಾನ್ ॥ ೩೩ ॥

ಏವಮಪ್ಸರಸಾಂ ಪಶ್ಯನ್ಕ್ರೀಡಿತಾನಿ ಸ ಪರ್ವತೇ ।
ತಪಸ್ತೇಪೇ ಮಹಾರಾಜಃ ಕೇಶವಾರ್ಪಿತಮಾನಸಃ ॥ ೩೪ ॥

ಪಾನಮಂದಿರದಲ್ಲಿ ಕುಳಿತು ತಂತ್ರೀ (ಹಾರ್ಮೋನಿಯಂ, ವೀಣ ಇತ್ಯಾದಿ) ಸ್ವರದ ಜೊತೆ ಅಪ್ಸರನಾರಿಯರು ಹಾಡುತ್ತಿದ್ದ ವಿವಿಧಗೀತಗಳನ್ನು ಆ ಮದ್ರರಾಜನು ಕೇಳಿದನು

೩೧-೩೪ ಆ ಗಂಧರ್ವನಾರಿಯರು ಪ್ರದೋಷ (ಸಾಯಂಕಾಲ) ಸಮಯದಲ್ಲಿ ನಾನಾವಾದ್ಯಧ್ವನಿಗಳಿಂದ ಮಹಾವಿಷ್ಣುವಿನ ಮುಂದೆ ನೃತ್ಯಮಾಡುತ್ತಿದ್ದರು. ಈರೀತಿ ಒಂದು ಝಾಮ ಹೊತ್ತು ಕಳೆದ ಮೇಲೆ ಅವರೆಲ್ಲರೂ ಗುಹಾಮುಖದಿಂದ ಹೊರಗೆ ಬಂದು ತಮಗೋಸ್ಕರ ಕಟ್ಟಿಕೊಂಡಿರುವ ಮನೆಗಳಿಗೆ ಸೇರಿಕೊಳ್ಳುತ್ತಿದ್ದರು. ಆರೀತಿ ಕಟ್ಟಿಕೊಂಡಿದ್ದ ಗಂಧರ್ವಗೃಹಗಳು, ನಾನಾವಿಧ ಪರಿಮಳ ಪುಷ್ಪಲತೆಗಳಿಂದ ರಾರಾಜಿಸುತ್ತಿದ್ದವು ವಿಚಿತ್ರ ವಿಚಿತ್ರವಾದ ಪುಷ್ಪಶಯ್ಯೆಗಳು ಆ ಮಂದಿರಗಳಲ್ಲಿ ಕಂಗೊಳಿಸುತ್ತಿದ್ದುವು ಈ ರೀತಿಯಾದ ಅಪ್ಸರಸ್ತ್ರೀಯರ ಕ್ರೀಡಾವಿಶೇಷಗಳನ್ನು ಆ ಪರ್ವತದಲ್ಲಿ ನೋಡುತ್ತಾ ಆ ಮದ್ರರಾಜನು ಕೇಶವನಲ್ಲೇ ನೆಟ್ಟ ಮನಸ್ಸುಳ್ಳವನಾಗಿ ತಪಸ್ಸುಮಾಡುತ್ತಲಿದ್ದನು

ತಮೂಚುರ್ನೃಪತಿಂ ಗತ್ವಾ ಗಂಧರ್ವಾಪ್ಸರಸಾಂ ಗಣಾಃ ।
ರಾಜನ್ಸ್ವರ್ಗೋಪಮಂ ದೇಶಂ ಪ್ರಾಪ್ತಸ್ತ್ವಮರಿಮರ್ದನ ॥ ೩೫ ॥

ವಯಂ ಹಿ ತೇ ಪ್ರದಾಸ್ಯಾಮೋ ಮನಸಃ ಕಾಂಕ್ಷಿತಾನ್ವರಾನ್ ।
ತಾನಾದಾಯ ಗೃಹಂ ಗಚ್ಛ ತಿಷ್ಠೇಹ ಯದಿ ವಾ ಪುನಃ ॥ ೩೬ ॥

॥ ಪುರೂರವಾ ಉವಾಚ ॥

ಅಮೋಘದರ್ಶನಾಃ ಸರ್ವೇ ಭವಂತಸ್ತ್ವಮಿತೌಜಸಃ ।
ವರಂ ವಿತರತಾದ್ಯೈವ ಪ್ರಸಾದಂ ಮಧುಸೂದನಾತ್ ॥ ೩೭ ॥

॥ ಮಾರ್ಕಂಡೇಯ ಉವಾಚ ॥

ಏವಮಸ್ತ್ವಿತ್ಯಥೋಕ್ತಸ್ತೈಃ ಸ ತು ರಾಜಾ ಪುರೂರವಾಃ ।
ತತ್ರೋವಾಸ ಸುಖೀಮಾನಂ ಪೂಜಯಾನೋ ಜನಾರ್ದನಂ ॥ ೩೮ ॥

ಪ್ರಿಯ ಏವ ಸದೈವಾಸೀದ್ಗಂಧರ್ವಾಪ್ಸರಸಾಂ ನೃಪ ।
ತುತೋಷ ಸ ಜನೋ ರಾಜಂಸ್ತಸ್ಯಾಲೌಲ್ಯೇನ ಕರ್ಮಣಾ ॥ ೩೯ ॥

೩೫-೩೬ ಈ ರೀತಿ ತಪಸ್ಸನ್ನು ಮಾಡುತ್ತ ಕುಳಿತಿದ್ದ ಆ ರಾಜನ ಬಳಿಗೆ ಗಂಧರ್ವರೂ, ಅಪ್ಸರಸಿಯರೂ ಬಂದು, ಎಲೈ ರಾಜನೇ! ನೀನು ಸ್ವರ್ಗಸದೃಶವಾದ ಈ ಸ್ಥಳಕ್ಕೆ ಬಂದಿದ್ದೀಯೆ! ನಿನಗೆ ನಾವು ನೀನು ಬೇಡುವ ವರಗಳನ್ನೆಲ್ಲಾ ಕೊಡುತ್ತೇವೆ ಆ ವರಗಳನ್ನೆಲ್ಲ ಪಡೆದು ಊರಿಗೆ ಹೋಗಿ ಸುಖವಾಗಿರು ಅಥವಾ ಇಲ್ಲಿಯೇ ಇರಬೇಕೆಂದು ಆಸೆಯಿದ್ದರೆ ಇಲ್ಲೇ ಬೇಕಾದರೂ ಇರು

೩೭ ಪುರೂರವ (ಮದ್ರರಾಜ) ನು ಹೇಳುತ್ತಾನೆ —ಎಲೈ ಗಂಧರ್ವರೇ! ನಿಮ್ಮ ಸಂದರ್ಶನವು ನಿರ್ದೋಷಫಲಪ್ರದವಾದುದು ನೀವು ಮಹಾಪರಾಕ್ರಮಶಾಲಿಗಳು ನೀವೆಲ್ಲರೂ ದಯವಿಟ್ಟು ಪರಮಾತ್ಮನಾದ ಮಹಾವಿಷ್ಣುವಿನಿಂದ ನನಗೆ ಈಗಲೇ ವರಪ್ರಸಾದವನ್ನು ಕೊಡಿಸಬೇಕು

೩೮-೪೦ ಮಾರ್ಕಂಡೇಯನು ಹೇಳುತ್ತಾನೆ - ಪುರೂರವನ (ಮದ್ರರಾಜನ) ಮಾತನ್ನು ಕೇಳಿ ಗಂಧರ್ವರು ಹಾಗೆಯೇ ಆಗಲೆಂದು ಹೇಳಿದರು ಆ ಬಳಿಕ ಆ ರಾಜನು ಸುಖವಾಗಿ ಅಲ್ಲಿಯೇ ವಾಸಮಾಡಿಕೊಂಡಿದ್ದು ಪರಮಾತ್ಮನಾದ ಜನಾರ್ದನನನ್ನು ಧ್ಯಾನಿಸುತ್ತಾ ಇದ್ದನು ಈ ಸಮಯದಲ್ಲಿ ಇವನಿಗೂ ಗಂಧರ್ವರಿಗೂ ವಿಶೇಷ

ಮಘಸ್ಯ ಮಧ್ಯೇ ಸ ನೃಪಃ ಪ್ರವಿಷ್ಟ
ಸ್ತದಾಶ್ರಮಂ ರತ್ನಸಹಸ್ರಚಿತ್ರಂ ।
ತೋಯಾಶನಸ್ತತ್ರ ಉವಾಸ ಮಾಸಂ
ಯಾವತ್ಸಿತಾಂತಂ ನೃಪ ಫಾಲ್ಗುನಸ್ಯ ॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಜಲಕ್ರೀಡಾ ವರ್ಣನಂ ನಾಮ ತ್ರಿಪಂಚಾಶ
ದಧಿಕ ಶತತಮೋಽಧ್ಯಾಯಃ

---

ವಾದ ಪ್ರೀತಿ ಬೆಳೆಯಿತು ಈ ಕಾರಣದಿಂದ ಆ ಗಂಧರ್ವರು ಆ ಮಹಾರಾಜನಿಗೆ ಬಹಳ ಸಂತೋಷವನ್ನುಂಟುಮಾಡುತ್ತಲಿದ್ದರು ರತ್ನಸಹಸ್ರಗಳಿಂದ ವಿಚಿತ್ರವಾಗಿ ಅಲಂಕೃತವಾದ ಆ ಆಶ್ರಮಕ್ಕೆ ಮದ್ರರಾಜನು ಮಾಘಮಾಸದ ಮಧ್ಯದಲ್ಲಿ ಬಂದು ಫಾಲ್ಗುಣ ಶುದ್ಧ ಪೂರ್ಣಿಮಾವರವಿಗೆ ಒಂದು ತಿಂಗಳು ಭಗವಂತನನ್ನು ಕುರಿತು ತಪಸ್ಸುಮಾಡಿದನು ಈ ಒಂದು ತಿಂಗಳ ಕಾಲ ರಾಜನು ಬರೀ ನೀರನ್ನು ಮಾತ್ರ ಕುಡಿದುಕೊಂಡು ಆ ಆಶ್ರಮದಲ್ಲಿ ವಾಸವಾಗಿದ್ದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಜಲಕ್ರೀಡಾವರ್ಣನೆಯೆಂಬ
ಹೆಸರಿನ ಒಂದುನೂರ ಐವತ್ತಮೂರನೆಯ
ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
# ॥ ಚತುಃ ಪಂಚಾಶದಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಫಾಲ್ಗುನಾಮಲಪಕ್ಷಾಂತೇ ರಾಜಾ ಸ್ವಪ್ನೇ ಪುರೂರವಾಃ ।
ತಸ್ಯೈವ ದೇವದೇವಸ್ಯ ಶುಶ್ರಾವ ಗದಿತಂ ಶುಭಂ ॥ ೧ ॥

ರಾತ್ರ್ಯಾಮಸ್ಯಾಂ ವ್ಯತೀತಾಯಾಂ ಮಂತ್ರಿಣಾಂ ತ್ವಂ ಸಮೇಷ್ಯಸಿ ।
ತೇನ ರಾಜನ್ಸಮಾಗಮ್ಯ ಕೃತಕೃತ್ಯೋ ಭವಿಷ್ಯಸಿ ॥ ೨ ॥

ಸ್ವಪ್ನಮೇವಂ ಸ ರಾಜರ್ಷಿರ್ದೃಷ್ಟ್ವಾ ವಿಪುಲವಿಕ್ರಮಃ ।
ಪ್ರತ್ಯೂಷಕಾಲೇ ವಿಧಿವತ್ಸ್ನಾತಃ ಪ್ರಾಗ್ಸದತಂದ್ರಿತಃ ॥ ೩ ॥

---

## ಒಂದುನೂರ ಐವತ್ತನಾಲ್ಕನೆಯ ಅಧ್ಯಾಯವು.

೧. ಫಾಲ್ಗುಣ ಶುದ್ಧ ಪೌರ್ಣಿಮಾ ರಾತ್ರಿಯಲ್ಲಿ ಆ ಪುರೂರವ (ಮದ್ರ) ರಾಜನು ಸ್ವಪ್ನದಲ್ಲಿ ದೇವದೇವೋತ್ತಮನಾದ ಮಹಾವಿಷ್ಣುವಿನ ಮಂಗಳಕರವಾದ ಒಂದು ಮಾತನ್ನು ಕೇಳಿದನು

೨ ಆ ದೈವವಾಣಿಯೇನಂದರೆ —ಎಲೈ ರಾಜನೇ! ಈ ರಾತ್ರಿ ಕಳೆದೊಡನೆ ನಿನ್ನ ಮಂತ್ರಿಯೊಡನೆ ನೀನು ಕಲೆತು ಕೃತಕೃತ್ಯನಾಗುತ್ತೀಯೆ

೩-೪ ಈರೀತಿ ಸ್ವಪ್ನದಲ್ಲಾದ ದೇವವಾಣೀ ವೃತ್ತಾಂತವನ್ನು ಯೋಚಿಸುತ್ತಾ ಪ್ರಾತಃಕಾಲದಲ್ಲೆದ್ದು ಎಂದಿನಂತೆ ವಿಧ್ಯುಕ್ತವಾಗಿ ಸ್ನಾನಮಾಡಿ ಭಗವದಾ

ಕೃತಕೃತ್ಯೋ ಯಥಾಕಾಮಂ ಪೂಜಯಿತ್ವಾ ಜನಾರ್ದನಂ ।
ಸ್ವಪ್ನಂ ತದ್ದೇವದೇವಸ್ಯ ನ್ಯವೇದಯತ ಧಾರ್ಮಿಕಃ ॥ ೪ ॥

ತತಃ ಶುಶ್ರಾವ ವಚನಂ ದೇವತಾರ್ಚಾಸಮೀರಿತಂ ।
ಏವಮೇತನ್ಮಹೀಪಾಲ ನಾತ್ರ ಕಾರ್ಯಾ ವಿಚಾರಣಾ ॥ ೫ ॥

ಏವಂ ಪ್ರಸಾದಂ ಸಂಪ್ರಾಪ್ಯ ದೇವದೇವಾಜ್ಜನಾರ್ದನಾತ್ ।
ಕೃತಕೃತ್ಯಮಿವಾತ್ಮಾನಂ ಮೇನೇ ಸ ನರಪುಂಗವಃ ॥ ೬ ॥

ಕೃತದೇವಾರ್ಚನೋ ರಾಜಾ ತದಾ ಹುತಹುತಾಶನಃ ।
ಜಗಾದ ಸುಹೃದಾಂ ತೇಷಾಂ ಪ್ರಸಾದಂ ಮಧುಸೂದನಾತ್ ॥ ೭ ॥

ತಮೂಚುಸ್ತು ತದಾ ಸರ್ವೇ ರಾಜಾನಮಪರಾಜಿತಂ ।
ವಿದಧಾತು ಪ್ರಸನ್ನೇನ ದೇವದೇವೋ ಜನಾರ್ದನಃ ॥ ೮ ॥

ಅಪ್ರಸನ್ನೇ ಜಗನ್ನಾಥೇ ದೇಶೇಽಸ್ಮಿನ್ ನೃಪ ಕಸ್ಯಚಿತ್ ।
ನ ಗತಿರ್ವಿದ್ಯತೇ ರಾಜಂಸ್ತ್ವಂ ಚ ದೇಶಮಿಹಾಗತಃ ॥ ೯ ॥

---

ರಾಧನೆಯನ್ನು ಮುಗಿಸಿಕೊಂಡು ಆ ರಾಜನು ದೇವರ ಮುಂದೆ ಆ ಸ್ವಪ್ನ ವೃತ್ತಾಂತ ವನ್ನು ವಿಜ್ಞಾಪಿಸಿದನು

೫-೬ ದೇವತಾರ್ಚನೆಯಾದ ಬಳಿಕ ಆ ಭಗವಂತನ ಮುಖದಿಂದಲೇ ಎಲೈ ರಾಜನೇ ಇದು ಸತ್ಯ, ಈ ವಿಚಾರದಲ್ಲಿ ಸಂದೇಹಪಡಬೇಡ ನೀನು ಕೃತಕೃತ್ಯನಾದ, ಹೋಗೆಂದು ಅಪ್ಪಣೆಯಾಗಲು ರಾಜನು ಈರೀತಿ ಸ್ವಾಮಿಯ ಸಾಕ್ಷಾದನುಗ್ರಹದಿಂದ ತಾನು ಕೃತಕೃತ್ಯನಾದಂತೆ ತಿಳಿದುಕೊಂಡನು

೭ ದೇವತಾರ್ಚನೆಯನ್ನೂ ಅಗ್ನಿಪೂಜೆಯನ್ನು ಮಾಡಿದ ನಮನಂತರದಲ್ಲಿ ಆ ಮಹಾರಾಜನು ತನ್ನ ಗಂಧರ್ವ ಮಿತ್ರರನ್ನು ಕುರಿತು, ತನಗೆ ಭಗವಂತನಾದ ಮಧುಸೂದನನಿಂದ ಅನುಗ್ರಹವಾದ ಪ್ರಸಾದ ವೃತ್ತಾಂತವನ್ನು ಹೇಳಿದನು

೮. ಆಗ ಗಂಧರ್ವರು ಆ ಮಹೀಪಾಲನನ್ನು ಕುರಿತು ದೇವೋತ್ತಮನಾದ ಜನಾರ್ದನನು ನಿನಗೆ ಪ್ರಸನ್ನನಾಗಿ ಅನುಗ್ರಹಮಾಡಿದನೆಂದು ತಿಳಿಸಿದರು

೯-೧೧ ಎಲೈ ರಾಜನೇ! ಈ ಸ್ಥಳಕ್ಕೆ ಬಂದಮೇಲೆ ಜಗನ್ನಾಥನು ಪ್ರಸನ್ನ ನಾಗದಿದ್ದರೆ ಅಂತಹವನಿಗೆ ಗತಿಯೇ ಇಲ್ಲ. ನೀನು ದೈವವಶಾತ್ತಾಗಿ ಇಲ್ಲಿಗೆ ಬಂದು

ಸುಖಂ ಪ್ರಾಪ್ನುಹಿ ಭದ್ರಂ ತೇ ಭೂಯ ಏವ ಹಿತೇಪ್ಸಿತಾನ್ ।
ಸ ಸಾದಯಿತ್ವಾ ತೇ ಕಾಮಾನ್ ದೇವಃ ಸ್ವರ್ಗಗತಃ ಪ್ರಭುಃ ॥ ೧೦ ॥

ಏವಮುಕ್ತ್ವಾ ನರೇಂದ್ರಂ ತು ಗಂಧರ್ವಾಪ್ಸರಸಾಂ ಗಣಾಃ ।
ಜಗ್ಮುಃ ಕ್ರೀಡಾವಿಹಾರಾರ್ಥಂ ಯಥಾಪೂರ್ವಮರಿಂದಮ ॥ ೧೧ ॥

ಅಥಾಜಗಾಮ ತಂ ದೇಶಂ ಬ್ರಹ್ಮಣೋ ಮಾನಸಃ ಸುತಃ ।
ತ್ರಿಜಗದ್ಯಶಸಾಂ ಸ್ಥಾನಮತ್ರಿಃ ಸುರಗಣಾರ್ಚಿತಃ ॥ ೧೨ ॥

ಸಮಾಗತಂ ಮುನಿವರಂ ದೃಷ್ಟ್ವಾ ರಾಜಾ ಪುರೂರವಾಃ ।
ಪಾದ್ಯಾರ್ಘ್ಯಾಚಮನೀಯಾದ್ಯೈ ರಾಸನೇನಾಭ್ಯಪೂಜಯತ್ ॥ ೧೩ ॥

ಸಂಪೂಜ್ಯ ಚ ಮಹಾಭಾಗಮಿದಂ ವಚನಮಬ್ರವೀತ್ ।
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ॥ ೧೪ ॥

ಯತ್ತೇ ದೇವಗಣೈರ್ವಂದ್ಯೋ ವಂದಿತೌ ಚರಣೌ ಮಯಾ ।
ಶ್ರೇಯಃ ಪ್ರಸೂತಿವೃಕ್ಷಸ್ಯ ಪ್ರರೋಹಸ್ತವ ದರ್ಶನಂ ॥ ೧೫ ॥

---

ಭಗವದನುಗ್ರಹಕ್ಕೆ ಪಾತ್ರನಾದ ಸುಖವಾಗಿ ಬದುಕು ಹೋಗು ಸ್ವಾಮಿಯು ನಿನ್ನ ಮನಸ್ಸಿನಲ್ಲಿರುವ ಇಷ್ಟಾರ್ಥಗಳನ್ನೆಲ್ಲಾ ನೆರವೇರಿಸುತ್ತಾನೆ ಹೀಗೆಂದು ನೃಪ ರಾಜನಿಗೆ ಹೇಳಿ ಆ ಗಂಧರ್ವರೂ ಅಪ್ಸರಸ್ತ್ರೀಯರೂ ಯಥಾಪ್ರಕಾರವಾಗಿ ಎಂದಿನಂತೆ ತಮ್ಮ ತಮ್ಮ ವಿಹಾರಕ್ಕೆ ತಾವು ತಾವು ಹೊರಟುಹೋದರು.

೧೨ ಆ ಬಳಿಕ ಆ ಪ್ರದೇಶಕ್ಕೆ ಬ್ರಹ್ಮಮಾನಸಪುತ್ರರೂ, ತ್ರಿಲೋಕ ವಿಖ್ಯಾತ ಕೀರ್ತಿಶಾಲಿಗಳೂ, ದೇವಗಣಾದಿಸಂಪೂಜಿತರೂ ಆದ ಅತ್ರಿಮಹರ್ಷಿಗಳು ಬಂದರು

೧೩ ಈ ರೀತಿ ಬಂದ ಋಷಿವರ್ಯರಾದ ಅತ್ರಿಮಹರ್ಷಿಗಳನ್ನು ಆ ಪುರೂರವ(ಮದ್ರ) ರಾಜನು ನೋಡಿ ಪಾದ್ಯಾರ್ಘ್ಯಾದಿ ಪೂಜೆಗಳಿಂದ ಸತ್ಕರಿಸಿ ಸುಖಾಸನದಲ್ಲಿ ಕುಳ್ಳಿರಿಸಿದನು

೧೪-೧೫ ಈರೀತಿ ಪೂಜೆಮಾಡಿದ ಬಳಿಕ ಅತ್ರಿಗಳ ಮುಂದೆ ನಿಂತುಕೊಂಡು ಮಹಾನುಭಾವರೇ ! ಈಗ ನನ್ನ ಜನ್ಮವು ಸಫಲವಾಯಿತು ನನ್ನ ತಪಸ್ಸು ಸಾರ್ಥಕವಾಯಿತು ದೇವತಾವೃಂದಗಳಿಂದ ಪೂಜಾರ್ಹವಾದ ನಿಮ್ಮ ಚರಣಕಮಲಗಳ ಪೂಜೆಯು ನನಗೆ ದೊರೆತುದು ಶ್ರೇಯೋಭಿವೃದ್ಧಿ ಎಂಬ ಮರವು ಚನ್ನಾಗಿ ಫಲಿಸಿದಂತೆ ಆಯಿತೆಂದು ಹೇಳಿದನು

**ಸರ್ವಪಾಪಾಂತಕರಣಂ ಸರ್ವಕಲ್ಯಾಣಕಾರಣಂ ।**
**ಕಿಂ ವಾ ನ ಲಭ್ಯಮಸ್ತೀಹ ತೇಷಾಂ ದ್ವಿಜವರೋತ್ತಮ ॥ ೧೬ ॥**

**ಅಮೋಘದರ್ಶನೇ ದೃಷ್ಟೇ ಭವತ್ಯಮಿತತೇಜಸಿ ।**
**ಏವಮುಕ್ತಸ್ತದಾ ರಾಜ್ಞಾ ಸುಪ್ರಸನ್ನೋ ಜಗಾದ ತಂ ॥ ೧೭ ॥**

**ಶೃಣು ರಾಜನ್ವಚೋ ಮಹ್ಯಂ ಯತ್ತೇ ವಕ್ಷ್ಯಾಮಿ ಸುವ್ರತ ।**
**ದೇವದೇವಸಮಾದೇಶಾದ್ದತ್ತಂ ತೇ ದರ್ಶನಂ ಮಯಾ ॥ ೧೮ ॥**

**ಸುಪ್ರಸನ್ನೋ ಹಿ ಭಗವಾನ್ದೇವಾಸ್ತೇ ಮಧುಸೂದನಃ ।**
**ದ್ವಾದಶೀಷು ಸದಾ ರಾಜನ್ನೋಪವಾಸೇನ ನಿತ್ಯಶಃ ॥ ೧೯ ॥**

---

೧೬-೧೭ ಸ್ವಾಮಿ, ಅತ್ರಿಮಹರ್ಷಿಗಳೇ! ತಮ್ಮಂತಹ ಮಹಾತ್ಮರ ದರ್ಶನವಾದ ಬಳಿಕ ತಮ್ಮ ದರ್ಶನ ಪಡೆದ ಜನರಿಗೆ ಸಕಲ ಪಾಪಗಳೂ ನಾಶವಾಗದೆ ಇರುತ್ತವೆಯೇ! ಸಕಲ ಮಂಗಳಪರಂಪರೆಗಳೂ ಉಂಟಾಗದೇ ಇದ್ದೀತೆ! ಎಂದು ರಾಜನು ಹೇಳಲು ಅತ್ರಿಋಷಿಗಳು ಮದ್ರರಾಜನೊಡನೆ ಇಂತು ಹೇಳಿದರು

೧೮ ಎಲೈ ರಾಜನೇ! ನಿನಗೆ ಈಗ ನಾನು ಹೇಳುವ ವಿಚಾರವನ್ನು ಮನಸ್ಸಿಟ್ಟು ಚೆನ್ನಾಗಿ ಕೇಳು. ಭಗವಂತನಾದ ಮಹಾವಿಷ್ಣುವಿನ ಅಪ್ಪಣೆಯಾದುದರಿಂದ ನಿನಗೆ ನನ್ನ ದರ್ಶನವು ಈಗ ಲಭ್ಯವಾಯಿತು

೧೯ ಎಲೈ ರಾಜೇಂದ್ರನೇ! ಈಗ ನಿನಗೆ ಭಗವಾನ್ ಮಧುಸೂದನನು ಪ್ರಸನ್ನನಾಗಿರುವನು ನೀನು ಹಿಂದೆ ಪ್ರತಿ ದ್ವಾದಶಿಯಲ್ಲಿಯೂ ಮಹಾವಿಷ್ಣುವನ್ನು ಭಕ್ತಿಯಿಂದ ಪೂಜಿಸುತ್ತಲಿದ್ದ ಅದರಿಂದ ಆ ಮಹಾಪ್ರಭುವು ಪ್ರಸನ್ನನಾಗಿರುವನು ಆದರೆ ಆಗ ನೀನು ರಜೋಗುಣದಿಂದ ಕೂಡಿ ಪೂಜೆಮಾಡುತ್ತಲಿದ್ದೆ ಆದರೂ ರಾಜ್ಯಾಧಿಪತ್ಯವನ್ನು ಕೊಡೆಂದು ಸಾತ್ವಿಕಭಾವದಿಂದ ಪೂಜೆಮಾಡುತ್ತಲಿದ್ದುದರಿಂದ ಈ ಜನ್ಮದಲ್ಲಿ ಮದ್ರರಾಜನಾಗಿ ಜನಿಸಿದೆ ದ್ವಾದಶೀ ಪೂಜಾಫಲದಿಂದ ಸ್ವರ್ಗಸದೃಶವಾದ ಈ ನನ್ನ ಪ್ರದೇಶವನ್ನು ನೋಡಿದವನಾದ ಮತ್ತು ಈ ಸ್ಥಳದಲ್ಲಿ ಕುಳಿತು ತಪಸ್ಸನ್ನು ಮಾಡಿ ಮಧುಸೂದನ ಸ್ವಾಮಿಯನ್ನು ಮೆಚ್ಚಿಸಿರುತ್ತೀಯೇ! ಎಲೈ ರಾಜನೇ ಕೇಳು! ನಾನೂ ಕೂಡ ಬಹು ವರ್ಷಕಾಲ ತಪಸ್ಸುಮಾಡಿ ಈ ಮಹಾನು

ಪೂಜಿತೋ ಭಗವಾನ್ವಿಷ್ಣುಸ್ತ್ವಯಾऽತೀತೇ ತು ಜನ್ಮನಿ ।
ರಾಜಸೇನ ತು ಭಾವೇನ ತ್ವಯಾ ದೇವಃ ಸಮರ್ಚಿತಃ ॥ ೨೦ ॥

ಅಪರಂ ಕಾಮಮಾಶ್ರಿತ್ಯ ರಾಜನ್ನಿಹತಕಂಟಕಂ ।
ಸಾತ್ವಿಕೇನ ತು ಭಾವೇನ ಪೂಜಯಿತ್ವಾ ಜನಾರ್ದನಂ ॥ ೨೧ ॥

ರಾಜ್ಯಂ ಮದ್ರೇಷು ಸಂಪ್ರಾಪ್ತಂ ನಿಷ್ಕಂಟಕಮರಿಂದಮ ।
ದ್ವಾಪದಶ್ಯಾರ್ಚಾಪ್ರಸನ್ನೇನ ದೇವದೇವೇನ ಚಕ್ರಿಣಾ ॥ ೨೨ ॥

ಪ್ರದರ್ಶಿತಮಿದಂ ಸ್ಥಾನಂ ಮದೀಯಂ ಸ್ವರ್ಗಸನ್ನಿಭಂ ।
ಇಹ ರಾಜಂಸ್ತವಸ್ತ್ವಾತ್ವಾ ದೇವದೇವಂ ಜನಾರ್ದನಂ ॥ ೨೩ ॥

ಆರಾಧ್ಯ ದೃಷ್ಟವಾನಸ್ಮಿ ಪುರಾ ವರ್ಷಗಣಾನ್ಬಹೂನ್ ।
ಪ್ರಾಪ್ಯಾನುಜ್ಞಾಂ ಹೃಷೀಕೇಶಾತ್ತ್ವತ್ಕೃತೇ ವಿವರೇ ಶುಭೇ ॥ ೨೪ ॥

ನಿತ್ಯಂ ಸನ್ನಿಹಿತಾ ರಾಜಂಸ್ತಸ್ಯೈವಾರ್ಚಾ ವಿನಿರ್ಮಿತಾ ।
ನಿಯೋಗಾದ್ದೇವದೇವಸ್ಯ ಪೂಜ್ಯತೇ ಸಿದ್ಧಸತ್ತಮೈಃ ॥ ೨೫ ॥

ನೇಯಂ ದೃಷ್ಟಾ ಮನುಷ್ಯೇಂದ್ರ ಮನುಷ್ಯೈರ್ನ ಚ ರಾಕ್ಷಸೈಃ ।
ಪಿಶಿತಾಶೈಸ್ತಥೈವಾನ್ಯೈರ್ದೃಷ್ಟಪೂರ್ವಾ ಕಥಂಚನ ॥ ೨೬ ॥

ಅಸ್ಮಿನ್ಸ್ವರ್ಗೋಪಮೇ ದೇಶೇ ತ್ವಯಾಲೌಲ್ಯೇನ ಕರ್ಮಣಾ ।
ಆರಾಧಿತೋ ಜಗನ್ನಾಥೋ ದೇವಶ್ಚಕ್ರಗದಾಧರಃ ॥ ೨೭ ॥

---

ಭಾವನ ದರ್ಶನವನ್ನು ಪಡೆದು ಆ ಮಹಾಪ್ರಭುವಿನ ಅಪ್ಪಣೆಯಿಂದ ಈ ಗುಹೆಯನ್ನು ನಿರ್ಮಾಣಮಾಡಿದನು. ಈ ರೀತಿ ಹೃಷೀಕೇಶನ ಆಜ್ಞಾನುಸಾರವಾಗಿ ನಿರ್ಮಿತವಾದ ಈ ಪ್ರದೇಶದಲ್ಲಿ ಅಂದಿನಿಂದಿಂದಿಗೂ ಈ ವಿಧವಾದ ಅರ್ಚನೆಯು ನಡೆಯುತ್ತಾ ಬಂದಿದೆ ಮತ್ತು ಸ್ವಾಮಿಯ ಅಪ್ಪಣೆಯನ್ನು ಪಡೆದು ಸಿದ್ಧಸಾಧ್ಯರೆಲ್ಲರೂ ಇಲ್ಲಿ ಪೂಜಮಾಡಿಕೊಂಡು ಹೋಗುತ್ತಿದ್ದಾರೆ

೨೬-೩೦ ಎಲೈ ನರೇಂದ್ರನೇ! ಈ ಪ್ರದೇಶವು ಮನುಷ್ಯರಿಂದಾಗಲೀ, ರಾಕ್ಷಸರಿಂದಾಗಲೀ, ಇತರರಿಂದಾರಿಂದಲಾಗಲೀ ಎಂದಿಗೂ ನೋಡಲ್ಪಟ್ಟಿಲ್ಲ. ಇಂತಹ ಸ್ವರ್ಗ ಸದೃಶವಾದ ಪವಿತ್ರ ಪ್ರದೇಶದಲ್ಲಿ ನೀನು ಬಹಳ ಲೋಲನಾಗಿಯೇ ಇದ್ದು

ಆಸನ್ನಫಲಮೂಲೇಽಪಿ ಬಹುಗೋರಸಸಂಯುತೇ ।
ಕ್ಷೌದ್ರಯುಕ್ತಶಿಲಾಪ್ರಾಯೇ ಸಮೂಕ್ಷಿಕಫಲೈರ್ಯುತೇ ॥ ೨೮ ॥

ಕೇವಲಾಂಭೋಽಶಿನಾ ತಪ್ತಂ ಯತ್ತ್ವಯಾ ಪರಮಂ ತಪಃ ।
ತೇನ ತೇಽಹಂ ವರಂ ದದ್ಮಿ ಯದಭೀಷ್ಟಂ ತವಾನಘ ॥ ೨೯ ॥

ಅಚಿರೇಣೈವ ಕಾಲೇನ ತ್ವಯಾ ರಾಜನ್ಕೃತಂ ತಪಃ ।
ರೂಪಾರ್ಥಂ ರೂಪಲಾಭಾಯ ಪ್ರಾಪ್ತಂ ಮೇ ಗದತಃ ಶೃಣು ॥ ೩೦ ॥

ತದ್ವ್ರತಂ ಯೇ ಕರಿಷ್ಯಂತಿ ಮನುಜೇಶ್ವರ ಮಾನವಾಃ ।
ಸ್ತ್ರಿಯೋ ವಾಪಿ ನರಶ್ರೇಷ್ಠ ಪ್ರಾಪ್ಸ್ಯಂತೇ ರೂಪಮುತ್ತಮಂ ॥ ೩೧ ॥

ಧರ್ಮಿಷ್ಠತಾಂ ತಥಾಽರೋಗ್ಯಂ ಕುಲೇ ಜನ್ಮ ತಥೋತ್ತಮೇ ॥ ೩೨ ॥

ಜನ್ಮಾಂತರಮಥಾಸಾದ್ಯ ಸ್ವರ್ಗಲೋಕಂ ತಥಾವಿಧಂ ।
ಸ್ವರ್ಗಲೋಕಾತ್ಪರಿಭ್ರಷ್ಟಾ ಮಾನುಷ್ಯೇ ಗುಣಸಂಯುತಾಃ ॥ ೩೩ ॥

ಕೊಂಡು ಭಗವಂತನನ್ನಾರಾಧಿಸಿ ಆತನನ್ನು ಮೆಚ್ಚಿಸಿಕೊಂಡಿದ್ದೀಯೆ! ಈ ಕಾಡಿನಲ್ಲೆಲ್ಲೆಲ್ಲಿ ನೋಡಿದರೂ ಬೇಕು ಬೇಕಾದ ಹಣ್ಣು ಹಂಪಲುಗಳೂ, ಗಡ್ಡೆ ಗೆಣಸುಗಳೂ ಹಾಲು, ತುಪ್ಪ, ಮೊಸರುಗಳೂ ಯಥೇಚ್ಛವಾಗಿ ತುಂಬಿದ್ದ ಇಷ್ಟೆಲ್ಲಾ ಆಹಾರ ಪದಾರ್ಥಗಳು ವಿಶೇಷ ಸಂಗ್ರಹ ವಸ್ತುವೇಶಗಳಿದ್ದಾಗ್ಯೂ ನೀನು ಅದೊಂದನ್ನೂ ಉಪಯೋಗಿಸದ ಬರೀ ನೀರನ್ನು ಕುಡಿದುಕೊಂಡೇ ತಪಸ್ಸುಮಾಡಿ ಭಗವಂತನನ್ನೊಲಿಸಿಕೊಂಡಿರುತ್ತೀಯೋ! ಈ ಕಾರಣದಿಂದ ನಾನು ತೃಪ್ತನಾಗಿ ನಿನಗೆ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೊಡುತ್ತೇನೆ ನೀನು ಸೌಂದರ್ಯಶಾಲಿಯಾಗಬೇಕೆಂದು ಬಯಸಿ ಬಹಳ ಕಷ್ಟಪಟ್ಟು ತಪಸ್ಸು ಮಾಡಿರುತ್ತೀಯೋ! ಆದ್ದರಿಂದ ನೀನು ಭಗವಂತನನ್ನು ಮೆಚ್ಚಿಸಿಕೊಂಡಿರುವುದರಿಂದ ನಾನೊಂದು ಮಾತನ್ನು ಹೇಳುತ್ತೇನೆ, ಕೇಳು

೩೧-೩೭। ಎಲೈ ಮನುಜೇಶ್ವರನೇ! ನಾನು ಈಗ ನಿನಗೆ ಒಂದು ವ್ರತವನ್ನು ಹೇಳುತ್ತೇನೆ ಕೇಳು ಆ ವ್ರತವನ್ನು ಹೆಂಗಸಾಗಲೀ, ಗಂಡಸಾಗಲೀ ಯಾರೇ ಆಗಲೀ ಮಾಡಿದರೆ ಅವರು ಮಹಾರೂಪವಂತರಾಗುತ್ತಾರೆ ಮತ್ತು ಲೋಕದಲ್ಲಿ ಪರಮಸೌಭಾಗ್ಯಶಾಲಿಗಳಾಗಿ ಲಾವಣ್ಯವಂತರಾಗಿ ಧರ್ಮನಿರತರಾಗಿ ಆರೋಗ್ಯವಂತರಾಗಿರುವ ಉತ್ತಮ ಕುಲೋತ್ಪನ್ನರ ಮನೆಯಲ್ಲಿ ಹುಟ್ಟುತ್ತಾರೆ. ಹೀಗೆ ಹುಟ್ಟಿ ಆ ಜನ್ಮದಲ್ಲಿ ಸುಖ

ಬ್ರಾಹ್ಮಣಾ ಧನಸಂಪನ್ನಾ ಭವಿಷ್ಯಂತ್ಯಥವಾ ನೃಪಾಃ ।
ಜನ್ಮಾಂತರೇಷು ಸಂಪ್ರಾಪ್ಯ ಸರ್ವಸ್ಯೈವ ಫಲಪ್ರದಾಃ ॥ ೩೪ ॥

ರೂಪವಂತೋ ಮಹಾರಾಜ ಇಹಾಮುತ್ರ ಚ ತೇಽನಘಾಃ ।
ಯಸ್ಮಾತ್ತ್ವಯಾ ತಪಸ್ತಪ್ತಂ ಕೇಶವಶ್ಚಾಥ ಪೂಜಿತಃ ॥ ೩೫ ॥

ಮಯಾ ಸಮಾಗಮಶ್ಚಾಪಿ ಗಂಧರ್ವೈಶ್ಚ ಸಹಸ್ರಶಃ ।
ಇಹೈವ ಕೃತ್ವಾ ಧರ್ಮಜ್ಞ ರೂಪಸತ್ರಂ ಮಹಾಬಲಂ ।
ದಿವ್ಯರೂಪಧರೋ ಭೂತ್ವಾ ಸ್ವರಾಷ್ಟ್ರಂ ಗಂತುಮರ್ಹಸಿ ॥ ೩೬ ॥

ಏತಾವದುಕ್ತಃ ಸ ತು ಮದ್ರನಾಥೋ
ಮಹಾತ್ಮನಾ ತೇನ ನರೇಂದ್ರಸಿಂಹ ।

ವಾಗಿದ್ದರೂ ನಕ್ಷತ್ರಲೋಕದಲ್ಲೂ ಸಹ ಅದೇ ಏಕವಾದ ಸ್ವರ್ಗ ಭೋಗವನ್ನನುಭವಿಸು ತ್ತಾರೆ ಆ ಪುಣ್ಯವು ಮುಗಿದ ಬಳಿಕ ಸ್ವರ್ಗಲೋಕದಿಂದ ಕೆಳಕ್ಕೆ ಬಂದು ಪುನಃ ಮನುಷ್ಯ ಜನ್ಮದಲ್ಲಿ ಹುಟ್ಟುತ್ತಾರೆ ಆರೀತಿ ಮನುಷ್ಯ ಜನ್ಮದಲ್ಲಿ ಹುಟ್ಟುವಾಗ ಒಕ್ಕೇ ಧನಿಕರಾದ ಬ್ರಾಹ್ಮಣರ ಮನೆಯಲ್ಲಾಗಲೀ, ರಾಜನ ಮನೆಯಲ್ಲಾಗಲೀ, ಜನ್ಮವನ್ನು ಹೊಂದುತ್ತಾರೆ ಈರೀತಿ ಜನ್ಮಾಂತರದಲ್ಲಿ ಜನಿಸಿದಾಗಲೆಲ್ಲಾ ಸಕಲ ಸಂಪತ್ತನ್ನೂ ಹೊಂದಿದವರಾಗಿ ಈ ಲೋಕ ಪರಲೋಕಗಳಲ್ಲಿ ರೂಪವಂತರಾಗಿಯೇ ಇರುತ್ತಾರೆ ಎಲೈ ರಾಜನೇ! ಯಾವ ಕಾರಣದಿಂದ ನೀನು ತಪಸ್ಸುಮಾಡಿ ಭಗವದನುಗ್ರಹವನ್ನು ಪಡೆದೆಯೋ ಮತ್ತಾದಾವ ಕಾರಣದಿಂದ ಸಹ ಸ್ರಾವಧಿ ಗಂಧರ್ವರನ್ನು ದರ್ಶನಮಾಡಿದೆಯೋ ಮತ್ತು ಇನ್ನಾವ ಕಾರಣದಿಂದ ನನ್ನೊಡನೆ ಈಗ ಕೂಡಿ ಮಾತನಾಡುತ್ತಿರುವೆಯೋ ಅವರ ಫಲವಾಗಿ ಈ ಲೋಕದಲ್ಲಿ ಈ ಜನ್ಮ ದಲ್ಲಿಯೇ ನೀನು ರೂಪಸತ್ರವೆಂಬ ಮಹಾಯಾಗವನ್ನು ಮಾಡಿ ಇಲ್ಲೇ ದಿವ್ಯರೂಪ ವನ್ನು ಧರಿಸಿ ನಿನ್ನ ಊರಿಗೆ ಹೋಗು. ನಿನ್ನ ಕೋರಿಕೆ ನೆರವೇರುವುದು ಈ ನಿನ್ನ ಕುರೂಪವೂ ಹೋಗುವುದೆಂದು ಆ ಅತ್ರಿ ಋಷಿಗಳು ಆ ಮದ್ರರಾಜನೊಡನೆ ವಿವರಿಸ ಲಾಗಿ, ಆ ಮದ್ರಾರಾಜನು ಮಹಾಸ್ವಾಮಿ, ಅತ್ರಿಗಳೇ! ಆ ಸತ್ರಯಾಗ (ಸೌಂದರ್ಯ

ಸಪ್ರಚ್ಛ ತಂ ಧರ್ಮಭೃತಾಂ ವರಿಷ್ಠಃ
ಸತ್ರಸ್ಯ ತಸ್ಯಾತಿಶಯಂ ವಿಧಾನಂ ॥ ೩೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಪುರೂರವಸೋಽತ್ರಿದರ್ಶನಂ ನಾಮ ಚತುಃ ಪಂಚಾಶದಧಿಕ ಶತತಮೋಽಧ್ಯಾಯಃ

ಸಂಪಾದಕವಾದ ಯಜ್ಞ ಅಥವಾ ವ್ರತ) ದ ವಿಧಾನವೇನು ? ದಯವಿಟ್ಟು ಅಪ್ಪಣೆ ಕೊಡಿಸಬೇಕೆಂದು ಕೇಳಿಕೊಂಡನು.

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಪುರೂರವ (ಮದ್ರರಾಜ) ನಿಗೆ ಅತ್ರಿ ದರ್ಶನವಾದ ದೆಂಬ ಹೆಸರಿನ ಒಂದುನೂರ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಪಂಚಪಂಚಾಶದಧಿಕಶತತಮೋಽಧ್ಯಾಯಃ ॥

---

॥ ಪುರೂರವಾ ಉವಾಚ ॥

ಶ್ರೋತುಮಿಚ್ಛಾಮಿ ಭಗವನ್ರೂಪಸತ್ರಂ ಮಹಾಫಲಂ ।
ಯತ್ಸಮಾಪ್ತೌ ಭವಿಷ್ಯಾಮಿ ದಿವ್ಯರೂಪಧರೋ ಮುನೇ ॥ ೧ ॥

॥ ಅತ್ರಿರುವಾಚ ॥

ತತ್ಸತ್ರಂ ಕರ್ತುಕಾಮೇನ ಚಾನ್ವೇಷ್ಯೋ ಬ್ರಾಹ್ಮಣೋ ಗುರುಃ ।
ಜ್ಯೋತಿಷಂ ಯೋ ವಿಜಾನಾತಿ ಇತಿಹಾಸಾಂಶ್ಚ ಕೃತ್ಸ್ನಶಃ ॥ ೨ ॥

ತತ್ಪ್ರದಿಷ್ಟೇನ ವಿಧಿನಾ ಪಾದರ್ಕ್ಷಾತ್ಪ್ರಭೃತಿ ಕ್ರಮಾತ್ ।
ಉಪೋಷಿತವ್ಯಂ ನಕ್ಷತ್ರಂ ಪ್ರತ್ಯೇಕಂ ತನ್ನಿಬೋಧ ಮೇ ॥ ೩ ॥

---

### ಒಂದುನೂರ ಐವತ್ತೈದನೆಯ ಅಧ್ಯಾಯವು.

೧ ಪುರೂರವನು (ಹಿಂದಿನ ಜನ್ಮದ ಮದ್ರರಾಜನು) ಕೇಳುತ್ತಾನೆ — ಎಲೈ ಅತ್ರಿಮಹರ್ಷಿಗಳೇ ಯಾವ ವ್ರತವು ಸಮಾಪ್ತಿಯಾಗುವುದರೊಳಗಾಗಿ ದಿವ್ಯರೂಪವನ್ನು ನಾನು ಧರಿಸಬಲ್ಲೆನೋ ಅಂತಹ ಮಹಾ ಫಲದಾಯಕವಾದ ರೂಪಸತ್ರವನ್ನು ಮಾಡುವ ಕ್ರಮವನ್ನು ದಯಮಾಡಿ ತಿಳಿಸಿರಿ

೨-೩ ಅತ್ರಿಋಷಿಗಳು ಹೇಳುತ್ತಾರೆ —ಆ ರೂಪಸತ್ರವನ್ನು ಮಾಡಬೇಕೆಂದಾಶೆಪಡತಕ್ಕವನು ಒಬ್ಬ ಬ್ರಾಹ್ಮಣ ಗುರುವನ್ನು ಗೊತ್ತುಮಾಡಿಕೊಳ್ಳಬೇಕು ಆ ಗುರುವಿಗೆ ಜ್ಯೋತಿಶ್ಶಾಸ್ತ್ರವೂ, ಇತಿಹಾಸಶಾಸ್ತ್ರವೂ ಸಹ ಚೆನ್ನಾಗಿ ಸಮಗ್ರವಾಗಿ ತಿಳಿದಿರಬೇಕು ಆ ವ್ರತದಲ್ಲಿ ಹೇಳಿರುವ ವಿಧಿಯನ್ನನುಸರಿಸಿ ಪಾದನಕ್ಷತ್ರಗಳಿಂದ ಆರಂಭಿಸಿ ಉಪೋಷ್ಯ ಮಾಡಬೇಕು ಆ ನಕ್ಷತ್ರವಾವುದೆಂಬುದನ್ನು ತಿಳಿಸುತ್ತೇನೆ ಕೇಳು

ಫಾಲ್ಗುನ್ಯಾಂ ಸಮತೀತಾಯಾಂ ಕೃಷ್ಣಪಕ್ಷಾಷ್ಟಮೀ ತು ಯಾ ।
ಸಮೂಲಾಂ ತಾಂ ತು ಸಂಪ್ರಾಪ್ಯ ವ್ರತಂ ಗೃಹ್ಣೀತ ಮಾನವಃ ॥ ೪ ॥

ಉಪೋಷಿತವ್ಯಂ ನಕ್ಷತ್ರಂ ನಕ್ಷತ್ರಸ್ಯ ಚ ದೈವತಂ ।
ವರುಣಂ ಚ ತಥಾ ಚಂದ್ರಂ ಪೂಜಯೇದ್ವಿಧಿನಾ ನರಃ ॥ ೫ ॥

ಪೂಜಯೇದ್ದೇವದೇವೇಶಂ ಭಗವಂತಂ ಜನಾರ್ದನಂ ।
ಉಪೋಷ್ಯ ಸಂಗಂ ದೇವಸ್ಯ ಪ್ರಯತ್ನೇನ ಚ ಪೂಜಯೇತ್ ॥ ೬ ॥

ತತೋಽಗ್ನಿಹವನಂ ಕೃತ್ವಾ ಪೂಜಯಿತ್ವಾ ತಥಾ ಗುರುಂ ।
ಉಪವಾಸಸ್ತು ಕರ್ತವ್ಯೋ ದ್ವಿತೀಯೇಽಹನಿ ಪಾರ್ಥಿವ ॥ ೭ ॥

ಉಪೋಷ್ಯ ಋಕ್ಷೇ ವಿಗತೇ ಸ್ನಾತ್ವಾ ಸಂಪೂಜ್ಯ ಕೇಶವಂ ।
ಕೃತ್ವಾಽಗ್ನಿಹವನಂ ಶಕ್ತ್ಯಾ ಪೂಜಯಿತ್ವಾ ದ್ವಿಜೋತ್ತಮಾನ್ ॥ ೮ ॥

---

೪ ಫಾಲ್ಗುಣಮಾಸವು ಕಳೆದುಹೋಗುತ್ತಿರುವಾಗ ಬಹುಳ ಅಷ್ಟಮಿಯು ಯಾವಾಗ ಮೂಲಾ ನಕ್ಷತ್ರದಿಂದ ಕೂಡಿಕೊಂಡು ಬರುತ್ತದೋ ಆ ಸಮಯವನ್ನು ತಿಳಿದುಕೊಂಡು ಆ ವ್ರತವನ್ನು ಹಿಡಿಯಬೇಕು.

೫. ಆ ಮೂಲಾನಕ್ಷತ್ರದ ದಿವಸ ಉಪವಾಸವಾಗಿದ್ದು ಆ ನಕ್ಷತ್ರವನ್ನೂ ಆ ನಕ್ಷತ್ರ ದೇವತೆಯನ್ನೂ ವರುಣನನ್ನೂ ಮತ್ತು ಚಂದ್ರನನ್ನೂ ಸಹ ವಿಧ್ಯುಕ್ತವಾಗಿ ಪೂಜಮಾಡಬೇಕು.

೬-೭ ಆ ಬಳಿಕ ಭಗವಂತನಾದ ಜನಾರ್ದನನನ್ನು ಪೂಜಿಸಿ ಹೋಮವನ್ನು ಮಾಡಿ ಗುರುಪೂಜೆಯನ್ನು ಸಹ ಮಾಡಬೇಕು. ಆರೀತಿ ಪೂಜೆ ಮಾಡಿದ ನಂತರ ಆ ದಿವಸವೆಲ್ಲಾ ಉಪವಾಸವಿರಬೇಕು.

೮-೯ ಈರೀತಿ ಹಿಂದಿನ ದಿನ ಉಪವಾಸವಾಗಿದ್ದು ಆ ನಕ್ಷತ್ರವು ಕಳೆದ ಬಳಿಕ ಮಾರನೆ ದಿನ ಸ್ನಾನಮಾಡಿ ಪರಮಾತ್ಮನನ್ನು ಪೂಜಿಸಿ ಅಗ್ನಿ ಹೋಮಾದಿಗಳನ್ನು ಮಾಡಿ ತನ್ನ ಶಕ್ತ್ಯಾನುಸಾರವಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ತಾನು ಮಾತ್ರ ಹವಿಸ್ಸನ್ನು (ಹುರಿದ ಅಕ್ಕಿ ಅನ್ನ) ಭೋಜನಮಾಡಬೇಕು.

ಹವಿಷ್ಯಮನ್ನಂ ಭೋಕ್ತವ್ಯಂ ಶೃಣು ಚಾಂಗಕ್ರಮಂ ಮಮ ।
ಪಾದಯೋಃ ಕಥಿತಂ ಮೂಲಂ ಪ್ರಾಜಾಪತ್ಯಂ ತು ಜಂಘಯೋಃ ॥ ೯ ॥

ಆಶ್ವಿನಂ ಜಾನುಯುಗಲಂ ಜೋರುಯುಗ್ಮಂ ಚ ಪಾರ್ಥಿವ ।
ಸಂಹಿತೇ ದ್ವೇ ತಥಾಷಾಢೇ ಗುಹ್ಯೇ ಚ ಸಹಿತೇ ಸ್ಮೃತೇ ॥ ೧೦ ॥

ಪೂರ್ವೋತ್ತರೇ ಚ ಫಾಲ್ಗುನ್ಯೌ ಕೃತ್ತಿಕಾಸು ಕಟಿರ್ಭವೇತ್ ।
ಪಾರ್ಶ್ವಯೋಃ ಕುಕ್ಷಿಯುತಯೋರ್ನಕ್ಷತ್ರತ್ರಿತಯಂ ಮತಂ ॥ ೧೧ ॥

ಉಭೇ ಪ್ರೋಷ್ಠಪದೇ ರಾಜನ್ರೇವತೀ ಚ ತಥಾ ಭವೇತ್ ।
ಉರೋಽನುರಾಧಾಸು ತಥಾ ಪೃಷ್ಠಂ ನಿಷ್ಠ್ಯಾಸು ಕೀರ್ತಿತಂ ॥ ೧೨ ॥

ಭುಜೌ ಜ್ಞೇಯೌ ವಿಶಾಖಾಸು ಹಸ್ತೇ ಪ್ರೋಕ್ತೌ ತಥಾ ಕರೌ ।
ಅಂಗುಲ್ಯಶ್ಚ ತಥಾ ಪ್ರೋಕ್ತಾ ರಾಜಸಿಂಹ ಪುನರ್ವಸೌ ॥ ೧೩ ॥

ಆಶ್ಲೇಷಾಯಾಂ ತಥಾ ಪ್ರೋಕ್ತಾ ಜ್ಯೇಷ್ಠಾಯಾಂ ನೃಪ ಕಂಧರಾ ।
ಶ್ರವಣೌ ಶ್ರವಣೌ ಜ್ಞೇಯೌ ಮುಖಂ ಪುಷ್ಯೇ ಪ್ರಕೀರ್ತಿತಂ ॥ ೧೪ ॥

ದಂತಾಃ ಸ್ವಾತೌ ಶತಭಿಷಾ ಹನೂ ಪ್ರೋಕ್ತೌ ತಥಾ ನೃಪ ।
ಮಘಾಯಾಂ ನಾಸಿಕಾ ಪ್ರೋಕ್ತಾ ಮೃಗಶೀರ್ಷೇ ಚ ಲೋಚನೇ ॥ ೧೫ ॥

---

ಇನ್ನು ಅಂಗಕ್ರಮವನ್ನು ವಿವರಿಸುವೆನು ಕೇಳಯ್ಯಾ ಮದ್ರರಾಜ! ಮಹಾವಿಷ್ಣುವಿನ ಪಾದಮೂಲದಲ್ಲಿ ಮೂಲಾನಕ್ಷತ್ರವನ್ನೂ ಎರಡು ತೊಡೆಗಳಲ್ಲಿ ರೋಹಿಣೀ ನಕ್ಷತ್ರವನ್ನೂ, ಮೊಲಕಾಲುಗಳಲ್ಲಿ ಅಶ್ವಿನೀ ನಕ್ಷತ್ರವನ್ನೂ ಪೂರ್ವಾಷಾಢ ಉತ್ತರಾಷಾಢ ನಕ್ಷತ್ರಗಳನ್ನು ತೊಡೆಯ ಸಂದಿಯಲ್ಲಿಯೂ ಗುಹ್ಯ ಪ್ರದೇಶದಲ್ಲಿ ಪೂರ್ವೋತ್ತರ ಫಲ್ಗುನೀ (ಪುಬ್ಬ-ಉತ್ತರ) ನಕ್ಷತ್ರಗಳನ್ನೂ, ಕೃತ್ತಿಕಾ ನಕ್ಷತ್ರವನ್ನು ಸೊಂಟದಲ್ಲಿಯೂ ಎರಡು ಪಕ್ಕೆಗಳಲ್ಲೂ, ಹೊಟ್ಟೆಯಲ್ಲಿಯೂ, ಉತ್ತರಾಭಾದ್ರಪದ, ಪೂರ್ವಾಭಾದ್ರಪದ, ರೇವತಿ ಈ ಮೂರು ನಕ್ಷತ್ರಗಳನ್ನೂ, ಅನೂರಾಧಾ ನಕ್ಷತ್ರವನ್ನು ಎದೆಯಲ್ಲಿಯೂ, ಜ್ಯೇಷ್ಠಾ ನಕ್ಷತ್ರವನ್ನು ಬೆನ್ನಿನಲ್ಲಿಯೂ, ವಿಶಾಖಾ ನಕ್ಷತ್ರವನ್ನು ಎರಡು ಭುಜಗಳಲ್ಲಿಯೂ, ಹಸ್ತ ಚಿತ್ತಾ ನಕ್ಷತ್ರಗಳನ್ನು ಎರಡು ಕೈಗಳಲ್ಲಿಯೂ, ಪುನರ್ವಸು ಪುಷ್ಯ ನಕ್ಷತ್ರಗಳೆರಡನ್ನೂ ಕೈಬೆರಳುಗಳಲ್ಲಿಯೂ ಆಶ್ಲೇಷಾ ಜ್ಯೇಷ್ಠಾ ನಕ್ಷತ್ರಗಳನ್ನು ಕತ್ತಿನಲ್ಲಿಯೂ ಶ್ರವಣ ನಕ್ಷತ್ರವನ್ನು ಎರಡು ಕಿವಿಗಳಲ್ಲಿಯೂ, ಪುಷ್ಯ ನಕ್ಷತ್ರವನ್ನು

ಚಿತ್ರಾ ಲಲಾಟೇ ವಿಜ್ಞೇಯಾ ಭರಣ್ಯಶ್ಚ ತಥಾ ಶಿರಃ ।
ಶಿರೋರುಹಸ್ತ್ಥಾಧಾರ್ದ್ರಾಸು ವ್ರತಸ್ಯಾಂತೇ ನರಾಧಿಪ ॥ ೧೬ ॥

ಮಾಘಶುಕ್ಲಾವಸಾನೇ ತು ಸತ್ರಂ ಪರಿಸಮಾಪ್ಯತೇ ।
ಯದ್ಯಂತರಾಯಂ ನ ಭವೇತ್ಕಿಂಚಿಚ್ಛೌಚನಿಮಿತ್ತಜಂ ॥ ೧೭ ॥

ಅಂತರಾಯಂ ಮಹಾರಾಜ ಯದಿ ಶೌಚನಿಮಿತ್ತಜಂ ।
ಉಪೋಷ್ಯಮೇವೋಪವಸೇನ್ನಕ್ಷತ್ರಮುಪರಂ ಪುನಃ ॥ ೧೮ ॥

ಕ್ರಮಪ್ರಾಪ್ತಂ ಹಿ ನಕ್ಷತ್ರಂ ಚಾಶುದ್ಧ್ಯಾಮುಪವರ್ಜಿತಂ ।
ಉಲ್ಲಂಘಯನ್ಮಹೀಪಾಲ ಪ್ರತ್ಯವಾಯಂ ಸಮಶ್ನುತೇ ॥ ೧೯ ॥

ಅಂಗಕ್ರಮೇಣ ಸಕಲಮ್ಮೃಕ್ಷವರ್ಗಮುಪೋಷಿತಃ ।
ವ್ರತಾಂತೇ ಪ್ರಯತಃ ಸ್ನಾತ್ವಾ ಪೂಜಯೇನ್ಮಧುಸೂದನಂ ॥ ೨೦ ॥

ಚಂದನಾಗುರುಕರ್ಪೂರಮ್ಮೃಗದರ್ಪೈಃ ಸಕುಂಕುಮೈಃ ।
ಜಾತೀವಲ್ಲೈಃ ಸಕಂಕೋಲೈರ್ಲವಂಗಕುಸುಮೈಸ್ತಥಾ ॥ ೨೧ ॥

ಬೋಲಗುಗ್ಗುಲನಿರ್ಯಾಸೈಃ ಪುಷ್ಪೈಃ ಕಾಲೋದ್ಭವೈಃ ಶುಭೈಃ ।
ಧೂಪೋ ನರೇಂದ್ರಾಗುರುಣಾ ಚಂದನೇನ ಸುಗಂಧಿನಾ ॥ ೨೨ ॥

ದೀಪಾಶ್ಚ ದೇಯಾ ರಾಜೇಂದ್ರ ತಿಲತೈಲಪ್ರಪೂರಿತಾಃ ।
ದೀಪೇಷು ವರ್ತಯಃ ಕಾರ್ಯಾ ಮಹಾರಂಜನರಂಜಿತಾಃ ॥ ೨೩ ॥

---

ಮುಖದಲ್ಲಿಯೂ, ಸ್ವಾತಿಯನ್ನು ದಂತಗಳಲ್ಲಿಯೂ, ಶತಭಿಷೆಯನ್ನು ಎರಡು ಕೆನ್ನೆಗಳಲ್ಲಿಯೂ, ಮಘಾ ನಕ್ಷತ್ರವನ್ನು ಮೂಗಿನಲ್ಲಿಯೂ, ಮೃಗಶಿರಾ ನಕ್ಷತ್ರವನ್ನು ಕಣ್ಣುಗಳಲ್ಲಿಯೂ, ಚಿತ್ರಾನಕ್ಷತ್ರವನ್ನು ಹಣೆಯಲ್ಲಿಯೂ, ಭರಣೀನಕ್ಷತ್ರವನ್ನು ತಲೆಯಲ್ಲಿಯೂ, ಆರ್ದ್ರಾ ನಕ್ಷತ್ರವನ್ನು ಕೂದಲುಗಳಲ್ಲಿಯೂ ಧ್ಯಾನಿಸುವ ಕ್ರಮವು ಅಂಗಧ್ಯಾನವೆನಿಸಿಕೊಳ್ಳುತ್ತದೆ ಈರೀತಿ ವ್ರತವನ್ನು ಮಾಡಿದ ಬಳಿಕ ಮಾಘಮಾಸದ ಪೌರ್ಣಿಮೆ ಕಳೆದ ಬಳಿಕ ವ್ರತವನ್ನು ಮುಗಿಸಬೇಕು ಈರೀತಿ ಈ ವ್ರತವನ್ನು ಒಂದು ತಿಂಗಳು ಮಾಡಬೇಕು ಯಾವ ವಿಘ್ನವೂ ಅಂದರೆ ಜಾತಾಶೌಚ ಮೃತಾ

ನೈವೇದ್ಯಂ ಚ ತಥಾ ಕಾರ್ಯಂ ಪರಮಾನ್ನೇನ ಭೂರಿಣಾ ।
ದಧ್ನಾ ಕ್ಷೀರಾಮೃತಾಭ್ಯಾಂ ಚ ಮಧುನಾ ಚ ಗುಡೇನ ಚ　　॥ ೨೪ ॥

ಸಿತಯಾ ಚ ತಥಾ ಭಕ್ಷ್ಯೈಃ ಫಲಮೂಲೈರ್ಯಥಾವಿಧಿ ।
ಅಪೂಪೈಃ ಪಾನಕೈರ್ಹೃದ್ಯೈಃ ಶೀತಲೈಶ್ಚ ಸುಗಂಧಿಭಿಃ　　॥ ೨೫ ॥

ಲವಣಸ್ಯ ಚ ಪಾತ್ರಾಣಿ ಕೃಸರಂ ಚ ನಿವೇದಯೇತ್ ।
ಸರ್ವಬೀಜಾನಿ ರಾಜೇಂದ್ರ ಭೂಷಣಾನಿ ಚ ಶಕ್ತಿತಃ　　॥ ೨೬ ॥

ಮಹಾರ್ಹಾಣಿ ಚ ವಸ್ತ್ರಾಣಿ ಭಕ್ತ್ಯಾ ಪ್ರಯತಮಾನಸಃ ।
ತದ್ವಿಷ್ಣೋಃ ಪರಮಮಿತಿ ಹೋಮಃ ಕಾರ್ಯೋ ಹ್ಯನಂತರಂ　　॥ ೨೭ ॥

ದ್ವಾದಶಾಕ್ಷರಕಂ ಮಂತ್ರಂ ಸ್ತ್ರೀಶೂದ್ರೇಷು ವಿಧೀಯತೇ ।
ಘೃತಂ ಮಾಕ್ಷಿಕಸಂಯುಕ್ತಂ ಜುಹುಯಾತ್ತಿಲತಂಡುಲಂ　　॥ ೨೮ ॥

---

ಶೌಚಗಳಿಂದುಂಟಾದ ವೈಲಿಗೆ ಮುಂತಾದುವುಗಳು ಮಧ್ಯದಲ್ಲಿ ಬಂದು ವಿಘ್ನ ಸಂಭವಿಸಿದರೆ ಆ ವೈಲಿಗೆ ಕಳೆದ ಮೇಲೆ ವ್ರತವನ್ನು ಮುಗಿಸಬೇಕು. ಅಂಥಾ ಅನುಪಪತ್ತಿ ಏನಾದರೂ ಆಕಸ್ಮಾತ್ತಾಗಿ ಸಂಭವಿಸಿದರೆ ಆ ನಕ್ಷತ್ರವು ಪುನಃ ಬರುವವರಿವಿಗೂ ಉಪವಾಸದಿಂದಿದ್ದು ಆ ನಕ್ಷತ್ರವು ಪುನಃ ಬಂದ ಸಮಯದಲ್ಲಿಯೇ ಪುನಃ ವ್ರತವನ್ನಾರಂಭಿಸಿ ಮುಗಿಸಬೇಕು ವ್ರತ ಮುಗಿದ ಒಳಿಕ ಮಹಾವಿಷ್ಣುವನ್ನು ಮೇಲೆ ಬರೆದ ಶ್ಲೋಕಗಳಲ್ಲಿ ಹೇಳಿರುವ ಕ್ರಮದಂತೆ ಷೋಡಶೋಪಚಾರಗಳಿಂದ ಪೂಜೆ ಮಾಡಬೇಕು ಮತ್ತು ಭಕ್ಷ್ಯಭೋಜ್ಯಗಳನ್ನು ನಿವೇದಿಸಬೇಕು

೨೬-೩೦ ಸಕಲ ಬೀಜ (ಧಾನ್ಯ) ಗಳನ್ನೂ ಭೂಷಣಗಳನ್ನೂ ಬಹು ಬೆಲೆಯುಳ್ಳ ವಸ್ತ್ರಗಳನ್ನೂ ಭಕ್ತಿಯಿಂದಲೂ, ಪರಿಶುದ್ಧವಾದ ಮನಸ್ಸಿನಿಂದಲೂ ದೇವರಿಗೆ ಸಮರ್ಪಿಸಬೇಕು ಒಳಿಕ ತದ್ವಿಷ್ಣೋಃ ಪರಮಂ ಪದಂ ಎಂಬ ಮಂತ್ರದಿಂದ ಹೋಮಗಳನ್ನು ಮಾಡಬೇಕು ಸ್ತ್ರೀಯರೂ, ಶೂದ್ರರೂ ಈ ವ್ರತವನ್ನು ಮಾಡುವುದಾದರೆ ಈ ವೇದಮಂತ್ರದ ಬದಲು ದ್ವಾದಶಾಕ್ಷರ ಮಂತ್ರವನ್ನು ಉಪಯೋಗಿಸಬೇಕು (ಓಂ ನಮೋ ಭಗವತೇ ವಾಸುದೇವಾಯ ಇದೇ ದ್ವಾದಶಾಕ್ಷರ ಮಂತ್ರ) ತುಪ್ಪ ಜೇನುತುಪ್ಪಗಳಿಂದ ಕಲಸಿದ ಎಳ್ಳು ಅಕ್ಕಿಗಳನ್ನು ಹೋಮದ್ರವ್ಯಕ್ಕಾಗಿ ಉಪಯೋಗಿಸಬೇಕು ಹೋಮಾನಂತರ ಗುರುವಿಗೆ ದಕ್ಷಿಣೆಯನ್ನು ಕೊಡಬೇಕು ಮದಿಸಿದ ಆನೆಗಳನ್ನೂ, ನಾನಾವಿಧವಾದ ಕುದುರೆಗಳನ್ನೂ, ಗ್ರಾಮಗಳನ್ನೂ, ವಿವಿಧರತ್ನಗಳನ್ನೂ

**ತತಸ್ತು ದಕ್ಷಿಣಾ ದೇಯಾ ಗುರವೇ ನೃಪಸತ್ತಮ ।**
**ನಾಗಾಶ್ಚ ಮದಮತ್ತಾ ವೈ ಗ್ರಾಮಾಶ್ಚ ವಿವಿಧಾಸ್ತಥಾ ॥ ೨೯ ॥**

**ತುರಗಾಶ್ಚ ತಥಾ ಮುಖ್ಯಾ ರತ್ನಾನಿ ವಿವಿಧಾನಿ ಚ ।**
**ಬ್ರಾಹ್ಮಣಶ್ಚ ಪಿತಾ ಜ್ಞೇಯೋ ರೂಪಸತ್ರಪ್ರದರ್ಶಕಃ ॥ ೩೦ ॥**

**ರೂಪಸೌಭಾಗ್ಯಲಾವಣ್ಯಜನ್ಮಭೋಗಪ್ರದಾಯಕಃ ।**
**ರಾಜ್ಯಸ್ಯ ವಾ ದ್ವಿಜತ್ವಸ್ಯ ಬಹುವಿತ್ತಸ್ಯ ದಾಯಕಃ ॥ ೩೧ ॥**

**ನ ತಸ್ಯ ನಿಷ್ಕೃತಿಃ ಶಕ್ಯಾ ಗಂತುಂದಾನೇನ ಭೂರಿಣಾ ।**
**ಗುರುಪ್ರಸಾದ ಏವಾತ್ರ ದಕ್ಷಿಣಾನಾಂ ತು ಕಾರಣಂ ॥ ೩೨ ॥**

**ತಸ್ಮಾತ್ಪ್ರಸಾದಮಾಕಾಂಕ್ಷೇದ್ರೂಪಸತ್ರಪ್ರದರ್ಶಕಾತ್ ।**
**ಅವಶ್ಯಂ ತಸ್ಯ ದಾತವ್ಯಂ ಘೃತಪೂರ್ಣಂ ತು ಭಾಜನಂ ॥ ೩೩ ॥**

---

ದಕ್ಷಿಣಾರೂಪದಿಂದ ಕೊಡಬೇಕು ಈ ರೂಪಸತ್ರವನ್ನು ಮಾಡಲು ಪ್ರೇರಿಸಿದ ಪ್ರದರ್ಶಕನನ್ನು ತಂದಯೆಂದು ತಿಳಿದುಕೊಳ್ಳಬೇಕು ಈ ವ್ರತವನ್ನು ಮಾಡಿದರೆ ರೂಪ (ಸೌಂದರ್ಯ) ವೂ ಸೌಭಾಗ್ಯ (ಐಶ್ವರ್ಯ) ವೂ, ಲಾವಣ್ಯವೂ, ನಾನಾಭೋಗಗಳೂ, ರಾಜ್ಯವೂ, ಬ್ರಾಹ್ಮಣ್ಯವೂ, ಬಹಳ ದ್ರವ್ಯವೂ ಸಹ ಪ್ರಾಪ್ತಿಯಾಗುತ್ತವೆ. ಈ ವ್ರತಾಂಗವಾಗಿ ಎಷ್ಟೇ ದಕ್ಷಿಣಾ ದ್ರವ್ಯಗಳನ್ನು ದಾನಮಾಡಿದರೂ ಅದು ಸ್ವಲ್ಪವೇ ಎಂದು ತಿಳಿಯಬೇಕು ಗುರು ಪ್ರಸಾದವೊಂದುಂಟಾದರ ಅವೇ ದಕ್ಷಿಣೆಗಳಿಗೆ ಮುಖ್ಯ ಪ್ರಯೋಜನ ಕಾರಣವೆಂದು ತಿಳಿದುಕೊಳ್ಳಬೇಕು ಆದ್ದರಿಂದ ರೂಪಸತ್ರಪ್ರದರ್ಶಕನಾದ ಗುರುವಿನಿಂದ ಪ್ರಸಾದರೂಪವಾದ ಆಶೀರ್ವಾದವನ್ನು ಪಡೆದುಕೊಳ್ಳಬೇಕು. ಅಂತಹ ಗುರುವಿಗೆ ತುಪ್ಪದಿಂದ ತುಂಬಿದ ಒಂದು ಕಂಚಿನಪಾತ್ರೆಯನ್ನು ದಾನವಾಗಿಕೊಡಬೇಕು ಆ ಕಂಚಿನ ಪಾತ್ರೆಯ ನಾಲ್ಕು ತೂಕದಷ್ಟು ಚಿನ್ನದ ನಾಣ್ಯವನ್ನು ದಕ್ಷಿಣೆಯಾಗಿ ಕೊಡಬೇಕು ಈರೀತಿ ದಾನವನ್ನು ಕೊಟ್ಟ ಬಳಿಕ ಶಕ್ತ್ಯನುಸಾರವಾಗಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಬೇಕು ಆ ಊಟವು ಷಡ್ರಸೋಪೇತವಾಗಿರಬೇಕು ಊಟದ ಮಧ್ಯದಲ್ಲಿ ಪಾನಕಗಳನ್ನು ಕೊಡುತ್ತಿರಬೇಕು ಊಟವಾದಮೇಲೆ ಬ್ರಾಹ್ಮಣರಿಗೆ ಕೈತುಂಬಾ ದಕ್ಷಿಣೆಯನ್ನು ಕೊಡಬೇಕು ದಕ್ಷಿಣೆ ಮಾತ್ರವೇ ಅಲ್ಲ ಒಂದುಜೋಡಿ ಹೊಸಧೋತ್ರವನ್ನು ಕೊಡಬೇಕು ಅದು ಕಲಾಬತ್ತುಅಂಚಿನಿಂದಲೂ, ನೆರಿಗೆನಿಂದಲೂ ಮಿರುಗುಟ್ಟುತ್ತಿರಬೇಕು ಆಮೇಲೆ ಸಪ್ತಧಾನ್ಯಗಳನ್ನೂ ಉಪ್ಪು,

ಚತುಷ್ಫಲಂ ತು ಕಾಂಸ್ಯಸ್ಯ ಸುವರ್ಣಂ ಕಾಂಚನಸ್ಯ ಚ ।
ತತಃ ಪರಂ ಭೋಜನೀಯಾಃ ಸ್ವಶಕ್ತ್ಯಾ ದ್ವಿಜಪುಂಗವಾಃ ॥ ೩೪ ॥

ಲವಣಕ್ಷೀರಮಧ್ವಾಜ್ಯಗುಡಭಕ್ಷ್ಯಸಿತೋತ್ಕಟಂ ।
ಭೋಜನಂ ಪಾನಕೋಪೇತಂ ಪಶ್ಚಾದ್ದೇಯಾ ಚ ದಕ್ಷಿಣಾ ॥ ೩೫ ॥

ವಸ್ತ್ರಯುಗ್ಮಂ ಪ್ರದಾತವ್ಯಂ ಬ್ರಾಹ್ಮಣಾಯ ನವಂ ಶುಭಂ ।
ಬ್ರಾಹ್ಮಣಾಯ ಚ ದಾತವ್ಯಂ ಮಹಾರಾಜತರಂಜಿತಂ ॥ ೩೬ ॥

ಸಪ್ತಬೀಜಾನಿ ದೇಯಾನಿ ಲವಣಂ ರೂಪ್ಯಮೇವ ಚ ।
ಯಚ್ಚಾನ್ಯದಪ್ಯಭೀಷ್ಟಂ ಸ್ಯಾಚ್ಛತ್ರೋಪಾನಹಮೇವ ಚ ॥ ೩೭ ॥

ವಿತ್ತಶಾಠ್ಯಂ ನ ಕರ್ತವ್ಯಂ ಸತ್ರದಾನೇ ಮಹೀಪತೇ ।
ಅವಶ್ಯದೇಯಂ ಸತ್ರೇಽಸ್ಮಿನ್ಘೃತಪೂರ್ಣಂ ಚ ಭಾಜನಂ ॥ ೩೮ ॥

ಚತುಷ್ಫಲಂ ತು ಕಾಂಸ್ಯಸ್ಯ ಸುವರ್ಣಂ ಕಾಂಚನಸ್ಯ ಚ ।
ವ್ರತೇನಾನೇನ ಚೀರ್ಣೇನ ದೇಹತ್ಯಾಗೇ ದಿವಂ ಗತಃ ॥ ೩೯ ॥

ತತ್ರೋಷ್ಯ ಸುಚಿರಂ ಕಾಲಂ ಮಾನುಷ್ಯೇ ಯದಿ ಜಾಯತೇ ।
ರಾಜಾ ಭವತಿ ಧರ್ಮಾತ್ಮಾ ಬ್ರಾಹ್ಮಣೋ ವಾ ಧನಾನ್ವಿತಃ ॥ ೪೦ ॥

ಕುಲೇ ಮಹತಿ ಸಂಭೂತೋ ರೂಪೇಣಾಽಪ್ರತಿಮೋ ಭುವಿ ।
ಆರೋಗ್ಯಂ ಮಹದಾಪ್ನೋತಿ ಸೌಭಾಗ್ಯಮಪಿ ಚೋತ್ತಮಂ ॥ ೪೧ ॥

---

ಬೆಳ್ಳಿಯಛತ್ರಿ, ಪಾದರಕ್ಷೆಯೇ ಮುಂತಾದವಿವಿಧ ದಾನಗಳನ್ನುಮಾಡಬೇಕು ಸತ್ರದಾನ ವಿಷಯದಲ್ಲಿಇವನ್ನೆಲ್ಲಾ ತಪ್ಪದೇ ಮಾಡಬೇಕೇ ಹೊರತು ಜೀಣ (ಲೋಭ) ತನವನ್ನು ಮಾಡಬಾರದು ಎಲ್ಲ ದಾನಗಳಿಗಿಂತಲೂ ಮುಖ್ಯವಾಗಿ ತುಪ್ಪದಿಂದ ತುಂಬಿದ ಕಂಚಿನ ಪಾತ್ರೆಯನ್ನೂ ಆ ಪಾತ್ರೆಯ ತೂಕದ ನಾಲ್ಕು ಭಾಗ ಹೆಚ್ಚಾದ ಚಿನ್ನದ ದಕ್ಷಿಣೆ ಯನ್ನೂ ಕೊಡಬೇಕು ಈರೀತಿ ಈ ವ್ರತವನ್ನು ಆಚರಿಸಬೇಕು

೩೯-೪೬ ಈರೀತಿಯಾಗಿ ಈ ವ್ರತವನ್ನು ಮಾಡಿದವನು ಈ ಲೋಕದಲ್ಲಿ ಬಹುಕಾಲ ಬದುಕಿದ್ದು ಈ ದೇಹಬಿಟ್ಟಮೇಲೆ ಕಮಲದಂತೆ ನೇತ್ರಗಳುಳ್ಳವಳಾಗಿಯೂ ಮೂರು ಲೋಕಕ್ಕೂ ಮನೋಹರಳಾದವಳಾಗಿಯೂ ಗಂಡನಲ್ಲಿ ಅತ್ಯಂತ ಅನುರಕ್ತ

ಲಾವಣ್ಯಂ ಬುದ್ಧಿ ಮೇಧೇ ಚ ಮತಿಂ ಧರ್ಮೇ ಚ ಶಾಶ್ವತೀಂ ।
ಸಂಪೂರ್ಣಚಂದ್ರಪ್ರತಿಮಃ ಸರ್ವಸತ್ತ್ವವಶಂಕರಃ । ॥ ೪೨ ।

ನರೋ ಭವತಿ ರಾಜೇಂದ್ರ ನಾರೀ ಚಾಪ್ಸರಸೋಪಮಾ ।
ಸುಭಗಾ ದರ್ಶನೀಯಾ ಚ ಲಾವಣ್ಯಗುಣಸಂಯುತಾ ॥ ೪೩ ॥

ಬಹುಧಾನ್ಯಾ ಬಹುಧನಾ ಬಹುಭೂಷಣಸಂಯುತಾ ।
ಭರ್ತುಶ್ಚಾತ್ಯಂತದಯಿತಾ ಲೋಕೇ ಖ್ಯಾತಾ ಚ ಸದ್ಗುಣೈಃ ।
ನಿತ್ಯಾರೋಗ್ಯವತೀ ಕಾಂತಾ ಸರ್ವದೋಷವಿವರ್ಜಿತಾ ॥ ೪೪ ॥

ಚಂದ್ರಾನನಾ ನೀಲಸರೋಜನೇತ್ರಾ ।
ತ್ರೈಲೋಕ್ಯಕಾಂತಾ ಪತಿವಲ್ಲಭಾ ಚ ॥ ೪೫ ॥
ಭವತ್ಯವಶ್ಯಂ ಸುಭಗಾ ಸುಶೀಲಾ ।
ಲಾವಣ್ಯಯುಕ್ತಾ ಯಶಸಾ ಶ್ರಿಯಾ ಚ ॥ ೪೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ರೂಪಸತ್ರವರ್ಣನಂ ನಾಮ ಪಂಚ
ಪಂಚಾಶದಧಿಕಶತತಮೋಽಧ್ಯಾಯಃ

---

ಳಾದವಳಾಗಿಯೂ ಇರುವ ಯೋಗಗಳನ್ನು ಹೊಂದಿದ ಸ್ತ್ರೀ ಜನ್ಮದಲ್ಲಿ ಜನಿಸುತ್ತಾನೆ. ಮತ್ತು ಅವಳು ಸೌಭಾಗ್ಯ, ಸೌಶೀಲ್ಯ ಲಾವಣ್ಯಗಳಿಂದಲೂ ಐಶ್ವರ್ಯದಿಂದಲೂ ಯಶಸ್ಸಿನಿಂದಲೂ ಕೂಡಿದವಳಾಗಿ ಬಾಳಿ ಬದುಕುತ್ತಾಳೆಂಬ ವಿಷಯದಲ್ಲಿ ಸಂದೇಹವಿಲ್ಲ.

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ರೂಪಸತ್ರವೆಂಬ ಹೆಸರಿನ
ಒಂದುನೂರ ಐವತ್ತೈದನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಷಟ್ಪಂಚಾಶದಧಿಕಶತತಮೋಽಧ್ಯಾಯಃ ॥

---

॥ ಪುರೂರವಾ ಉವಾಚ ॥

ಭಗವನ್ಸರ್ವಧರ್ಮಜ್ಞ ಪಿತಾಮಹ ಮಹಾದ್ಯುತೇ ।
ಗುರುತ್ವಂ ಮೇ ವ್ರತೇ ತಸ್ಮಿನ್ಕರ್ತುಮರ್ಹಸಿ ಮಾನದ ॥ ೧ ॥

ವ್ರತಾವಸಾನೇ ಚ ತಥಾ ಸಾಮಗ್ರ್ಯಂ ದ್ವಿಜಪುಂಗವ ।
ಏವಂ ಶಕ್ಯೋಽಸ್ಮ್ಯರಣ್ಯೇಽಸ್ಮಿನ್ಕರ್ತುಂ ಬ್ರಹ್ಮನ್ಮಹದ್ವ್ರತಂ ॥ ೨ ॥

॥ ಅತ್ರಿರುವಾಚ ॥

ತವ ಪ್ರಸಾದಂ ಭಗವಾನ್ಸರ್ವಾತ್ಮಾ ಮಧುಸೂದನಃ ।
ಕುರುತೇಽಹಂ ಕರಿಷ್ಯಾಮಿ ಗುರುಸ್ತ್ವಮಪರಾಜಿತಃ ॥ ೩ ॥

---

### ಒಂದುನೂರ ಐವತ್ತಾರನೆಯ ಅಧ್ಯಾಯವು.

೧-೨ ಪುರೂರವ (ಹಿಂದಿನ ಜನ್ಮದ ಮದ್ರರಾಜ) ನು ಹೇಳುತ್ತಾನೆ — ಎಲೈ ಬ್ರಹ್ಮ ಸಮಾನತೇಜಃ ಪುಂಜನಾದ ಸರ್ವ ಧರ್ಮಗಳನ್ನೂ ತಿಳಿದ ಭಗವತ್ಸ್ವರೂಪನಾದ ಅತ್ರಿಮಹರ್ಷಿಯೇ! ಈ ವ್ರತವನ್ನು ನೀನೇ ಗುರುವಾಗಿ ನಿಂತುಕೊಂಡು ನನ್ನ ಕಯ್ಯಿಂದ ಮಾಡಿಸಬೇಕು ಅರಣ್ಯಮಧ್ಯವಾದರೂ ಇಲ್ಲೇ ಇದಕ್ಕೆ ತಕ್ಕ ಸಾಮಗ್ರಿಗಳನ್ನು ತರಿಸಿಕೊಂಡು ಈ ವ್ರತವನ್ನು (ರೂಪಸತ್ರವನ್ನು) ನಾನು ಮಾಡಿ ವ್ರತಾಂತ್ಯದಲ್ಲಿ ಹೇಳಿರುವ ದಾನಗಳನ್ನೆಲ್ಲಾ ಮಾಡುತ್ತೇನೆ

೩-೪ ಅತ್ರಿಮಹರ್ಷಿಯು ಹೇಳಿದನು —ಅಯ್ಯ ಮದ್ರ (ಪುರೂರವ) ರಾಜ! ನೀನು ಪುಣ್ಯಶಾಲಿಯಯ್ಯ! ನಿನ್ನಮೇಲೆ ದೇವರ ದಯವಿದೆಯಯ್ಯ! ನಾನೇ

ವ್ರತಾವಸಾನೇ ಚ ತಥಾ ಸಾಮಗ್ರ್ಯಂ ದ್ವಿಜಪುಂಗವೈಃ ।
ಕಾಮಾಸ್ಸನ್ನಿಹಿತಾಶ್ಚಾಸ್ಯ ದೇಶೇಸ್ಮಿನ್ ನೃಪ ಸರ್ವದಾ ॥ ೪ ॥

॥ ಮಾರ್ಕಂಡೇಯ ಉವಾಚ ॥

ಏವಮುಕ್ತ್ವಾ ಸ ಧರ್ಮಾತ್ಮಾ ಸಪ್ತಮೇ ಚ ದಿನೇ ತದಾ ।
ಜ್ಯೇಷ್ಠಾಯಾಂ ಸಪ್ತಮೀಯೋಗೇ ಗ್ರಾಹಯಾಮಾಸ ತಂ ವ್ರತಂ ॥ ೫ ॥

ಪಾದಕ್ಷಾತ್ತು ಪ್ರಭೃತ್ಯೇವಮೃಕ್ಷೇ ಋಕ್ಷೇ ನರಾಧಿಪಃ ।
ಕಾರಯಾಮಾಸ ದೇವಸ್ಯ ಕಥಿತಾಂಗಾದಿಪೂಜನಂ ॥ ೬ ॥

ಸ್ನಾನಂ ನಕ್ಷತ್ರನಿರ್ದಿಷ್ಟಂ ನಕ್ಷತ್ರಸ್ಯ ಚ ಪೂಜನಂ ।
ನಕ್ಷತ್ರದೈವತಸ್ಯಾಪಿ ಸೋಮಸ್ಯ ವರುಣಸ್ಯ ಚ ॥ ೭ ॥

ಪೂಜನಂ ಚ ತಥಾ ವಿಷ್ಣೋರ್ದೇವದೇವಸ್ಯ ಚಕ್ರಿಣಃ ।
ಹೋಮಂ ತಥೈವ ಸರ್ವೇಷಾಂ ಯಥಾವನ್ಮನುಜೇಶ್ವರ ॥ ೮ ॥

ಮಾಘಶುಕ್ಲಮುಪಾಂ ಪ್ರಾಪ್ಯ ದ್ವಾದಶೀಂ ಚ ತಥಾ ತಿಥಿಂ ।
ಅತ್ರಿರ್ವ್ರತಾವಸಾನೇ ತಮಾಗತೋ ಬ್ರಾಹ್ಮಣೈಃ ಸಹ ॥ ೯ ॥

---

ಗುರುವಾಗಿ ನಿಂತು ನಿನಗೆ ಈ ವ್ರತವನ್ನು ಮಾಡಿಸುತ್ತೇನೆ ಇಲ್ಲಿರುವ ತಪಸ್ವಿಗಳಾದ ಬ್ರಾಹ್ಮಣರಿಂದ ಸಕಲ ಸಾಮಗ್ರಿಗಳನ್ನೂ ತರಿಸಿ ವ್ರತಾವಸಾನದಲ್ಲಿ, ಬೇಕಾದ ದಾನ ಧರ್ಮಗಳನ್ನೂ ಮಾಡು, ಸಂಕೋಚಪಡಬೇಡ, ಸಕಲ ಇಷ್ಟಾರ್ಥಗಳೂ ಇಲ್ಲಿ ನಿನ ಗೋಸ್ಕರ ಸಿದ್ಧವಾಗಿ ನಿನ್ನನ್ನೇ ಕಾದಿವೆ ಇದನ್ನೆಲ್ಲಾ ಉಪಯೋಗಿಸಿ ಈ ಪ್ರದೇಶ ದಲ್ಲೇ ಈ ಯಜ್ಞವನ್ನು ಮಾಡು

೫ ಮಾರ್ಕಂಡೇಯರು ಹೇಳುತ್ತಾರೆ —ಈರೀತಿ ಆ ಧರ್ಮಾತ್ಮನಾದ ಅತ್ರಿಯು ಮದ್ರರಾಜನಿಗೆ ಹೇಳಿಜ್ಯೇಷ್ಠಾ ನಕ್ಷತ್ರದಿಂದ ಕೂಡಿದ ಸಪ್ತಮೀ ಯೋಗವುಳ್ಳ ಸಪ್ತಮದಿನದಲ್ಲಿ (ಸಪ್ತಮೀ) ಆ ಮದ್ರರಾಜನಿಂದ ಆ ವ್ರತಕ್ಕೆ ಸಂಕಲ್ಪಮಾಡಿಸಿದನು

೬ ಪಾದನಕ್ಷತ್ರದಿಂದ ಹಿಡಿದು ಪ್ರತಿಯೊಂದು ಅಂಗ ನಕ್ಷತ್ರವನ್ನೂ ಪ್ರಯತ್ನ ದಿಂದ ನಿರ್ದೇಶಿಸಿ ಮಹಾವಿಷ್ಣುವಿನ ನಕ್ಷತ್ರಾಂಗ ಪೂಜೆಯನ್ನು ಮಾಡಿಸಿದನು

೭-೧೦ ಈ ಪುರಾಣದಲ್ಲಿ ನಕ್ಷತ್ರ ಗ್ರಹಶಾಂತಿ ಪೂಜಾ ಸಂದರ್ಭದಲ್ಲಿ ಏವಿ ಸಿರುವ ವಿಧಿಯನ್ನನುಸರಿಸಿ ನಕ್ಷತ್ರ ಸ್ನಾನ, ಆ ನಕ್ಷತ್ರ ವಿಹಿತ ನಕ್ಷತ್ರದೇವತೆಗಳಿಗೂ,

ವ್ರತಾವಸಾನೇ ಸಂಪೂಜ್ಯ ಕೇಶವಾಂಗಾರ್ಕಸೋಮಜಾನ್ ।
ರಾಜ್ಯಂ ನಿವೇದಯಾಮಾಸ ಸೋಽತ್ರೇಃ ಸಕಲಮೇವ ಹಿ ॥ ೧೦ ॥

ಪ್ರತಿಗೃಹ್ಯ ಚ ತದ್ರಾಜ್ಯಂ ತಸ್ಮಾದ್ವೈ ಮಂತ್ರವಿನ್ನೃಪ ।
ಭೂಯಃ ಪ್ರಾದಾತ್ಸ ತಸ್ಯೈವ ವಚನಂಚೇದಮಬ್ರವೀತ್ ॥ ೧೧

ನ ಮೇ ರಾಜ್ಯೇನ ಕರ್ತವ್ಯಂ ಕಿಂಚಿದೇವಾಸ್ತಿ ಪಾರ್ಥಿವ ।
ಧನೇನ ನ ಚ ಕಾಮೇನ ಯಾಜಿತಾ ನೃಪಯಾಜ್ಞಿಯಾ ॥ ೧೨ ॥

ಇದಾನೀಂ ರಾಜಶಾರ್ದೂಲ ಸ್ವಸ್ತಿ ಗಚ್ಛ ಗೃಹಾನ್ಪ್ರತಿ ।
ಏವಮುಕ್ತ್ವಾ ಯಯಾವತ್ರಿರಂತರ್ಧಾನಮಥೇಶ್ವರಃ ॥ ೧೩ ॥

ಸರ್ವೈರ್ದ್ವಿಜಗಣೈಃ ಸಾರ್ಧಂ ತದಾ ಗತ್ವಾ ಸ ಪಾರ್ಥಿವಃ ।
ದೇವಪುಷ್ಕರಿಣೀತೋಯೇ ಸ್ನಾತಮಾತ್ರೋ ಬಭೂವ ಹ ॥ ೧೪ ॥

ತಪ್ತಜಾಂಬೂನದಾಕಾರೋ ನೀಲಕುಂಚಿತಮೂರ್ಧಜಃ ।
ಪೃಥುವಕ್ಷಾ ಮಹಾಬಾಹುಸ್ತನುಕುಕ್ಷಿರ್ಮಹಾಕಟಿಃ ॥ ೧೫ ॥

- - - - -

ಇಂದ್ರ, ವರುಣಂಗೂ, ಮಹಾವಿಷ್ಣುವಿಗೂ, ಪ್ರತ್ಯೇಕ ಪ್ರತ್ಯೇಕ ಪೂಜೆಗಳನ್ನು ವಿಧ್ಯುಕ್ತ ಹೋಮಗಳೇ ಮುಂತಾದುವುಗಳನ್ನೂ ಯಥಾವಿಧಿಯಾಗಿ ಮಾಡಿಸಿ ಮಾಘ ಶುದ್ಧ ಮಖಾನಕ್ಷತ್ರ ಯೋಗವಿದ್ದ ಆ ಮಹಾದಿವಸವೊಂದರಲ್ಲಿ ವ್ರತಸಮಾಪ್ತಿಯನ್ನು ಮಾಡಿಸುವುದಕ್ಕಾಗಿ ಅತ್ರಿಋಷಿಯು ಅನೇಕ ಮಂದಿ ಬ್ರಾಹ್ಮಣರನ್ನು ಕರೆದುಕೊಂಡು ಆ ರೂಪಸತ್ರಶಾಲೆಗೆ ಬಂದನು ವೃತಾಂತ್ಯದಲ್ಲಿ ಹೇಳಿರುವ ಕ್ರಮದಂತೆ ಸಕಲ ವಿಧ ಪೂಜಗಳನ್ನೂ ಮಾಡಿ, ಆಬಳಿಕ ಆ ಮದ್ರರಾಜನು ಅತ್ರಿಋಷಿಗ ದಕ್ಷಿಣಾರ್ಥವಾಗಿ ತನ್ನ ಸಕಲ ರಾಜ್ಯವನ್ನೂ ದಾನಮಾಡಿಬಿಟ್ಟನು

೧೧-೧೭ ಆ ರಾಜನಿಂದ ಅತ್ರಿಋಷಿಯು ರಾಜ್ಯವನ್ನು ದಾನ ತೆಗೆದುಕೊಂಡು ಆಬಳಿಕ ಅದನ್ನು ಅವನಿಗೇ ಹಿಂತಿರುಗಿ ಕೊಟ್ಟು ಈ ಮಾತನ್ನು ಹೇಳಿದನು. ಎಲೈ ರಾಜನೇ ' ನನಗೆ ಈ ರಾಜ್ಯದಿಂದೇನಾಗಬೇಕಾಗಿದೆ ಹಣದಾಶೆಯಿಂದಲಾಗಲೀ, ಕಾಮದಿಂದಾಗಲೀ ಈ ಯಾಗವನ್ನು ನಿನಗೆ ನಾನು ಮಾಡಿಸಲಿಲ್ಲ ನನಗ ಸರ್ವರೂ ಸಮಾನರು, ನಿನಗೆ ಒಳ್ಳೆಯದಾಗಲಿ, ನಿನ್ನ ಕ್ಷೇಮವೇ ನನಗೆ ಬೇಕಾದುದೆಂದು ಹೇಳಿ ಅಲ್ಲಿಯೇ

ಗಂಧರ್ವರಾಜಪ್ರತಿಮಃ ಸರ್ವಸತ್ತ್ವವಶಂಕರಃ ।
ರೂಪಂ ತು ತಾದೃಶಂ ತಸ್ಯ ದೃಷ್ಟ್ವಾ ಗಂಧರ್ವಸತ್ತಮಾಃ ॥ ೧೬ ॥

ತಥೈವಾಪ್ಸರಸೋ ಮುಖ್ಯಾ ದಿಷ್ಟ್ಯಾ ದಿಷ್ಟ್ಯೇತಿ ತೇಽಬ್ರುವನ್ ।
ಸಭಾಜ್ಯ ಪಾರ್ಥಿವಂ ತೇನ ಪೂಜಿತಾಃ ಪ್ರಯಯುಃ ಸುಖಂ ॥ ೧೭ ॥

ನೀತ್ವಾ ಸಂವತ್ಸರಂ ತತ್ರ ಪೂರ್ಣೇ ಸಂವತ್ಸರೇ ನೃಪಃ ।
ದೇವತಾಶ್ಚಾಪ್ಯಥಾಮಂತ್ರ್ಯ ಪೂಜಯಿತ್ವಾ ಯಥಾವಿಧಿ ॥ ೧೮ ॥

ತಥಾ ಪುಷ್ಕರಿಣೀಂ ಪುಣ್ಯಾಂ ಗುಹಾಂ ಪದ್ಮಸರಸ್ತಥಾ ।
ಆಶ್ರಮಂ ಶೈಲಮುಖ್ಯಂ ಚ ತಥೈವ ಚ ವನಸ್ಪತಿಂ ॥ ೧೯ ॥

ಗಂಧರ್ವಾಪ್ಸರಸಶ್ಚೈವ ಪ್ರಯಯೌ ಸ್ವಪುರಂ ತತಃ ।
ಉಚ್ಚಸಂಗಮಸಂಪ್ರಾಪ್ತಾ ದೃಷ್ಟೋ ನೈಷಯಿಕೈಸ್ತತಃ ॥ ೨೦ ॥

ಸ್ತುತೋ ದೇವಪ್ರಸಾದಾಚ್ಚ ಭಕ್ತ್ಯಾ ತೈಶ್ಚಾಭಿನಂದಿತಃ ।
ಸತ್ವರೈಶ್ಚ ತಥಾ ಕೈಶ್ಚಿದಮಾತ್ಯಾನಾಂ ನಿವೇದಿತಃ ॥ ೨೧ ॥

---

ಅಂತರ್ಧಾನನಾದನು ಆಬಳಿಕ ಆ ರಾಜನು ಅಲ್ಲಿದ್ದ ಬ್ರಾಹ್ಮಣರೊಡನೆ ಕೂಡಿ ದೇವಪುಷ್ಕರಿಣೀಜಲದಲ್ಲಿ ಸ್ನಾನಮಾಡಿದನು ಆ ಕೂಡಲೇ ಅವನ ಹಿಂದಿನ ಕುರೂಪವು ಅದಲ್ಲೋ ಮಾಯವಾಗಿ ಪುಟಕ್ಕೆ ಹಾಕಿದ ಚಿನ್ನದಂತ ಮೈಬಣ್ಣವು ತಿರುಗಿ, ಕಪ್ಪಗಿರುವ ಕೂದಲುಗಳಿಂದಲೂ, ವಿಶಾಲವಾದ ಎದೆಯಿಂದಲೂ ಮಹಾ ಭುಜಗಳಿಂದಲೂ ಅಪ್ರತಿಮ ಸೌಂದರ್ಯವಂತನಾಗಿ ಪರಿವರ್ತಿತನಾದನು. ಗಂಧರ್ವ ರಾಜನಂತೆ ಸೌಂದರ್ಯವುಳ್ಳ ಆ ರಾಜನನ್ನು ನೋಡಿ ಗಂಧರ್ವರೂ, ಅಪ್ಸರರೂ, ಶಹಭಾಸ್! ಶಹಭಾಸ್! ಎಂದು ಅವನನ್ನು ಹೊಗಳಿ ಅವನನ್ನು ಪೂಜಿಸಿ ಹೊರಟು ಹೋದರು

೧೮-೨೧ ಆಬಳಿಕ ಆ ಮಹಾರಾಜನು ಒಂದು ವರ್ಷಕಾಲ ಆ ಕಾಡಿನಲ್ಲಿಯೇ ಇದ್ದು ಆ ವರ್ಷ ಕಳೆದಬಳಿಕ ಸಕಲ ದೇವತೆಗಳನ್ನೂ ಕರೆದು ಯಥಾವಿಧಿಯಾಗಿ ಪೂಜಿಸಿದನು ಹಾಗೂ ತಾನು ಸ್ನಾನಮಾಡಿದ ಸರೋವರವನ್ನೂ, ಪುಣ್ಯಪ್ರದವಾದ ಗುಹಾದ್ವಾರವನ್ನೂ ಅಲ್ಲಿದ್ದ ಋಷ್ಯಾಶ್ರಮಗಳನ್ನೂ, ಬೆಟ್ಟಗಳನ್ನೂ, ವೃಕ್ಷಲತಾ ಮೂಲಿಕೆಗಳನ್ನೂ, ಗಂಧರ್ವಾಪ್ಸರಸರನ್ನೂ ಸಹ ಪೂಜೆಮಾಡಿ ತನ್ನ ಊರಿಗೆ

**ಅಮಾತ್ಯಾಶ್ಚಾಗತಂ ಶ್ರುತ್ವಾ ಲಬ್ಧಕಾಮಂ ನರಾಧಿಪಂ ।**
**ನಿರ್ಯಯುರ್ನಗರಾತ್ತಸ್ಮಾಚ್ಚತುರಂಗಬಲಾನ್ವಿತಾಃ** ॥ ೨೨ ॥

**ರಾಜ್ಞಃ ಪ್ರತಿಗ್ರಹಾರ್ಥಂ ತೇ ಸರ್ವೇ ಗಣಮುಖ್ಯಪುರಃಸರಾಃ ।**
**ತೈಃ ಸಮೇತ್ಯ ಸ ರಾಜರ್ಷಿರ್ಯಥಾವನ್ಮನುಜೇಶ್ವರಃ** ॥ ೨೩ ॥

**ಕಲ್ಪಿತೇನ ಗಜೇಂದ್ರೇಣ ಪತಾಕಾಧ್ವಜಶೋಭಿನಾ ।**
**ಪ್ರವಿವೇಶ ಪುರಂ ಹೃಷ್ಟಃ ಶಾಕಲಂ ನಾಮ ನಾಮತಃ** ॥ ೨೪ ॥

**ರಾಜ್ಞಃ ಪ್ರವೇಶೇ ತತ್ಪೌರೈಃ ಸಿತಚಂದನವಾರಿಣಾ ।**
**ಬಹುವರ್ಣೈಸ್ತಥಾ ಪುಷ್ಪೈರ್ಯಥಾಸ್ಥಾನೇ ವಿಭೂಷಿತಂ** ॥ ೨೫ ॥

**ಚಂದನಾಗುರುಸಾರಾಣಾಂ ಧೂಪನ್ನೈಃ ಸುರಭೀಕೃತಂ ।**
**ಮಹೋಚ್ಛ್ರಿತಪತಾಕಾಢ್ಯಂ ಮಾಲ್ಯದಾಮಪರಿಷ್ಕೃತಂ** ॥ ೨೬ ॥

**ಮಾಲ್ಯಮೋದಕಹಸ್ತೈಶ್ಚ ಪೌರಜಾನಪದೈರ್ಯುತಂ ।**
**ಅತೀವ ಜನಸಂಬಾಧಮತೀವ ಸುಮನೋಹರಂ** ॥ ೨೭ ॥

---

ಹೊರಟನು. ಊರಿಗೆ ಬರುತ್ತಿದ್ದ ರಾಜನನ್ನು ದಾರಿಯಲ್ಲಿಯೇ ವಿಷಯಾಸಕ್ತರಾದ ಜನರು ನೋಡಿ ಆಶ್ಚರ್ಯಗೊಂಡು ಗೃಹಪ್ರಸಾದದಿಂದ ದೊರೆತ ಆ ಸೌಂದರ್ಯವನ್ನು ನೋಡಿ ಬೆರಗಾಗಿ ಹೊಗಳಿದರು. ಇನ್ನು ಕೆಲವು ಮಂದಿ ಪೌರಜನರು ಬೇಗ ಓಡಿ ಹೋಗಿ ಮಂತ್ರಿಗಳೊಡನೆ ರಾಜಾಗಮನ ವೃತ್ತಾಂತವನ್ನು ಅರಿಕೆಮಾಡಿದರು. ಅಮಾತ್ಯರು ಈ ವೃತ್ತಾಂತವನ್ನು ಕೇಳಿ ಹರ್ಷಾನ್ವಿತರಾಗಿ ಚತುರಂಗ ಬಲಸಮೇತರಾಗಿ ರಾಜನನ್ನಿದಿರುಗೊಳ್ಳಲು ಹೊರಟರು.

೨೩-೨೮ ಎಲೈ ವಜ್ರರಾಜನೇ ಕೇಳು! ಆ ಮದ್ರರಾಜನನ್ನು ಎದುರ್ಗೊಂಡು ಕರಕರಲು ಊರಿನ ಮುಖ್ಯಸ್ಥರೆಲ್ಲರೂ ಬಂದರು. ಅವರೊಡನೆ ಮಹಾರಾಜನು ತನಗಾಗಿ ಸಿದ್ಧಪಡಿಸಿದ್ದ ಆನೆಯ ಮೇಲೆ ಹತ್ತಿ, ಬಾವುಟಗಳಿಂದ ಶೋಭಾಯಮಾನವಾಗಿದ್ದ ಅಂಬಾರಿಯಲ್ಲಿ ಮೆರವಣಿಗೆಯಾಗಿ ಹೊರಟು ಶಾಕಲ ನಗರವನ್ನು ಪ್ರವೇಶಿಸಿದನು. ಮಹಾರಾಜನ ಪುರಪ್ರವೇಶಕಾಲದಲ್ಲಿ ಅಲ್ಲಲ್ಲಿಯೇ ಪನ್ನೀರುಗಳಿಂದ ನೆಲವನ್ನು ಸಾರಿಸಿ ವಿಧವಿಧವಾದ ಬಣ್ಣದ ಹೂವುಗಳಿಂದ ಊರನ್ನೆಲ್ಲಾ ಅಲಂಕಾರಮಾಡಿದ್ದರು. ಎಲ್ಲೆಲ್ಲಿ ನೋಡಿದರೂ ಗಂಧ, ಕಾಲಾಗರು, ಧೂಪ

ಪ್ರಾಸಾದವರಸಂಸ್ಥಾಶ್ಚ ಗವಾಕ್ಷಕಗತಾಸ್ತಥಾ ।
ವೇದಿಕಾಸ್ಥಾಶ್ಚ ಪಶ್ಯಂತಿ ಸ್ತ್ರಿಯಸ್ತಂ ಮನ್ಮಥಾರ್ದಿತಾಃ ॥ ೨೮ ॥

ಸ ಮುಷ್ಣನ್ನ್ಯೋಷಿತಾಂ ಚಿತ್ತಂ ದೃಶಶ್ಚ ಮನುಜಾಧಿಪಃ ।
ಲಾಜಾಚಂದನಚೂರ್ಣೈಶ್ಚ ಕೀರ್ಯಮಾಣಃ ಸಮಂತತಃ ॥ ೨೯ ॥

ಪುಷ್ಪೈಶ್ಚ ಸ್ತ್ರೀಕರೋನ್ಮುಕ್ತೈಃ ಪೂರ್ಯಮಾಣೋ ನರಾಧಿಪಃ ।
ಅಭಿಗಮ್ಯ ಚ ತತ್ರಾಸೌ ದೇವತಾಯತನಾಂಸ್ತತಃ ॥ ೩೦ ॥

ಪ್ರವಿವೇಶ ಗೃಹಂ ಶ್ರೀಮಚ್ಛಾರದಾಭ್ರಚಯೋಪಮಂ ।
ತತ್ರಾಭಿಗಮನಂ ಕೃತ್ವಾ ದೇವತಾನಾಂ ಯಥಾವಿಧಿ ॥ ೩೧ ॥

ಸಂಪೂಜ್ಯ ಬ್ರಾಹ್ಮಣಾನ್ಭಕ್ತ್ಯಾ ವಿವಿಧೈರ್ಧನಸಂಚಯೈಃ ।
ಸಭಾಸ್ಥಃ ಸಾಂತ್ವಯಾಮಾಸ ಪೌರಜಾನಪದಂ ಜನಂ ॥ ೩೨ ॥

ಆಶ್ವಾಸ್ಯ ಪ್ರೇಷಯಾಮಾಸ ಗೃಹಾನ್ಯೋಥಜನಂ ತಥಾ ।
ಜನಾನುರಾಗಸಂಯುಕ್ತಸ್ತತಃ ಪ್ರಭೃತಿ ಪಾರ್ಥಿವಃ ॥ ೩೩ ॥

ಗಳ ಸುವಾಸನೆಯು ತುಂಬಿ ಊರಲ್ಲೆಲ್ಲಾ ಸುಗಂಧವು ಸೂಸುತ್ತಿತ್ತು ಎಲ್ಲಿ ನೋಡಿದರೂ ಎತ್ತರವಾದ ಬಾವುಟಗಳನ್ನೇರಿಸಿ ಅದಕ್ಕೆಲ್ಲಾ ಹೂವಿನ ಹಾರವನ್ನು ಅಲಂಕಾರಮಾಡಿದ್ದರು ದಾರಿಯಲ್ಲಿ ಕಂಡ ಮುಖ್ಯಸ್ಥರೆಲ್ಲರೂ ತಮ್ಮ ತಮ್ಮ ಮನೆ ಅಂಗಡಿಗಳ ಮುಂದೆ ಹೂವಿನ ಹಾರವನ್ನೂ, ನಜರನ್ನೂ ಹಿಡಿದುಕೊಂಡು ಕಾದಿದ್ದು, ಮಹಾರಾಜನಿಗೆ ಒಪ್ಪಿಸುತ್ತಿದ್ದರು ಜನರ ಗಲಭೆಯಂತೂ ಹೇಳುವ ಹಾಗೆಯೇ ಇಲ್ಲ ಯಾವ ಮಹಡಿಯನ್ನು ನೋಡಲಿ! ಯಾವ ಮನೆ ಕಿಟಕಿಯನ್ನು ನೋಡಲಿ ಯಾರ ಮನೆಯನ್ನೆ, ಜಗಲಿಯ ಮೇಲೆ ನೋಡಲಿ, ಜನರ ಗುಂಪೇ ಗುಂಪಾಗಿತ್ತು ನವಮನ್ಮಥನಂತೆ ಹೊಳೆಯುತ್ತಿದ್ದ ಆ ಮಹಾರಾಜನನ್ನು ನೋಡಿದ ಕಾಮಿನಿಯರು ಕಾಮನ ಬಾಣಗಳಿಗೆ ಗುರಿಯಾಗುತ್ತಿದ್ದರು

೨೯-೩೩ ಆ ಮಹಾರಾಜನು ಹೆಂಗಸರ ಚಿತ್ತವನ್ನೂ ಕಣ್ಣುಗಳನ್ನೂ ಅಪಹರಿಸುತ್ತಲಿದ್ದನು ಎತ್ತೆತ್ತಲಿಂದಲೂ ಹೆಂಗಸರುಗಳು ಎರಚುತ್ತಿದ್ದ ಅರಳು, ಗಂಧದ ಪುಡಿ, ಹೂಗಳು ರಾಜನ ಮೇಲೆ ಮಳೆ ಸುರಿದಂತೆ ಬಂದು ಬಂದು ಬೀಳುತ್ತಲಿದ್ದುವು ಈರೀತಿ ಮಹಾರಾಜನು ಕೋಲಾಹಲದಿಂದ ಊರನ್ನು ಪ್ರದಕ್ಷಿಣೆಯಾಗಿ ಬಂದು

**ರಾಜಶಾಸ್ತ್ರೋಪದೇಶೇನ ಪಾಲಯಾಮಾಸ ಮೇದಿನೀಂ ।**
**ರೇಮೇ ಚ ಸಹ ರಾಮಾಭಿರ್ಗಂಧರ್ವಪ್ರತಿಮೋ ಯುವಾ** ॥ ೩೪ ॥

**ಸ ತು ಕಾಲೇನ ಮಹತಾ ರಾಜಾ ಪಂಚತ್ವಮಾಗತಃ ।**
**ಉವಾಸ ಸುಚಿರಂ ಕಾಲಂ ಪೂಜ್ಯಮಾನಃ ಸುರೋತ್ತಮೈಃ** ॥ ೩೫ ॥

**ಮನ್ವಂತರೇ ವ್ಯತೀತೇ ತು ಚಾಕ್ಷುಷಸ್ಯ ಮಹಾತ್ಮನಃ ।**
**ವೈವಸ್ವತೇಽಥ ಸಂಪ್ರಾಪ್ತೇ ಬುಧಪುತ್ರತ್ವಮಾಗತಃ** ॥ ೩೬ ॥

**ತತ್ರ ತಸ್ಯ ತು ಯದ್ರೂಪಂ ಸೌಭಾಗ್ಯಾದೇವ ವಿಶ್ರುತಂ ।**
**ಸಶರೀರಸ್ಯ ಚ ತಥಾ ಸ್ವರ್ಲೋಕೇ ಗಮನಂ ನೃಪ** ॥ ೩೭ ॥

**ಸ್ವರ್ಗತೋಽಪಿ ಸ ರಾಜರ್ಷಿಃ ಕ್ಷೀಣೇ ವೈವಸ್ವತೇಽಂತರೇ ।**
**ಪ್ರವಿಶ್ಯಾತಿಪುರಂ ವಿಷ್ಣೋಶ್ಚಂದ್ರಮಂಡಲಮಧ್ಯಗಂ** ॥ ೩೮ ॥

**ಏತತ್ತೇ ಸರ್ವಮಾಖ್ಯಾತಂ ಕರ್ಮಣಾ ಯೇನ ಪಾರ್ಥಿವಃ ।**
**ಅವಾಪ ತಾದೃಶಂ ರೂಪಂ ಸೌಭಾಗ್ಯಮಪಿ ಚೋತ್ತಮಂ** ॥ ೩೯ ॥

---

ಅಲ್ಲಲ್ಲಿ ಸಿದ್ಧವಾದ ದೇವಸ್ಥಾನಗಳ ಒಳ ಇಂದು ಅಲ್ಲಿ ದೇವರ ಪೂಜೆ, ಮಂಗಳಾರತಿ ಮಾಡಿಸಿ ಅಲ್ಲಿದ್ದ ಬ್ರಾಹ್ಮಣರಿಗೆಲ್ಲಾ ಧಾರಾಳವಾಗಿ ದಕ್ಷಿಣೆಗಳನ್ನು ಕೊಟ್ಟು ಅವರ ಮನಸ್ಸನ್ನು ಸಂತೋಷಪಡಿಸುತ್ತಿದ್ದನು ಆ ಬಳಿಕ ಸಭಾಸದರಾದ ಜನರನ್ನೂ, ಗೃಹಸ್ಥರನ್ನೂ, ಯೋಧಜನರನ್ನು ಸಮಾಧಾನಮಾಡಿ ಅವರವರ ಮನೆಗಳಿಗೆ ಕಳುಹಿಸಿಕೊಟ್ಟನು ಅಂದಿನಿಂದ ಆ ರಾಜನು ಜನಾನುರಾಗಪರನಾಗಿ ರಾಜನೀತಿ ಯನ್ನನುಸರಿಸಿ ಜನರಿಗೆ ಉಪಕಾರಮಾಡುತ್ತಾ ಭೂಲೋಕಕ್ಕೆ ಚಕ್ರವರ್ತಿಯಾಗಿ ಯಶಸ್ಸನ್ನು ಸಂಪಾದಿಸಿದನು ಮತ್ತು ಗಂಧರ್ವರಂತೆ ಸರ್ವೋತ್ತಮ ಸೌಂದರ್ಯ ದಿಂದಲೂ, ಯೌವನದಿಂದಲೂ ಕೂಡಿದ ಆ ಮಹಾರಾಜನು ಅಂತಃಪುರ ರಮಣಿಯ ರೊಡನೆ ಬೆರೆತು ವಿವಿಧ ಭೋಗಗಳನ್ನನುಭವಿಸಿದನು.

೩೫-೩೯ ಆ ಮಹಾರಾಜನು ಬಹುಕಾಲ ಭೂಲೋಕದಲ್ಲಿ ಸೌಖ್ಯವನ್ನನು ಭವಿಸಿ ಎಷ್ಟೋ ವರ್ಷಗಳಾದ ಮೇಲೆ ಪಂಚತ್ವವನ್ನು ಹೊಂದಿ, ಸ್ವರ್ಗಕ್ಕೆ ಪ್ರಯಾಣ ಮಾಡಿ, ದೇವತೆಗಳಿಂದಲೂ ಸಹ ಪೂಜೆಯನ್ನು ಕೈಗೊಂಡನು. ಅಲ್ಲಿಯೂ ಸಹ

ಪೂಜಯಂತಿ ಹರಿಂ ದೇವಂ ಸಾತ್ವಿಕಾಸ್ತು ನಿರಾಶಿಷಃ ।
ರಾಜಸಾಃ ಕಾಮುಕಾಮೂಶ್ಚ ಕ್ರೂರಕಾಮೂಶ್ಚ ತಾಮಸಾಃ ॥ ೪೦ ॥

ಹರಿಂ ಸಂಪೂಜ್ಯ ಮನಸಾ ರಾಜಸೇನ ಪುರೂರವಾಃ ।
ಸಪ್ತದ್ವೀಪಸಮುದ್ರಾಯಾಂ ಪೃಥಿವ್ಯಾಮೇಕರಾಟ್ ಬಭೌ ॥ ೪೧ ॥

ಸ್ವರ್ಗಂ ಸುದುರ್ಲಭಂ ಪ್ರಾಪ್ಯ ಸ್ಥಾನಂ ಪ್ರಾಪ್ಸ್ಯತಿ ಶಾಶ್ವತಂ ।
ನಾಸ್ತಿ ವಿಷ್ಣುಸಮೋ ನಾಥೋ ನಾಸ್ತಿ ವಿಷ್ಣುಸಮಾ ಗತಿಃ ॥ ೪೨ ॥

ನಾಸ್ತಿ ವಿಷ್ಣುಸಮಂ ತ್ರಾಣಂ ನರಸ್ಯಾರ್ತಸ್ಯ ಭೇಷಜಂ ।
ಸತ್ಕೃತಂ ಪೂಜನಂ ಯೇನ ಕೃತಂ ದೇವಸ್ಯ ಚಕ್ರಿಣಃ ॥ ೪೩ ॥

ಆರಾತ್ರಿಕಂ ಕೃತಂ ತೇನ ಸಂಪ್ರಾಪ್ತಂ ಪರಮಂ ಪದಂ ।
ಯೇನ ಸಂಕೀರ್ತಿತಂ ರಾಜನ್ಹರಿರಿತ್ಯಕ್ಷರದ್ವಯಂ ॥ ೪೪ ॥

ಚಾಕ್ಷುಷ ಮನ್ವಂತರವು ಕಳೆಯುವವರಿಗೂ ದೇವಭೋಗಗಳನ್ನನುಭವಿಸಿ ಈ ವೈವಸ್ವತ ಮನ್ವಂತರದಲ್ಲಿ ಬುಧನ ಮಗನಾದ ಪುರೂರವನಾಗಿ ಜನಿಸಿದನು. ಎಲೈ ವಜ್ರ ನರೇಂದ್ರನೇ! ಆ ಪುರೂರವ ಚಕ್ರವರ್ತಿಯು ಸೌಭಾಗ್ಯವಂತನಾಗಿ ಎಂತಹ ಸೌಂದರ್ಯವಂತನಾಗಿದ್ದನೆಂಬುವುದನ್ನೂ ಶರೀರನಾಗಿ ಸ್ವರ್ಗಲೋಕಕ್ಕೆ ಹೊರಟು ಹೋದನೆಂಬ ವಿಚಾರವನ್ನೂ ಸ್ವರ್ಗ ಲೋಕದಲ್ಲಿದ್ದಾಗ್ಯೂ ಆ ಮಹಾನುಭಾವನು ವೈವಸ್ವತ ಮನ್ವಂತರವು ಕಳೆದ ಬಳಿಕ ಚಂದ್ರಮಂಡಲ ಮಧ್ಯದಲ್ಲಿರುವ ಮಹಾವಿಷ್ಣುವಿನ ನಗರವನ್ನು ಹೊಂದುವನೆಂಬ ವಿಚಾರವನ್ನೂ ಈ ಮೊದಲೇ ನಿನಗೆ ಹೇಳಿರುವೆನಷ್ಟೆ! ಎಂತಹ ಸತ್ಕರ್ಮಾನುಷ್ಠಾನದಿಂದ ಆ ಪುರೂರವನು ಅಂತಹ ದಿವ್ಯ ಸೌಂದರ್ಯವನ್ನೂ, ಸೌಭಾಗ್ಯವನ್ನೂ ಹೊಂದಿದನೋ ನೋಡಿದೆಯಾ! ಸಾತ್ವಿಕರಾದ ಜನರು ಯಾವ ಆಶಯನ್ನೂ ಕೋರದೆ ಭಗವಂತನನ್ನು ಪೂಜಿಸುತ್ತಾರೆ ರಾಜಸ ಗುಣಪ್ರಕೃತಿಯವರು ಏನಾದರೂ ಆಶಯಿಟ್ಟುಕೊಂಡು ಕಾಮ್ಯಕರ್ಮಗಳಿಂದ ಹರಿಯನ್ನು ಪೂಜಿಸುತ್ತಾರೆ ತಾಮಸರು ಕ್ರೂರ ಕರ್ಮಗಳನ್ನು ಮಾಡುವವರಾಗಿ ದೇವರನ್ನು ಪೂಜಿಸುತ್ತಾರೆ ಈ ಪುರೂರವನು ರಾಜಸ ಗುಣದಿಂದ ಕೂಡಿದವನಾಗಿ ಭಗವಂತನನ್ನು ಪೂಜಿಸಿ ಸಪ್ತದ್ವೀಪ ಪರಿವೃತವಾದ ಸಪ್ತಸಮುದ್ರ ಪರಿವೃತವಾದ ಈ ಭೂಲೋಕಕ್ಕೆ ಒಡೆಯನಾದನು

೪೨-೪೪ ಈರೀತಿಯಾಗಿ ಯಾರು ಭಗವಂತನನ್ನು ಪೂಜಿಸುವರೋ ಅವರು ಸ್ವರ್ಗ ಸುಖವನ್ನು ಅನುಭವಿಸಿ ಆ ಬಳಿಕ ಶಾಶ್ವತವಾದ ವಿಷ್ಣು ಪದವಿಯನ್ನು

ಬದ್ಧಃ ಪರಿಕಸ್ತೇನ ಮೋಕ್ಷಾಯ ಗಮನಂ ಪ್ರತಿ ।
ಏತತ್ತೇ ಬುಧಪುತ್ರಸ್ಯ ತ್ರಿಷು ಜನ್ಮಸು ಪಾರ್ಥಿವ ।
ಚರಿತಂ ಸಕಲಂ ಪ್ರೋಕ್ತಂ ಯೇನ ಸಂಪೂಜಿತೋ ಹರಿಃ ॥ ೪೫ ॥

ಧನ್ಯಂ ಯಶಸ್ಯಂ ರಿಪುನಾಶನಂ ಚ
ಸೌಭಾಗ್ಯದಂ ಪುಷ್ಟಿವಿವರ್ಧನಂ ಚ ।
ಶ್ರೋತವ್ಯಮೇತನ್ನಿಯತಂ ಚ ಸದ್ಭಿ
ರಾಖ್ಯಾನಮೂರ್ಜಸ್ಕರಮೃದ್ಧಿಕಾಮೈಃ ॥ ೪೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪುರೂರವಸಸ್ಸ್ವಪುರಗಮನಂ ನಾಮ
ಷಟ್ಪಂಚಾಶದಧಿಕ ಶತತಮೋಽಧ್ಯಾಯಃ

---

ಹೊಂದುವರು. ವಿಷ್ಣುವಿಗೆ ಸಮಾನನಾದ ನಾಥರಿಲ್ಲ. ವಿಷ್ಣುವಿಗೆ ಸಮ್ಮತವಾದ ಗತಿಯಿಲ್ಲ. ವಿಷ್ಣುವಿನಂತಹ ಸಂರಕ್ಷಕರಿಲ್ಲ. ರೋಗಿಗೆ ಔಷಧವನ್ನು ಕೊಡುವ ವೈದ್ಯನಂತೆ ಈ ಭವರೋಗವನ್ನು ಪರಿಹರಿಸಲು ವಿಷ್ಣುವೇ ಸರಿಯಾದ ವೈದ್ಯನು. ಯಾರು ಭಗವಂತನನ್ನು ನಂಬಿ ಭಜಿಸುವರೋ ಅವರೇ ಧನ್ಯರು, ಯಾರು ಹರಿಯೆಂಬ ಎರಡಕ್ಷರವನ್ನು ನಾಲಿಗೆಯಿಂದ ಉಚ್ಚರಿಸುವರೋ ಅವರು ಮೋಕ್ಷಮಾರ್ಗಕ್ಕೆ ಬುತ್ತಿಯನ್ನು ಕಟ್ಟಿಕೊಂಡರೆಂದು ತಿಳಿದುಕೋ! ಎಲೈ ರಾಜನೇ! ಪುರೂರವನ ಮೂರು ಜನ್ಮಗಳ ಕಥೆಯನ್ನು ನಿನಗೆ ಈಗ ಹೇಳಿದನಷ್ಟೆ? ಈ ಕಥೆಯನ್ನಾರು ಕೇಳುವರೋ, ಯಾರು ಭಗವಂತನನ್ನು ಭಜಿಸುವರೋ, ಅವರೇ ಧನ್ಯರು, ಮಾನ್ಯರು, ಯಶಸ್ವಿಗಳು, ಸೌಭಾಗ್ಯಶಾಲಿಗಳು, ಆದ್ದರಿಂದ ಸತ್ಪುರುಷರಾದವರು ಈ ಕಥೆಯನ್ನು ಕೇಳಬೇಕು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪುರೂರವನ ಸ್ವಪುರ
ಗಮನವೆಂಬ ಹೆಸರಿನ ಒಂದುನೂರ ಐವ
ತ್ತಾರನೆಯ ಅಧ್ಯಾಯವು ಮುಗಿದುದು

---

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತಪಂಚಾಶದಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

**ದ್ವಾದಶೀಷು ಕಥಂ ವಿಷ್ಣುಃ ಸೋಪವಾಸೇನ ಪೂಜಿತಃ ।**
**ರಾಜ್ಯಪ್ರದಃ ಸ್ಯಾದ್ಧರ್ಮಜ್ಞ ತನ್ಮೇ ತ್ವಂ ಬ್ರೂಹಿ ತತ್ತ್ವತಃ ॥ ೧ ॥**

**ಪಶ್ಯ ರಾಜ್ಯಸ್ಯ ಮಾಹಾತ್ಮ್ಯಂ ಯತ್ರ ಧರ್ಮಸಖಾವುಭೌ ।**
**ಶೃಣು ತಸ್ಯ ಚ ಧರ್ಮಸ್ಯ ಫಲಭಾಗ್ಧಾರ್ಮಿಕೋ ನೃಪಃ ॥ ೨ ॥**

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಽಥ ಭಿಕ್ಷುಕಃ ।**
**ರಾಜ್ಞಾ ಸಂರಕ್ಷಿತಾಃ ಸರ್ವೇ ಶಕ್ಯಾ ಧರ್ಮಂ ನಿಷೇವಿತುಂ ॥ ೩ ॥**

**ಮಾನುಷೇಣ ಶರೀರೇಣ ರಾಜಾ ದೇವವಪುರ್ಧರಃ ।**
**ಕ್ಷತ್ರಿಯೋಪಿ ಸದಾ ಪೂಜ್ಯೋ ಬ್ರಾಹ್ಮಣಾನಾಂ ಮಹಾತ್ಮನಾಂ ॥ ೪ ॥**

### ಒಂದು ನೂರೈವತ್ತೇಳನೆಯ ಅಧ್ಯಾಯವು.

೧ ವಜ್ರಮಹಾರಾಜನು ಹೇಳುತ್ತಾನೆ —ದ್ವಾದಶೀ ದಿವಸಗಳಲ್ಲಿ ಉಪವಾಸವಾಗಿದ್ದು ವಿಷ್ಣುವನ್ನು ಪೂಜಿಸಿದರ ರಾಜ್ಯಾಧಿಪತಿಯಾಗುವನೆಂದು ಹೇಳಿದೆಯಷ್ಟೆ ಅದನ್ನು ಸ್ವಲ್ಪ ವಿಸ್ತಾರವಾಗಿ ತಿಳಿಸಬೇಕು

೨-೪ ಧರ್ಮ ಸಹಾಯಕರಾದವರಾರಾರೆಂದರ —ಧರ್ಮಮಾಡಿದವನೂ ಮತ್ತು ಧರ್ಮ ಫಲಕ್ಕೆ ಭಾಗಿಯಾದ ದೊರೆಯೂ ಇವರಿಬ್ಬರೂ ಧರ್ಮಕ್ಕೆ ಸ್ನೇಹಿತರಾದವರು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ, ಈ ನಾಲ್ಕು ಮಂದಿಯೂ ದೊರೆಯಿಂದ ಸಂರಕ್ಷಿತರಾಗಿ ಧರ್ಮಮಾಡುವುದಕ್ಕೆ ಯೋಗ್ಯರಾದ ಜನರೆಂದು ತಿ॰, ರಾಜನನ್ನು ಪ್ರತ್ಯಕ್ಷ ದೇವರೆಂದು ತಿಳಿದು ಮನುಷ್ಯ ಶರೀರದಿಂದ ಅವತರಿಸಿದ ರಾಜಸ್ವರೂಪ ದೇವತೆಯನ್ನು ಕ್ಷತ್ರಿಯನಾದಾಗ್ಯೂ ಬ್ರಾಹ್ಮಣರೆಲ್ಲರೂ ಪೂಜಿಸಬೇಕು

ವಿನಾ ರಾಜ್ಯಂ ಹಿ ಯಾ ಲಕ್ಷ್ಮೀಃ ಪರತಂತ್ರಾ ಹಿ ಸಾ ಮತಾ ।
ತಸ್ಮಾದ್ರಾಜ್ಯಂ ಪ್ರಶಂಸಂತಿ ತತ್ರಾಜ್ಞಾ ನ ವಿಹನ್ಯತೇ ॥ ೫ ॥

ತುಲ್ಯಧಾತುಶರೀರಾಣಾಂ ತುಲ್ಯಾವಯುವಜೀವಿನಾಂ ।
ನರೇಂದ್ರಾಣಾಂ ನರೇಬ್ರಹ್ಮನ್ ದೇವವದ್ಭುವಿ ಮನ್ಯತೇ ॥ ೬ ॥

ರಾಜ್ಯದಾಂ ದ್ವಾದಶೀಂ ತಸ್ಮಾದ್ವಕ್ತುಮರ್ಹಸಿ ಮೇ ಭವಾನ್ ।
ಯಾ ಮುಪೋಷ್ಯ ಮಹದ್ರಾಜ್ಯಂ ಪ್ರಾಪ್ನುಯಾತ್ಸ ತು ವೈ ದ್ವಿಜಃ ॥ ೭ ॥

॥ ಮಾರ್ಕಂಡೇಯ ಉವಾಚ ॥

ಶೃಣುಷ್ವಾವಹಿತೋ ರಾಜನ್ರಾಜ್ಯದಾಂ ದ್ವಾದಶೀಂ ಶುಭಾಂ ।
ಯಾ ಮುಪೋಷ್ಯ ನರೋ ಲೋಕೇ ರಾಜ್ಯಮಾಪ್ನೋತ್ಯಕಂಟಕಂ ॥ ೮ ॥

---

೫ ರಾಜ್ಯವಿಲ್ಲದ ಸಂಪತ್ತು ಪರರ ಕೈಬೊಂಬೆಯಂತಾಗುವುದಾದ್ದರಿಂದ ರಾಜ್ಯ ಲಕ್ಷ್ಮಿಯನ್ನು ಸರ್ವರೂ ಹೊಗಳುತ್ತಾರೆ ಆ ರಾಜ್ಯದಲ್ಲಿ ಆಜ್ಞೆಯು ಚೆನ್ನಾಗಿ ಪಾಲಿಸಲ್ಪಡುತ್ತದೆ

೬ ನರರಿಗೂ, ನರೇಂದ್ರರಿಗೂ ಏನು ವ್ಯತ್ಯಾಸ? ಇವರಿಬ್ಬರಿಗೂ ಒಂದೇ ವಿಧವಾದ ದೇಹವಿದೆ ರಕ್ತ ಮಾಂಸಾದಿ ಧಾತುಗಳೂ ಸಹ ಇಬ್ಬರಿಗೂ ಒಂದೇ ಆದರೂ ನರೇಂದ್ರರನ್ನು ಭೂಲೋಕದಲ್ಲಿ ಅವತರಿಸಿದ ದೇವರೆಂದು ತಿಳಿದು ಕೊಳ್ಳಬೇಕು

೭ ರಾಜ್ಯಪ್ರದವಾದ ಆ ದ್ವಾದಶಿವ್ರತದ ವಿಸ್ತಾರವನ್ನು ನನಗೆ ಹೇಳು ಯಾವ ದ್ವಾದಶೀ ದಿನ ಉಪೋಷ್ಯಮಾಡುತ್ತಾ ಇದ್ದ ಬ್ರಾಹ್ಮಣನು ಮಹತ್ತರವಾದ ರಾಜ್ಯ ಸಂಪತ್ತನ್ನು ಸಂಪಾದಿಸಿದನೋ ಆ ವಿಧವಾದ ದ್ವಾದಶೀ ವ್ರತವನ್ನು ತಿಳಿಸ ಬೇಕೆನ್ನಲು

೮ ಮಾರ್ಕಂಡೇಯನು ಹೇಳುತ್ತಾನೆ —ಎಲೈ ರಾಜನೇ ಕೇಳು ರಾಜ್ಯ ಪ್ರದವಾದ ದ್ವಾದಶೀವ್ರತವನ್ನು ತಿಳಿಸುತ್ತೇನೆ. ಯಾವ ದ್ವಾದಶೀ ದಿವಸ ಉಪವಾಸ ಮಾಡಿದ ಮನುಷ್ಯನು ನಿಷ್ಕಂಟಕವಾದ ರಾಜ್ಯವನ್ನು ಹೊಂದುತ್ತಾನೋ ಅಂತಹ ಮಹಾದ್ವಾದಶೀ ವ್ರತವನ್ನು ಸಮಾಧಾನದಿಂದ ಲಾಲಿಸು.

ಮಾರ್ಗಶೀರ್ಷಸ್ಯ ಮಾಸಸ್ಯ ಶುಕ್ಲಪಕ್ಷೇ ನರಾಧಿಪ ।
ದಶಮ್ಯಾಂ ಪ್ರಯತಃ ಕೃತ್ವಾ ಸ್ನಾನಮಭ್ಯಂಗಪೂರ್ವಕಂ ॥ ೯ ॥

ಉಪವಾಸಸ್ಯ ಸಂಕಲ್ಪಂ ಶ್ವೋಭೂತಸ್ಯ ತು ಕಾರಯೇತ್ ।
ದೇವಾಗಾರೇ ಕುಶಾಸ್ತೀರ್ಣಾಮೇಕವಸ್ತ್ರೋತ್ತರಚ್ಛದಾಂ ॥ ೧೦ ॥

ಅಧ್ಯಾಸೀತ ಮಹೀಂ ತತ್ರ ತಾಂ ರಾತ್ರಿಂ ಪ್ರಯತೋ ನಯೇತ್ ।
ದ್ವಿತೀಯೇಽಹ್ನಿ ತತಃ ಕುರ್ಯಾದ್ಬಹಿಃ ಸ್ನಾನಮತಂದ್ರಿತಃ ॥ ೧೧ ॥

ಪೂಜನಂ ದೇವದೇವಸ್ಯ ಸರ್ವಂ ಶುಕ್ಲೇನ ಕಾರಯೇತ್ ।
ಕರ್ಪೂರಂ ಚಂದನಂ ದೇಯಂ ಮಲ್ಲಿಕಾ ಶ್ವೇತಯೂಥಿಕಾ ॥ ೧೨ ॥

ಜಾತ್ಯಾ ಚ ಶುಕ್ಲಾ ರಾಜೇಂದ್ರ ಧೂಪೇ ಕರ್ಪೂರಮೇವ ಚ ।
ಘೃತೇನ ದೀಪಾ ದಾತವ್ಯಾ ಶುಕ್ಲವರ್ತಿಸಮನ್ವಿತಾಃ ॥ ೧೩ ॥

---

೯-೧೩ ಮಾರ್ಗಶೀರ್ಷ ಶುದ್ಧ ದಶಮಿಯ ದಿವಸ ಬೆಳಿಗ್ಗೆ ಎದ್ದು, ಅಭ್ಯಂಗ ಸ್ನಾನ ಮಾಡಿಕೊಳ್ಳಬೇಕು. ನಾಳೆಯ ದಿನ ಮಾಡಬೇಕಾದ ಉಪವಾಸಕ್ಕೆ ಸಂಕಲ್ಪವನ್ನು ಮಾಡಬೇಕು. ಆ ರಾತ್ರಿ ದೇವಸ್ಥಾನದಲ್ಲಿ ಬಿಳೀ ವಸ್ತ್ರವನ್ನೇ ಉಟ್ಟು, ಅದನ್ನೇ ಅರ್ಧ ಹೊದ್ದುಕೊಂಡು ಕೂತುಕೊಂಡೇ ಆ ರಾತ್ರಿಯನ್ನೆಲ್ಲಾ ಕಳೆಯ ಬೇಕು. ಎರಡನೇ ದಿನ ಬೆಳಿಗ್ಗೆ ಹೊರಕ್ಕೆ ಹೋಗಿ ನದಿಯಲ್ಲಿಯೋ ಕೆರೆಯಲ್ಲಿಯೋ ಸ್ನಾನಮಾಡಿಕೊಂಡು ಬರಬೇಕು. ಆಮೇಲೆ ಆ ದಿನದ ದೇವತಾರ್ಚನೆಯನ್ನು ಬಿಳಿ ಇರುವ ಪದಾರ್ಥಗಳಿಂದಲೇ ಮಾಡಬೇಕು. ಬಿಳಿಯ ಕರ್ಪೂರ, ಬಿಳಿಯ ಗಂಧ, ಮಲ್ಲಿಗೇಹೂವು, ಬಿಳೀಶಾವಂತಿಗೆಹೂವು, ಬಿಳೀಜಾಜೀಹೂವು, ಬಿಳೀಹಾಲುಮಡ್ಡಿ ಧೂಪ, ಬಿಳೀಮುಂಗಳಾರತಿಬತ್ತಿ, ತುಪ್ಪದದೀಪ, ತುಪ್ಪದ ಅನ್ನ, ಮೊಸರನ್ನ, ಹಾಲನ್ನ, ಪರಮಾನ್ನ, ಕಬ್ಬಿನಹಾಲು, ಮುಂತಾದ ಶುಭ್ರ ಪದಾರ್ಥಗಳನ್ನು ದೇವರಿಗೆ ಸಮರ್ಪಿಸಬೇಕು. ಆ ದಿನವೇ ಕುಯ್ದು ತಂದ ಮೂಲಿ ಫಲಗಳನ್ನು ನಿವೇದಿಸಬೇಕು. ಇಷ್ಟಾದಮೇಲೆ ಪರಮಾನ್ನದಿಂದ ತದ್ವಿಷ್ಣೋಃ ಪರಮಂಪದಂ ಎಂಬ ಮಂತ್ರವನ್ನು ಹೇಳಿಕೊಂಡು ಅಗ್ನಿಯಲ್ಲಿ ಹೋಮವಮಾಡಬೇಕು. ಬಳಿಕ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ದೇವಸ್ಥಾನದಲ್ಲಿ ರಂಗವಲ್ಲಿಯಿಂದ ಚಿತ್ರಗಳನ್ನು ಬರೆದು, ಭೂಮಿಯನ್ನು ಅಲಂಕರಿಸಿ ರಾತ್ರಿ ಅಲ್ಲಿ ಕುಳಿತು, ಗೀತ ನೃತ್ಯಾದಿಗಳನ್ನು ಮಾಡಿಸುತ್ತಾ

ಘೃತೌದನಂ ದಧಿ ಕ್ಷೀರಂ ಪರಮಾನ್ನಂ ತಥೈವ ಚ ।
ಇಕ್ಷುಮಿಕ್ಷುವಿಕಾರಾಂಶ್ಚ ದೇವದೇವೇ ನಿವೇದಯೇತ್ ॥ ೧೪ ॥

ಕಾಲೋದ್ಭವಂ ಮೂಲಫಲಂ ವರ್ಣಂ ತತ್ರ ನ ಚಿಂತಯೇತ್ ।
ಯಥಾ ಲಾಭೇನ ತದ್ದೇಯಂ ಶುಕ್ಲಂ ಚೇತ್ಸ್ಯಾದ್ವಿಶೇಷತಃ ॥ ೧೫ ॥

ಹವನಂ ಚ ತತಃ ಕಾರ್ಯಂ ಪರಮಾನ್ನೇನ ಪಾರ್ಥಿವ ।
ತದ್ವಿಷ್ಣೋಃ ಪರಮಿತ್ಯೇವ ಹೋಮಮಂತ್ರೋ ವಿಧೀಯತೇ ॥ ೧೬ ॥

ದ್ವಾದಶಾಕ್ಷರಕಂ ಮಂತ್ರಂ ಸ್ತ್ರೀ ಶೂದ್ರಸ್ಯ ವಿಧೀಯತೇ ।
ತತೋಽಗ್ನಿಹವನಂ ಕೃತ್ವಾ ಶಕ್ತ್ಯಾ ಸಂಪೂಜ್ಯ ಚ ದ್ವಿಜಾನ್ ॥ ೧೭ ॥

ಸಿತರಂಗೇನ ಕರ್ತವ್ಯಾ ಭೂಮಿಶೋಭಾ ಸುರಾಲಯೇ ।
ರಾತ್ರೌ ಜಾಗರಣಂ ಕಾರ್ಯಂ ಗೀತ ನೃತ್ಯಂ ಚ ಪಾರ್ಥಿವ ॥ ೧೮ ॥

ಕರ್ಮಣಾ ಚೈವ ದೇವಸ್ಯ ಕರ್ತವ್ಯಂ ಶ್ರವಣಂ ತಥಾ ।
ದ್ವಾದಶ್ಯಾಂ ವಿಧಿನಾಽನೇನ ಭೂಯಃ ಪೂಜ್ಯೋ ಜನಾರ್ದನಃ ॥ ೧೯ ॥

ರಾಜಲಿಂಗಂ ಪ್ರದಾತವ್ಯಮೇಕಂ ವಿಪ್ರಾಯ ದಕ್ಷಿಣಾ ।
ತತಸ್ತು ಪಶ್ಚಾದ್ಭೋಕ್ತವ್ಯಂ ಹವಿಷ್ಯಂ ಪಾರ್ಥಿವೋತ್ತಮ ॥ ೨೦ ॥

ಏಕಾದಶೀ ಯಥಾ ಮಧ್ಯೇ ಸ್ನಾನಯೋರಂತರೇ ನೃಪ ।
ಕಷ್ಟಂ ಮೌನಂ ತು ಕರ್ತವ್ಯಂ ಜಪ್ಯಂ ಕಾರ್ಯಂ ತು ಮಾನಸಂ ॥ ೨೧ ॥

---

ಜಾಗರಣೆಮಾಡಬೇಕು ಪರಮಾತ್ಮನ ಚರಿತ್ರೆಗಳನ್ನು ಶ್ರವಣಮಾಡಬೇಕು ಈರೀತಿ ಈ ವಿಧಿಯಿಂದ ದ್ವಾದಶೀದಿನ ಮಹಾವಿಷ್ಣುವನ್ನು ಪೂಜಿಸಬೇಕು. ಬ್ರಾಹ್ಮಣನಿಗೆ ಒಂದು ರಾಜಲಿಂಗವನ್ನು ಪ್ರತಿಮೆಯನ್ನು ದಾನಮಾಡಬೇಕು. ತಾನು ಆ ಬಳಿಕ ಹವಿಷ್ಯಾನ್ನವನ್ನು ಭೋಜನಮಾಡಬೇಕು ದಶಮಿ ದ್ವಾದಶೀ ಈ ಎರಡು ದಿನಗಳ ಮಧ್ಯದಲ್ಲಿ ಏಕಾದಶಿಯು ಬರುವುದರಿಂದ ಆ ಏಕಾದಶೀದಿನ ಸ್ವಲ್ಪ ಕಷ್ಟಪಟ್ಟು ಮೌನದಿಂದಲೇಇದ್ದು, ಮನಸ್ಸಿನಲ್ಲಿಯೇ ಜಪಮಾಡುತ್ತಲಿರಬೇಕು ಈರೀತಿ ಪ್ರತಿತಿಂಗಳ ಶುಕ್ಲಪಕ್ಷದ ದ್ವಾದಶಿಗಳಲ್ಲಿಯೂ ವ್ರತಸಾಧನೆಮಾಡಬೇಕು. ಮತ್ತು ಕೃಷ್ಣಪಕ್ಷದ ದ್ವಾದಶೀ ದಿವಸಗಳಲ್ಲೂ ಇದೇ ರೀತಿ ನಡಸಿಕೊಂಡು ಬರಬೇಕು

ದ್ವಾದಶೀಷ್ವೇವ ಶುಕ್ಲಾಸು ಸರ್ವಾಸ್ವೇವಾ ವಿಶೇಷತಃ ।
ವಿಧಿಸ್ತವಾಯಂ ನಿರ್ದಿಷ್ಟಃ ಕೃಷ್ಣಾಸ್ವೇವಂ ಚ ಕಾರಯೇತ್ ॥ ೨೨ ॥

ವಿಶೇಷಂ ತೇ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ।
ರಕ್ತವರ್ಣೇನ ಕರ್ತವ್ಯಾ ದೇವಪೂಜಾ ಯಥಾವಿಧಿ ॥ ೨೩ ॥

ರಕ್ತಂ ಚ ದೇಯಂ ನೈವೇದ್ಯಂ ಪುಷ್ಪಗಂಧಾನುಲೇಪನಂ ।
ತಿಲತೈಲೇನ ದೀಪಾಶ್ಚ ಮಹಾರಂಜನರಂಜಿತಾಃ ॥ ೨೪ ॥

ದೀಪೇಷು ವರ್ತಯೋ ದೇಯಾ ಹೋಮಃ ಕಾರ್ಯಸ್ತಥಾ ತಿಲೈಃ ।
ಭೂಮಿಶೋಭಾ ಚ ಕರ್ತವ್ಯಾ ರಕ್ತೈರ್ಭೂಪಾಲವರ್ಣಕೈಃ ॥ ೨೫ ॥

ಅನೇನ ವಿಧಿನಾ ಕೃತ್ವಾ ರಾಜನ್ಸಂವತ್ಸರಂ ತತಃ ।
ಕಾರ್ತಿಕ್ಯಾಂ ಸಮತೀತಾಯಾಂ ಕೃಷ್ಣಾ ಯಾ ದ್ವಾದಶೀ ಭವೇತ್ ॥ ೨೬ ॥

ವ್ರತಾವಸಾನೇ ತಸ್ಯಾಂ ತು ಮಹಾವರ್ತಿಂ ತು ದಾಪಯೇತ್ ।
ವಾಸಸಾ ಚ ಸಮಗ್ರೇಣ ತುಲಯಾ ಚ ಘೃತಸ್ಯ ವೈ ॥ ೨೭ ॥

ಬ್ರಾಹ್ಮಣಾಯ ಪ್ರದಾತವ್ಯಾ ಧೇನುಃ ಕಾಂಸ್ಯೋಪದೋಹನಾ ।
ಹೇಮಶೃಂಗೀ ರೌಪ್ಯಖುರಾ ಮುಕ್ತಾಲಾಂಗೂಲಭೂಷಿತಾ ॥ ೨೮ ॥

---

೨೩-೨೮ ಈ ವಿಷಯದಲ್ಲಿ ಒಂದು ವಿಶೇಷ ವಿಧಿಯನ್ನು ಹೇಳುತ್ತೇನೆ ಕೇಳು. ದೇವರ ಪೂಜೆಯನ್ನು ಕೆಂಪುಬಣ್ಣದ ಪದಾರ್ಥಗಳಿಂದಲೇ ಮಾಡತಕ್ಕದ್ದು. ಒಂದು ವಿಶೇಷ ಕ್ರಮವೆನಿಸುವುದು. ಭಕ್ಷ್ಯಗಳೂ, ನೈವೇದ್ಯಗಳೂ, ಹೂವು, ಗಂಧ ಎಲ್ಲವೂ ಕೆಂಪು ಬಣ್ಣದಿಂದಲೇ ಇರಬೇಕು. ಒಳ್ಳೆಣ್ಣೆಯ ದೀಪವನ್ನೂ, ದಪ್ಪ ದಪ್ಪ ಬತ್ತಿಯನ್ನೂ ಹಾಕಿ, ದೀಪವನ್ನು ಪ್ರಕಾಶವಾಗಿರುವಂತೆ ಹಚ್ಚಿಸಬೇಕು. ಹೋಮವನ್ನು ತಿಲಗಳಿಂದಲೇ ಮಾಡಬೇಕು. ಭೂಮಿಯನ್ನು ಸಹ ಕೆಂಪುಬಣ್ಣದ ರಂಗವಲ್ಲಿಗಳಿಂದಲೇ ಅಲಂಕರಿಸಬೇಕು. ಈರೀತಿ ಒಂದು ವರ್ಷಕಾಲ ಪೂಜೆಮಾಡಿ ಕಾರ್ತಿಕ ಬಹುಳ ದ್ವಾದಶೀದಿನದ ವ್ರತಾಂತ್ಯದಲ್ಲಿ ಮಂಗಳಾರತಿ ಬತ್ತಿಯನ್ನು ದಪ್ಪ ದಪ್ಪನಾಗಿ ಹೊಸೆದು, ಅದನ್ನೂ ವಸ್ತ್ರಗಳನ್ನೂ ತುಪ್ಪ ತುಂಬಿದ ಕಂಚನ್ನೂ ಬ್ರಾಹ್ಮಣನಿಗೆ ದಾನ ಮಾಡಬೇಕು. ಇದರ ಜತೆಯಲ್ಲಿ ಹಾಲು ಕರೆಯುವ ಕಂಚಿನ ಪಾತ್ರೆ ಸಹಿತವಾಗಿ ಒಂದು ಕರೆಯುವ ಹಸುವನ್ನೂ ಸಹ ದಾನಮಾಡಬೇಕು. ಅದರ ಕೊಂಬಿಗೆ ಚಿನ್ನದ ಗವಸನ್ನೂ, ಕಾಲಿಗೆ ಬೆಳ್ಳಿಯ ಗೊರಸನ್ನೂ ಬಾಲಕ್ಕೆ ಮುತ್ತಿನ ಜಾಲರಿಯನ್ನೂ ಅಲಂಕಾರಮಾಡಿ ಹಸುವಿನ ಮೇಲೆ ಒಂದು ವಂಚೆಯನ್ನು ಹೊದಿಸಿ ಶಕ್ತ್ಯನುಸಾರವಾದ

ವಸ್ತ್ರೋತ್ತರೀಯಾ ದಾತವ್ಯಾ ಶಕ್ತ್ಯಾ ದ್ರವಿಣಸಂಯುತಾ ।
ಸಂವತ್ಸರೇಣ ರಾಜಾ ಸ್ಯಾನ್ನರಃ ಪರ್ವತಗಹ್ವರೇ ॥ ೨೯ ॥
ತ್ರಿಭಿಃ ಸಂವತ್ಸರೈಃ ಪೂರ್ಣೈರ್ಜಾಯತೇ ಸಫಲಂ ತತಃ ।
ತಥಾ ದ್ವಾದಶಭಿಃ ಪೂರ್ಣೈಃ ರಾಜಾ ಭವತಿ ಪಾರ್ಥಿವಃ ॥ ೩೦ ॥

ರಾಜ್ಯಪ್ರದಾ ತೇಽಭಿಹಿತಾಮುಖ್ಯೈಷಾ
ಸುದ್ವಾದಶೀ ಪಾಪಹರಾ ಪರಿಷ್ಟಾ
ಉಪೋಷ್ಯ ಯಾಂ ಭೂಮಿತಲೇ ನರೇಂದ್ರೋ
ಭವತ್ಯಜೇಯಶ್ಚ ರಣಾರಿಸಂಘ್ಯಃ ॥ ೩೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಜ್ಯಪ್ರದದ್ವಾದಶೀ ವಿಧಿರ್ನಾಮ ಸಪ್ತ
ಪಂಚಾಶ ದಧಿಕಶತತಮೋಽಧ್ಯಾಯಃ

---

ದಕ್ಷಿಣೆಯನ್ನಿರಿಸಿ ದಾನಮಾಡಬೇಕು ಈರೀತಿ ಮಾಡಿದರೆ ಒಂದು ವರ್ಷದೊಳಗ ಪರ್ವತದ ಗುಹೆಗಳಲ್ಲಿ ರಾಜನಾಗುತ್ತಾನೆ (ಅಂದರೆ ಅರಣ್ಯಶಾಖೆಯ ಮುಖ್ಯಾಧಿಪತಿಯಾಗುತ್ತಾನೆ) ಮೂರು ವರ್ಷಕಾಲ ಈರೀತಿ ವ್ರತಮಾಡಿದರೆ ತನ್ನ ಮನಸ್ಸಿನ ಇಷ್ಟಾರ್ಥವೆಲ್ಲಾ ನೆರವೇರುತ್ತದ. ಹನ್ನೆರಡು ವರ್ಷ ಮಾಡಿದರಂತೂ ಖಂಡಿತವಾಗಿ ರಾಜ್ಯಾಧಿಪತಿಯಾಗುತ್ತಾನೆ

ಟಿಪ್ಪಣಿ —ಮೂರು ವರ್ಷಗಳ ಕೆಲಸಮಾಡಿದ ದೇಶಾಧಿಕಾರಿಯು, ಮಂತ್ರಿಯಾಗುವವಿಷಯವೂ ಹನ್ನೆರಡು ವರ್ಷ ಮಂತ್ರಿಸದನಿಯಲ್ಲಿದ್ದವನು ರಾಜಪ್ರತಿನಿಧಿಯಾಗಿ ರಾಜ್ಯಾಡಳಿತಗಳನ್ನು ನಿರ್ವಹಿಸಲು ಯೋಗ್ಯತೆ ಹೊಂದುವುದೂ ಸಾಮಾನ್ಯವಾಗಿ ರೂಢಿಯಲ್ಲೇ ಇರುವ ವಿಚಾರವಾಗಿದೆ ವ್ಯಾಸರು ಈ ಮಾತನ್ನು ಸುಮ್ಮನೆ ಹೇಳಿಲ್ಲ ದೊಡ್ಡ ದೊಡ್ಡ ಅಧಿಕಾರಬೇಕೆಂದಾಶೆ ಪಡುವವರು ನಿಯಮದಿಂದ ಈ ದ್ವಾದಶೀವ್ರತವನ್ನು ಮಾಡಿ ನೋಡಲಿ ಆಗ ಇದರ ಸತ್ಯಾಂಶವು ಅವರಿಗೇ ಗೊತ್ತಾಗುವುದು ಎಲೈ ವಜ್ರರಾಜನೇ, ರಾಜ್ಯಪ್ರದವಾದ ಈ ಪರಮಪವಿತ್ರವಾದ ದ್ವಾದಶೀ ಉಪೋಷ್ಯವ್ರತವನ್ನು ನಿನಗೆ ಹೇಳಿದೇನೆ ಈ ರೀತಿ ಮಾಡುವವನು ಖಂಡಿತವಾಗಿ ನರೇಂದ್ರನಾಗಲು ಸಂದೇಹವಿಲ್ಲ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ರಾಜ್ಯಪ್ರದದ್ವಾದಶೀ ವಿಧಿಯೆಂಬ
ಹೆಸರಿನ ಒಂದುನೂರ-ಐವತ್ತೇಳಯ
ಅಧ್ಯಾಯವು ಮುಗಿದುದು.

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ||ಅಷ್ಟ ಪಂಚಾಶದಧಿಕಶತತಮೋಽಧ್ಯಾಯಃ||

॥ ಮಾರ್ಕಂಡೇಯ ಉವಾಚ ॥

ಮಾರ್ಗಶೀರ್ಷಸ್ಯ ಮಾಸಸ್ಯ ಶುಕ್ಲಪಕ್ಷಾಜ್ಜನಾಧಿಪ ।
ಆರಭ್ಯಾಭ್ಯರ್ಚಯೇದ್ದೇವಂ ದ್ವಾದಶೀಷು ಸದೈವ ತು ॥ ೧ ॥
ಪಕ್ಷಯೋರುಭಯೋರ್ನಿತ್ಯಂ ಸೋಪವಾಸೋ ಜಿತೇಂದ್ರಿಯಃ ।
ಫಲೈಃ ಪುಷ್ಪೈಯರ್ಥಾಕಾಮಂ ನೈವೇದ್ಯೈರ್ಹೋಮಕರ್ಮಣಾ ॥ ೨ ॥
ಪೂಜನೇ ಬ್ರಾಹ್ಮಣಾನಾಂ ಚ ಶಕ್ತ್ಯಾ ದಾನಂ ಚ ಪಾರ್ಥಿವ ।
ಅಭೀಷ್ಟನಾಮಜಪ್ಯೇನ ಪೂರ್ಣಾತ್ಸಂವತ್ಸರಾನ್ನರಃ ॥ ೩ ॥

### ಒಂದುನೂರ ಐವತ್ತೆಂಟನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಮಾರ್ಗಶಿರಶುದ್ಧ ದ್ವಾದಶೀದಿನ ದಿಂದ ಆರಂಭಿಸಿ ಪ್ರತಿ ದ್ವಾದಶಿಯಲ್ಲೂ ಪರಮಾತ್ಮನನ್ನು ಪೂಜಿಸಬೇಕು

೨-೫ ಎರಡು ಪಕ್ಷದ ದ್ವಾದಶಿಗಳಲ್ಲೂ ಉಪವಾಸವಿದ್ದು ಷೋಡಶೋಪ ಚಾರಪೂಜೆ, ನೈವೇದ್ಯ, ಹೋಮಗಳನ್ನೂ, ಬ್ರಾಹ್ಮಣ ಪೂಜೆಯನ್ನೂ ಶಕ್ತ್ಯನುಸಾರ ದಾನಗಳನ್ನೂ, ಜಪಗಳನ್ನೂ ಒಂದು ವರ್ಷಮಾಡಿದರೆ ಖಂಡಿತ ರಾಜನಾಗುತ್ತಾನೆ ಎಲ್ಲಿದ್ದರೂ ಅವನಿಗೆ ದುಃಖವೇ ಇಲ್ಲ ಆದರೆ ನಮಗೆ ಯಾವ ಇಷ್ಟಾರ್ಥವೂ ಬೇಡ ವೆಂದು ನಿಷ್ಕಾಮರಾಗಿ ಭಗವಂತನಧ್ಯಾನಮಾಡುವ ಸಾತ್ವಿಕ ಜನರು ಮೋಕ್ಷವನ್ನು ಪಡೆ ಯುವರು ಆದ್ದರಿಂದ ಎಲೈ ರಾಜನೇ !ಯಾವ ಮನುಷ್ಯನಾದರೂ ವ್ಯಾಪಾರ (ಸಕಾಮ ಧರ್ಮ)ದಿಂದ ಭಗವದಾರಾಧನೆಯನ್ನು ರಾಜಸಗುಣದಿಂದ ಕೂಡಿ ಮಾಡಬಾರದು ನಿಜವಾಗಿಯೂ ನಿಷ್ಕಾಮಭಾವನೆಯಿಂದಲೇ ಲೋಕಸಂರಕ್ಷಕನಾದ ಪರಬ್ರಹ್ಮನನ್ನು ಉಪಾಸನೆಮಾಡುತ್ತ ಬರಬೇಕು

ತದೇವಾಪ್ನೋತಿ ರಾಜೇಂದ್ರ ಯತ್ರ ಗತ್ವಾ ನ ಶೋಚತಿ ।
ಅಕಾಮಾಃ ಸಾತ್ವಿಕಾ ದೇವಂ ಪೂಜಯಂತಿ ಜನಾರ್ದನಂ ॥ ೪ ॥

ತಸ್ಮಾದಕಾಮೇನ ನರೇಂದ್ರಚಂದ್ರ
ಸಂಪೂಜನೀಯೋ ಭುವನಸ್ಯ ಗೋಪ್ತಾ ।
ತ್ಯಕ್ತ್ವಾವಣಿಜ್ಯಂ ನರದೇವ ಲೋಕೇ
ದೇವೇಶ್ವರೋ ವಿಷ್ಣುರುಪಾಸನೀಯಃ ॥ ೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಕಾಮದ್ವಾದಶೀ
ವರ್ಣನಂ ನಾಮಾಷ್ಟ ಪಂಚಾಶದಧಿಕ
ಶತತಮೋಽಧ್ಯಾಯಃ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಕಾಮದ್ವಾದಶೀ ವರ್ಣನೆಯೆಂಬ
ಹೆಸರಿನ ಒಂದುನೂರ ಐವತ್ತೆಂಟನೆಯ
ಅಧ್ಯಾಯವು ಮುಗಿದುದು

ಟಿಪ್ಪಣಿ — ಈ ಅಧ್ಯಾಯದಲ್ಲಿ ಕರ್ಮಫಲವನ್ನು ಯಥೇಚ್ಛವಾಗಿ ಹೊಗಳಿ ಹೊಗಳಿ ಕಡೆಗೆ ವ್ಯಾಸರು ಅಕಾಮಾಸ್ಸಾತ್ವಿಕಾದೇವಂ ಎಂಬ ಶ್ಲೋಕವನ್ನು ತಸ್ಮಾದ ಕಾಮೇನ ನರೇಂದ್ರ ಚಂದ್ರ ತ್ಯಕ್ತ್ವಾವಣಿಜ್ಯಂ ಎಂಬ ಶ್ಲೋಕವನ್ನೂ ಹೇಳಿ ಕಾಮದ್ವಾದಶೀ ಎಂಬ ಅಧ್ಯಾಯವನ್ನು ಮುಗಿಸಿರುವರು. ೧೫೬ನೆಯ ಅಧ್ಯಾಯ ದಲ್ಲಿ---ಪೂಜಯಂತಿ ಹರಿಂ ದೇವಂ ಸಾತ್ವಿಕಾಸ್ತು ನಿರಾಶಿಷಃ ॥ ರಾಜಸಾಃ ಕಾಮ ಕಾಮಾಸ್ತು ॥ ಹರಿಂ ಸಂಪೂಜ್ಯ ಮನಸಾ ರಾಜಸೇನ ಪುರೂರವಾಃ ॥ ಸಪ್ತದ್ವೀಪ ಸಮುದ್ರಾಯಾಂ ಪೃಥಿವ್ಯಾಮೇಕರಾಡ್ಬಭೌ ॥ ಎಂದು ಹೇಳಿರುವರು. ಇದೇ ವಿಷಯ ವನ್ನೇ ಸಕಲ ಪುರಾಣಗಳನ್ನೂ ಬರೆದಿರುವ ಇದೇ ವ್ಯಾಸರೇ ಭಗವದ್ಗೀತೆಯ ಕರ್ಮ ಅಧ್ಯಾಯದಲ್ಲಿ ಬಹಳ ಚನ್ನಾಗಿ ವಿವರಿಸಿರುವರು ಅದರಲ್ಲಿ ಒಂದೆರಡು ಶ್ಲೋಕ ಗಳನ್ನು ಇಲ್ಲಿ ಬರೆಯುತ್ತೇವೆ

ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ ।
ಅಫಲಪ್ರೇಪ್ಸುನಾಕರ್ಮ ಯತ್ತತ್ಸಾತ್ವಿಕಮುಚ್ಯತೇ ॥

ಯುಕ್ತಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ||
ಕ್ರಿಯತೇ ಬಹುಳಾಯಾಸಂ ತದ್ರಾಜಸಮುದಾಹೃತಂ ||

ಮುಖ್ಯ ತಾತ್ಪರ್ಯ ವೇನೆಂದರೆ—ಯಾವ ಫಲವನ್ನೂ ಬಯಸದ ಮಾಡುವ ಕರ್ಮಕ್ಕೆ ಸಾತ್ವಿಕ ಕರ್ಮವೆಂದೂ ಫಲವನ್ನು ಬಯಸಿ ಬಹು ಕ್ಲೇಶದಿಂದ ಮಾಡುವ ಕರ್ಮಕ್ಕೆ ರಾಜಸ ಕರ್ಮವೆಂತಲೂ ಹೆಸರು ಇದೇ ರೀತಿ ರಜೋಗುಣ ಸತ್ವಗುಣದ ಲಕ್ಷಣಗಳನ್ನು ಸಂಪೂರ್ಣವಾಗಿ ಈ ಅಧ್ಯಾಯದಲ್ಲಿ ವಿವರಿಸಿದ್ದಾರೆ ಇದಕ್ಕೆ ನೂರಾರು ವ್ಯಾಖ್ಯಾನಗಳೂ, ಟೀಕೆ ಟಿಪ್ಪಣಿಗಳೂ, ಬರೆಯಲ್ಪಟ್ಟು ಎಲ್ಲೆಲ್ಲೂ ಅಚ್ಚಾಗಿವೆ ಇದನ್ನೆಲ್ಲಾ ಬರೆಯುವುದಕ್ಕೆ ಹೋದರೆ ಪ್ರಕೃತದಲ್ಲಿ ರಾಜಾಜ್ಞಾ (ದೃನಾಜ್ಞಾ) ಪ್ರಚೋದಿತರಾಗಿ ನಾವು ಬರೆಯುತ್ತಿರುವ ಈ ಪುರಾಣದ ಮುಖ್ಯ ಲೇಖನ ಗೌರವಕ್ಕೆ ಕಾಲ ವಿಳಂಬವಾಗುವುದರಿಂದಲೂ ಈಗ ಬರೆಯ ತೊಡಗಿರುವ, ರಾಜಸ, ಸಾತ್ವಿಕ, ಸಕಾಮ, ನಿಷ್ಕಾಮ, ಮೋಕ್ಷ, ವಾಣಿಜ್ಯ, ಪ್ರಕರಣಗಳೇ ಸಾವಿರಾರು ಪುಟಗಳ ಲೇಖನವಾಗಿ ಬಳೆದುಹೋಗುವುದರಿಂದಲೂ ನಾವು ಈ ವಿಚಾರವನ್ನು ಮಾನಸಿಕ ಮಾಡಿ ಕೆಲವು ಮಾತುಗಳಿಂದ ಟಿಪ್ಪಣಿಯನ್ನು ಮುಗಿಸುತ್ತೇವೆ ಸಕಲ ಕರ್ಮಗಳೂ ಚಿತ್ತಶುದ್ಧಿಗಾಗಿ ಮಾಡಲ್ಪಡತಕ್ಕುವೇ ಹೊರ್ತು ಅವರಿಂದಬ್ರಹ್ಮಸಾಕ್ಷಾತ್ಕಾರವಾಗಿ ಮೋಕ್ಷವಾಗುವುದಿಲ್ಲ. ಆದ್ದರಿಂದಲೇ ಸಕಲ ಕರ್ಮಗಳೂ ಸಕಲ ಪಾಪಪರಿಹಾರಕ್ಕಾಗಿಯೂ, ಈಶ್ವರ ಪ್ರೀತಿಗಾಗಿಯೂ, ಮಾಡಲ್ಪಡಬೇಕೆಂದು, ಸಂಕಲ್ಪ ಕಾಲದಲ್ಲಿ ಹೇಳುತ್ತೇವೆ ಮಾನವ ಜನ್ಮದ ಗುರಿಯು, ಈಶ್ವರ ಸ್ವರೂಪವನ್ನು ತಿಳಿದು ಜ್ಞಾನವನ್ನು ಹೊಂದಿ ತನ್ಮೂಲಕ ಮೋಕ್ಷ ಸಾಮ್ರಾಜ್ಯವನ್ನು ಹೊಂದುವುದೇ ಆಗಿರುತ್ತದೆ ಭಗವಂತನನ್ನು ನಿಷ್ಕಪಟ ಭಕ್ತಿಯಿಂದ ಪೂಜಿಸುವವನು ಆದೆಷ್ಟೇ ದರಿದ್ರನಾದಾಗ್ಯೂ, ಅವನ ಜೀವನ ನಿರ್ವಹಣ ಭಾರವು ಭಗವಂತನಿಗೆ ಸೇರಿದ ಅವನ ಬಡತನವನ್ನೂ ದೇವರೇ ಪರಿಹಾರ ಮಾಡಿ ಐಶ್ವರ್ಯವನ್ನು ಕೊಡುತ್ತಾನೆ

ಅನನ್ಯಾಶ್ಚಿಂತಯಂತೋಮಾಂ ವಹಾಮ್ಯಹಂ ||

ಎಂಬ ಶ್ಲೋಕದಲ್ಲಿ ಈ ಮಾತನ್ನು ಭಗವಂತನೇ ಹೇಳಿದ್ದಾನೆ ಸಕಲ ವೇದ ಪುರಾಣಗಳೂ ಇದನ್ನೇ ಘಂಟಾಘೋಷವಾಗಿ ಹೇಳಿವೆ. ಹೀಗಿರುವಲ್ಲಿ ಜನರು ಇದನ್ನು ನಂಬದೆ ದುಃಖಪಡುವುದಾದರೆ ಅವರನ್ನು ಅದೃಷ್ಟಹೀನರೆಂದು ಕರೆಯಬೇಕು ನಾವು ಈ ಹಿಂದೆ ಹಿಮಾಲಯ ಪರ್ವತ ವರ್ಣನಾಧ್ಯಾಯದ ಟಿಪ್ಪಣಿಯಲ್ಲಿ ಬರೆದಿರುವ ಯೋಮೇಗರ್ಭ ಗತಸ್ಯಾಪಿ ಎಂಬ ಶ್ಲೋಕದ ಅರ್ಥ ವಿವರಣೆಯನ್ನೂ, ಭಗವಂತನ ಅಪಾರ ಮಹಿಮೆಯನ್ನೂ ಆತನ ಪಂಚಭೂತಾಧಿಪತಿತ್ವವನ್ನೂ ಚೆನ್ನಾಗಿ ಯೋಚಿಸಿ ನೋಡಿರಿ

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕೋನಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಭಗವಂಚ್ಛ್ರೋತುಮಿಚ್ಛಾಮಿ ದ್ವಾದಶೀಷು ಪೃಥಕ್ಪೃಥಕ್ ।
ಉಪೋಷ್ಯ ಕಿಂ ಫಲಂ ಲೋಕೇ ಶುಕ್ಲಪಕ್ಷೇ ವಿಧೀಯತೇ ॥ ೧ ॥

ಅನೇಕಜನ್ಮಸಾಹಸ್ರ್ಯೈರ್ಯೇಷಾಂ ಪಾಪಂ ಕ್ಷಯಂ ಗತಂ ।
ಅಕಾಮಾಸ್ತೇ ಪ್ರವರ್ತಂತೇ ದೇವದೇವಾರ್ಚನೇ ನರಾಃ ॥ ೨ ॥

॥ ಮಾರ್ಕಂಡೇಯ ಉವಾಚ ॥

ದ್ವಾದಶ್ಯಾಂ ಮಾರ್ಗಶೀರ್ಷಸ್ಯ ಶುಕ್ಲಪಕ್ಷೇ ಉಪೋಷಿತಃ ।
ನಾಮ್ನಾ ಕೇಶವಮಭ್ಯರ್ಚ್ಯ ವಹ್ನಿಷ್ಟೋಮಫಲಂ ಲಭೇತ್ ॥ ೩ ॥

### ನೂರ ಐವತ್ತೊಂಭತ್ತನೆಯ ಅಧ್ಯಾಯವು

೧-೨ ವಜ್ರಮಹಾರಾಜನು ಹೇಳುತ್ತಾನೆ —ಎಲೈ ಮಾರ್ಕಂಡೇಯ ಋಷಿಯೇ ! ಶುಕ್ಲಪಕ್ಷದಲ್ಲಿ ಒರುವ ಬೇರೆ ಬೇರೆ ದ್ವಾದಶಿಗಳಲ್ಲಿ ಕಾಮನೆಯಿಂದ ಉಪವಾಸಮಾಡಿದರೆ ಯಾವ ಫಲವುಂಟಾಗುವುದು? ನಿಷ್ಕಾಮಿಗಳ ಮಾತು ನಮಗೆ ಬೇಡ ಅನೇಕ ಸಹಸ್ರ ಜನ್ಮಗಳಲ್ಲಿ ಮಾಡಿದ ಪುಣ್ಯಕರ್ಮಗಳಿಂದ ಸಕಲ ಪಾಪಗಳನ್ನೂ ಪರಿಹಾರಮಾಡಿಕೊಂಡು ದೇವರನ್ನು ನಿಷ್ಕಾಮರಾಗಿ ಪೂಜಿಸುವ ಅಂತಹ ಮಹನೀಯರೆಲ್ಲೋ ಸ್ವಲ್ಪನಾಗಿರುವರು ಅವರು ಅಕಾಮರಾಗಿಯೇ ದೇವತಾರ್ಚನಾಸಕ್ತರಾಗಿರುವರು

೩-೧೩ ಮಾರ್ಕಂಡೇಯನು ಹೇಳುತ್ತಾನೆ —ಮಾರ್ಗಶಿರ ಶುದ್ಧ ದ್ವಾದಶೀ ದಿನ ಉಪವಾಸವಿಂದಿದ್ದು ಕೇಶವನನ್ನು ವಿಷ್ಣು ಸಹಸ್ರನಾಮಗಳಿಂದ ಪೂಜಿಸಿದವನು, ಅಗ್ನಿಷ್ಟೋಮಯಾಗಮಾಡಿದ ಫಲವನ್ನು ಹೊಂದುತ್ತಾನೆ ಪುಷ್ಯಮಾಸದಲ್ಲಿ ಇದೇ

ನಾರಾಯಣಂ ತಥಾಽಭ್ಯರ್ಚ್ಯ ಪೌಷೇ ಮಾಸೇ ಜಗತ್ಪತಿಂ ।
ಅತ್ಯಗ್ನಿಷ್ಟೋಮಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೪ ॥

ಮಾಘೇ ಮಾಧವಮಭ್ಯರ್ಚ್ಯ ದ್ವಾದಶಾಬ್ದಫಲಂ ಲಭೇತ್ ।
ಗೋವಿಂದಂ ಫಾಲ್ಗುನೇ ಮಾಸಿ ಪೂಜಯಿತ್ವಾ ಮಹೀಧರ ॥ ೫ ॥

ಅತಿರಾತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯಸಂಶಯಂ ।
ಚೈತ್ರೇ ವಿಷ್ಣುಮಥಾಭ್ಯರ್ಚ್ಯ ವಾಜಪೇಯಫಲಂ ಲಭೇತ್ ॥ ೬ ॥

ದ್ವಾದಶ್ಯಾಂ ಮಾಸಿ ವೈಶಾಖೇ ಸಂಪೂಜ್ಯ ಮಧುಸೂದನಂ ।
ಗೋಸವಸ್ಯ ತು ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಂ ॥ ೭ ॥

ಜ್ಯೇಷ್ಠೇ ಮಾಸೇ ತಥಾಽಭ್ಯರ್ಚ್ಯ ದೇವದೇವಂ ತ್ರಿವಿಕ್ರಮಂ ।
ಪುಂಡರೀಕಸ್ಯ ಯಜ್ಞಸ್ಯ ಫಲಂ ವಿಂದತಿ ಮಾನವಃ ॥ ೮ ॥

ಆಷಾಢೇ ವಾಮನಂ ದೇವಂ ಪೂಜಯಿತ್ವಾ ಜಗತ್ಪತಿಂ ।
ಕ್ಷಿಪ್ರಮೇವ ಸಮಾಪ್ನೋತಿ ಯಜ್ಞಂ ಬಹುಸುವರ್ಣಕಂ ॥ ೯ ॥

ಶ್ರೀಧರಂ ಶ್ರಾವಣೇ ಮಾಸಿ ಪೂಜಯಿತ್ವಾ ಮಹೇಶ್ವರಂ ।
ವೈಷ್ಣವಸ್ಯ ತು ಯಜ್ಞಸ್ಯ ಫಲಂ ವಿಂದತ್ಯಸಂಶಯಂ ॥ ೧೦ ॥

ಮಾಸೇ ಭಾದ್ರಪದೇ ದೇವಂ ಹೃಷೀಕೇಶಂ ಸಮರ್ಚಯೇತ್ ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೧೧ ॥

---

ಮೇರೆ ನಾರಾಯಣನನ್ನು ಪೂಜಿಸಿದವನು ಅತ್ಯಗ್ನಿಷ್ಟೋಮದ ಫಲವನ್ನು ಹೊಂದುವನು ಮಾಘಮಾಸದಲ್ಲಿ ಮಾಧವನನ್ನು ಪೂಜಿಸಿದವನು, ದ್ವಾದಶಾಬ್ದಯಜ್ಞ ಫಲವನ್ನು ಪಡೆಯುವನು ಫಾಲ್ಗುಣದಲ್ಲಿ ಗೋವಿಂದನನ್ನು ಪೂಜಿಸಿದರೆ ಅತಿರಾತ್ರ ಯಜ್ಞಫಲವು ದೊರಕುವುದು ಚೈತ್ರಮಾಸದಲ್ಲಿ ವಿಷ್ಣುಪೂಜೆಮಾಡಿದವನು. ವಾಜಪೇಯ ಫಲವನ್ನು ಹೊಂದುವನು ವೈಶಾಖದಲ್ಲಿ ಮಧುಸೂದನನ ಪೂಜೆಯಿಂದ ಗೋಮೇಧಯಾಗ ಫಲವು ಸಿಕ್ಕುವುದು. ಜ್ಯೇಷ್ಠದಲ್ಲಿ ತ್ರಿವಿಕ್ರಮನ ಪೂಜೆಯಿಂದ ಪುಂಡರೀಕ ಯಜ್ಞಫಲ ಪ್ರಾಪ್ತಿಯಾಗುವುದು. ಆಷಾಢದಲ್ಲಿ ವಾಮನಮೂರ್ತಿಯಂ ಪೂಜಿಸಿದರೆ ಒಹು ಸುವರ್ಣ ಯಜ್ಞಫಲ ಪ್ರಾಪ್ತಿ. ಶ್ರಾವಣದಲ್ಲಿ ಶ್ರೀಧರ ಪೂಜೆ

ಆಶ್ವಿನೇ ಮಾಸಿ ಸಂಪ್ರಾಪ್ತೇ ಪದ್ಮನಾಭಂ ಸಮರ್ಚಯೇತ್ ।
ರಾಜಸೂಯಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೨ ॥

ದಾಮೋದರಮಥಾಭ್ಯರ್ಚ್ಯ ಕಾರ್ತಿಕೇ ಮಾಸಿ ಯಾದವ ।
ಸರ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೧೩ ॥

ಮಾಸೋಕ್ತೇನ ಸದಾ ನಾಮ್ನಾ ಶುಕ್ಲಪಕ್ಷೇ ಹ್ಯುಪೋಷಿತಃ ।
ದ್ವಾದಶೀಷು ಸದಾ ಕುರ್ಯಾಜ್ಜಪ್ಯಹೋಮಾನ್ಸಮಾಹಿತಃ ॥ ೧೪ ॥

ಸಂವತ್ಸರಾಂತೇ ದಾತವ್ಯಂ ಘೃತಪೂರ್ಣಂ ಚ ಭಾಜನಂ ।
ಕಾಂಸ್ಯಸ್ಯ ವೈನತೇಯಂ ಚ ರುಕ್ಮಪತ್ರನಿವೇಶಿತಂ ॥ ೧೫ ॥

ಕ್ರಮೋಪವಾಸತಸ್ತ್ವೇತೇ ಪ್ರೋಕ್ತಾ ಯಜ್ಞಫಲಾ ನೃಪ ।
ಪೂರ್ಣಂ ಸಂವತ್ಸರಂ ಕೃತ್ವಾ ವ್ರತಮೇತನ್ನರಾಧಿಪ ॥ ೧೬ ॥

ಸ್ವರ್ಗಲೋಕಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।
ದೇವರಾಮಾಗಣಸ್ಥೇನ ವೀಣಾಮುರಜನಾದಿನಾ ॥ ೧೭ ॥

ಹಂಸಸಾರಸಯುಕ್ತೇನ ವಿಮಾನೇನಾರ್ಕವರ್ಚಸಾ ।
ಕಿಂಕಿಣೀಶತಘೋಷೇಣ ವಿಹರತ್ಯಮರಪ್ರಭಃ ॥ ೧೮ ॥

---

ಯನ್ನು ಮಾಡಿದರೆ, ವೈಷ್ಣವ ಯಜ್ಞಫಲ, ಭಾದ್ರಪದದಲ್ಲಿ ಹೃಷೀಕೇಶ ಪೂಜೆಯಿಂದ ಅಶ್ವಮೇಧಫಲ, ಮತ್ತು ಕುಲವನ್ನು ಉದ್ಧರಿಸಿದ ಫಲ, ಆಶ್ವಯುಜಮಾಸದಲ್ಲಿ ಪದ್ಮನಾಭನ ಪೂಜೆಮಾಡಿದರೆ ರಾಜಸೂಯಯಾಗಮಾಡಿದ ಫಲ ಕಾರ್ತೀಕಮಾಸದಲ್ಲಿ ದಾಮೋದರ ಪೂಜೆಯು ಮಾಡಿದರೆ ಸಕಲ ಯಜ್ಞಮಾಡಿದ ಫಲವುಂಟಾಗುವುದು ಪ್ರತಿ ತಿಂಗಳಲ್ಲೂ ಶುದ್ಧ ದ್ವಾದಶೀ ಎಂದು ಆಧ್ಯಾಹಾರಮಾಡಿಕೊಳ್ಳಬೇಕು.

೧೪-೨೧. ಯಾವ ಯಾವ ತಿಂಗಳಲ್ಲಿ ದ್ವಾದಶೀ ದಿವಸ ಉಪವಾಸವಿದ್ದು ಹೇಗೆ ಹೇಗೆ ಪೂಜೆಮಾಡಬೇಕೋ ಅದನ್ನೆಲ್ಲಾ ಹೇಳಿಯಾಗಿದೆ ಇದೇ ಮೇರೆ, ಜಪ, ಹೋಮ ಪೂಜಾದಿಗಳನ್ನು ಮಾಡಿ ವರ್ಷಾಂತ್ಯದಲ್ಲಿ ತುಪ್ಪ ತುಂಬಿದ ಒಂದು ಕಂಚನ್ನೂ, ಚಿನ್ನದ ರೇಕುಗಳ ಒಂದು ಗರುಡನ ಪ್ರತಿಮೆಯನ್ನೂ ದಾನಮಾಡಬೇಕು ಕ್ರಮವಾಗಿ ಉಪವಾಸಮಾಡುತ್ತ ಬಂದವನು ಹೊಂದಬಹುದಾದ ಯಜ್ಞಫಲವನ್ನು ಮೇಲೆಯೇ ತಿಳಿಸಿದ್ದೇನೆ. ಈರೀತಿ ಒಂದು ವರ್ಷ ವ್ರತಮಾಡಿದವನು ಸ್ವರ್ಗಲೋಕವನ್ನು ಹೊಂದುವನಲ್ಲದೇ ತನ್ನ ಕುಲವನ್ನೂ ಸಹ ಉದ್ಧರಿಸುವನು

ಯಾವಜ್ಜೀವಂ ನರಃ ಕುರ್ಯಾದ್ವ್ರತಮೇತತ್ಸಮಾಹಿತಃ ।
ಶ್ವೇತದ್ವೀಪಮವಾಪ್ನೋತಿ ಯತ್ರ ಚಂದ್ರಪ್ರಭಾ ನರಾಃ ॥ ೧೯ ॥
ಚತುರ್ಭುಜಾ ಮಹಾಸತ್ತ್ವಾ ನಿತ್ಯತೃಪ್ತಾಃ ಸುಗಂಧಿನಃ ।
ಅನಿಷ್ಯಂದಾ ನಿರಾಹಾರಾಃ ಸರ್ವಜ್ಞಾಃ ಸರ್ವದರ್ಶಿನಃ ॥ ೨೦ ॥

ತತ್ರೋಷ್ಯ ಕಾಲಂ ಸುಚಿರಂ ನರೇಂದ್ರ
ಭಿತ್ವಾರ್ಕಬಿಂಬಂ ಸಹಸಾ ಪ್ರಯಾತಿ ।
ಸ್ಥಾನಂ ಪುರೋ ದೇವವರಸ್ಯ ವಿಷ್ಣೋ-
ರ್ನಿತ್ಯಸ್ಯ ತಸ್ಯಾಸಘ ಸರ್ವಗಮ್ಯ ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಶುಕ್ಲಪಕ್ಷ
ದ್ವಾದಶೀ ವಿಧಿರ್ನಾಮೈಕೋನಷಷ್ಟ್ಯಧಿಕ
ಶತತಮೋಽಧ್ಯಾಯಃ

ಅಂಥವನು ದೇವಕಾಂತಿಯನ್ನು ಹೊಂದಿ ಅಪ್ಸರಸ್ತ್ರೀಯರೊಡನೆ ಭೋಗಿಸುತ್ತಾ ಹಂಸ ಸಾರಸಗಳಿಂದ ಅಲಂಕೃತವಾದ ಸೂರ್ಯನಂತೆ ಪ್ರಕಾಶಿಸುವ ನೂರಾರು ಕಿರುಗಂಟೆಗಳಿಂದ ಸದ್ದುಮಾಡುತ್ತಲಿರುವ ವಿಮಾನದ ಮೇಲೆ ಕುಳಿತು ಸಂಚಾರಮಾಡುತ್ತಾನೆ. ಯಾವ ಮನುಷ್ಯನು ಜೀವಾವಧಿ ಈ ವ್ರತವನ್ನು ಮಾಡುತ್ತಾ ಬರುವನೋ ಅವನು ಚಂದ್ರನಂತೆ ಕಾಂತಿಯನ್ನು ಹೊಂದಿ ಶ್ವೇತದ್ವೀಪವನ್ನು ಪ್ರವೇಶಿಸುತ್ತಾನೆ. ಆ ಶ್ವೇತದ್ವೀಪದಲ್ಲಿರುವ ಜನರು ಚತುರ್ಭುಜವುಳ್ಳವರಾಗಿಯೂ, ಮಹಾಪರಾಕ್ರಮಶಾಲಿಗಳಾಗಿಯೂ ನಿತ್ಯ ತೃಪ್ತರಾಗಿಯೂ, ಸುಗಂಧದಿಂದೊಡಗೂಡಿದ ನಿಶ್ವಾಸವುಳ್ಳವರಾಗಿಯೂ, ರೆಪ್ಪೆ ಹುಯ್ಯದ ಇರುವವರಾಗಿಯೂ ನಿರಾಹಾರಿಗಳಾಗಿಯೂ, ಸರ್ವಜ್ಞರಾಗಿಯೂ, ಸಮದರ್ಶಿಗಳಾಗಿಯೂ ಇರುವರು ಈ ವ್ರತಮಾಡಿದ ಮಹಾತ್ಮನೂ ಸಹ ಇವರಂತೆಯೇ ಇದ್ದು ಅಲ್ಲಿ ಬಹುಕಾಲ ವಾಸಮಾಡಿ ಬಳಿಕ ಸೂರ್ಯಮಂಡಲವನ್ನು ಭೇದಿಸಿಕೊಂಡು ಮಹಾವಿಷ್ಣುವಿನ ಸ್ಥಾನವನ್ನು ಹೊಂದುವನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಶುಕ್ಲಪಕ್ಷ ದ್ವಾದಶೀವಿಧಿಯೆಂಬ
ಹೆಸರಿನ ಒಂದುನೂರ ಐವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು

ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ಷಷ್ಟ್ಯಧಿಕಶತತಮೋಽಧ್ಯಾಯಃ॥

॥ ವಜ್ರ ಉವಾಚ ॥

ಕೇವಲಂ ಕೃಷ್ಣಪಕ್ಷಸ್ಯ ದ್ವಾದಶೀಷು ಜನಾರ್ದನಂ ।
ಕದಾಪ್ರಭೃತಿ ಧರ್ಮಜ್ಞ ವಿಧಿನಾ ಕೇನ ಚಾರ್ಚಯೇತ್ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮಾರ್ಗ್ಯಾಂ ತು ಸಮತೀತಾಯಾಂ ದ್ವಾದಶೀ ಯಾ ಭವೇನ್ನೃಪ ।
ತತಃ ಪ್ರಭೃತಿ ಕರ್ತವ್ಯಂ ವ್ರತಮೇನಮುಪೋಷಿತಃ ॥ ೨ ॥
ದ್ವಾದಶೀಷು ಚ ಕೃಷ್ಣಾಸು ನಾಮ ಕೃಷ್ಣಸ್ಯ ಕೀರ್ತಯೇತ್ ।
ತೇನೈವ ನಾಮ್ನಾ ಕರ್ತವ್ಯೌ ಜಪಹೋಮೌ ತಥೈವ ಚ ॥ ೩ ॥
ತಿಲೈರ್ನಿವೇದನಂ ಕಾರ್ಯಂ ಹೋಮಃ ಕಾರ್ಯಸ್ತಥಾ ತಿಲೈಃ ।
ಪೌಷ್ಯಾಂ ತು ಸಮತೀತಾಯಾಂ ಕೃಷ್ಣಾ ಯಾ ದ್ವಾದಶೀ ಭವೇತ್ ॥ ೪ ॥

---

### ನೂರ ಅರವತ್ತನೆಯ ಅಧ್ಯಾಯವು.

೧ ವಜ್ರಮಹಾರಾಜನು ಹೇಳುತ್ತಾನೆ --ಎಲೈ ಮಾರ್ಕಂಡೇಯನೇ! ಕೃಷ್ಣಪಕ್ಷದ ದ್ವಾದಶಿಗಳಲ್ಲಿ ಯಾವ ವಿಧಿಯಿಂದ ಜನಾರ್ದನನ್ನು ಪೂಜಿಸಬೇಕು? ಯಾವ ತಿಂಗಳಿಂದಾರಂಭಿಸಬೇಕೋ ತಿಳಿಸು

೨-೩ ಮಾರ್ಕಂಡೇಯನು ಹೇಳುತ್ತಾನೆ --ಮಾರ್ಗಶೀರ್ಷ ಬಹುಳ ದ್ವಾದಶಿಯಿಂದ ಈ ಕೃಷ್ಣದ್ವಾದಶೀವ್ರತವನ್ನು ಆರಂಭಿಸಬೇಕು ದ್ವಾದಶಿಯು ದಿವಸ ಉಪವಾಸವಿದ್ದು ಭಗವನ್ನಾಮ ಸ್ಮರಣವನ್ನೇಮಾಡುತ್ತಲಿರಬೇಕು ಮತ್ತು ಅದೇ ನಾಮಗಳಿಂದ ಜಪ, ಹೋಮಗಳನ್ನೂ ಮಾಡಬೇಕು

೪-೯ ಎಳ್ಳುಂಡೆ ಚಿಗಳಿ ಮುಂತಾದುವನ್ನು ನಿವೇದನಮಾಡಬೇಕು ತಿಲ

ತಸ್ಯಾಂ ವ್ರತಾವಸಾನೇ ತು ತಿಲಾನ್ ದದ್ಯಾದ್ದ್ವಿಜಾತಿಷು ।
ಸುವರ್ಣಂ ಚ ಮಹೀಪಾಲ ರಕ್ತವಸ್ತ್ರಂ ತಥೈವ ಚ ॥ ೫ ॥

ಸಂವತ್ಸರಮಿದಂ ಕೃತ್ವಾ ವ್ರತಂ ಮನುಜಪುಂಗವ ।
ತಿರ್ಯಗ್ಯೋನಿಂ ನ ಚಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೬ ॥

ಯಾವಜ್ಜೀವಂ ವ್ರತಮಿದಂ ಯಃ ಕರೋತಿ ಸಮಾಹಿತಃ ।
ನ ಸ ದುಃಖಂ ಸಮಾಪ್ನೋತಿ ನರಕಂ ನ ನರಾಧಿಪ ॥ ೭ ॥

ಯತ್ರ ವೈತರಣೀ ದುರ್ಗಾ ಕ್ಷುರಧಾರಾಶ್ಚ ಪರ್ವತಾಃ ।
ಪಾಪಾನಾಂ ಯಾತನಾ ಯತ್ರ ತತ್ರಾಸೌ ನ ಗಮಿಷ್ಯತಿ ।

ಯಸ್ಯಾಂ ಗಣಾಃ ಭೀಮಬಲಾ ಮಹೋಗ್ರಾ
ದಂಷ್ಟ್ರಾಕರಾಲಾ ವಿಕಟೋಗ್ರವೇಷಾಃ ।

ದಿಂದಲೇ ಹೋಮವನ್ನು ಮಾಡಬೇಕು ಪುಷ್ಯ ಬಹುಳ ದ್ವಾದಶೀದಿವಸ ತಿಲಧಾನ್ಯ ದಾನಮಾಡಬೇಕು ಚಿನ್ನದ ಹಣ ವಸ್ತ್ರ ದಾನವನ್ನು ಸಹ ಮಾಡಬೇಕು ಈ ರೀತಿ ಒಂದು ವರ್ಷ ಮಾಡಿದರೆ ಹೀನ ಜಾತಿಯಲ್ಲಿ ಖಂಡಿತವಾಗಿ ಹುಟ್ಟುವುದಿಲ್ಲ ಜೀವಾವಧಿ ಈ ವ್ರತವನ್ನು ಮಾಡುವವನು ಸಕಲ ದುಃಖದಿಂದಲೂ, ಬಿಡುಗಡೆ ಹೊಂದುತ್ತಾನೆ ಅಂಥವನಿಗೆ ನರಕ ದರ್ಶನವಿಲ್ಲವೇಇಲ್ಲ ವೈತರಣೀ ನದಿಯನ್ನು ಅವನು ದಾಟಬೇಕಾಗಿಲ್ಲ ಕತ್ತಿಯ ಅಲಗಿನಂತೆ ದಾರಿಯುಳ್ಳ ಬಟ್ಟೆಗಳ ಮೇಲೆ ಅವನು ನಡೆಯಬೇಕಾಗಿಲ್ಲ ಪಾಪಿಗಳು ಎಲ್ಲಿ ಯಾತನೆಯನ್ನು ಅನುಭವಿಸುತ್ತಿರುವರೋ ಆ ಸ್ಥಳಕ್ಕೆ ಅವನು ಹೋಗುವುದಿಲ್ಲ ಪಾಪಮಾಡಿದ ಜನರಿಗೆ ಕ್ರೂರ ಶಿಕ್ಷೆಯನ್ನುಂಟುಮಾಡುತ್ತಲಿರುವ ಭಯಂಕರಾಕಾರರಾದ ಯಮದೂತರು ಅವನ ಎದುರಿಗೆ ಬರುವುದೇ ಇಲ್ಲ ಮುಖ್ಯವಾದ ವಿಷಯವೇನೆಂದರ —ಪಾಪಿಗಳು ಸಂಚರಿ

ವಿದ್ರಾವಣಾಃ ಪಾಪಕೃತಾಂ ನರಾಣಾಂ
ನ ಯೇನ ತಸ್ಯಾ ನೃಪ ಯಾಂತಿ ಮಾರ್ಗಂ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಪ್ರತಿಕೃಷ್ಣಪಕ್ಷ
ದ್ವಾದಶೀ ವಿಧಿರ್ನಾಮ ಷಷ್ಟ್ಯಧಿಕ
ಶತತಮೋಽಧ್ಯಾಯಃ.

— —

ಸುವ ಮಾರ್ಗವನ್ನು ಅವನು ಖಂಡಿತವಾಗಿಯೂ ಹೊಂದುವುದಿಲ್ಲ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಪ್ರತಿಕೃಷ್ಣಪಕ್ಷ ದ್ವಾದಶೀವಿಧಿ
ಎಂಬ ಹೆಸರಿನ ಒಂದುನೂರ ಅರವತ್ತನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕಷಷ್ಟ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಉಪವಾಸಾಸಮರ್ಥಾನಾಂ ಶುಕ್ಲಪಕ್ಷೇ ದ್ವಿಜೋತ್ತಮ ।
ಏಕಾ ಯಾ ದ್ವಾದಶೀ ಪುಣ್ಯಾ ತಾಂ ವದಸ್ವಮಮಾನಘ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮಾಸಿ ಭಾದ್ರಪದೇ ಶುಕ್ಲಾ ದ್ವಾದಶೀ ಶ್ರವಣಾನ್ವಿತಾ ।
ಮಹತೀ ದ್ವಾದಶೀ ಜ್ಞೇಯಾ ಉಪವಾಸೇ ಮಹಾಫಲಾ ॥ ೨ ॥
ಸಂಗಮೇ ಸರಿತೋಃ ಪುಣ್ಯೇ ದ್ವಾದಶೀಂ ತಾಮುಪೋಷಿತಃ ।
ಅಯತ್ನಾದೇವಪ್ರಾಪ್ನೋತಿ ದ್ವಾದಶದ್ವಾದಶೀಫಲಂ ॥ ೩ ॥

### ನೂರ ಅರವತ್ತೊಂದನೆಯ ಅಧ್ಯಾಯವು.

೧ ವಜ್ರರಾಜನು ಪುನಃ ಪ್ರಶ್ನೆಮಾಡುತ್ತಾನೆ —ಪ್ರತಿ ಶುಕ್ಲಪಕ್ಷ ದ್ವಾದಶಿಯಲ್ಲಿಯೂ ಉಪವಾಸಮಾಡಲು ಶಕ್ತಿಯಿಲ್ಲದವರು ಯಾವುದಾದರೂ ಒಂದು ದ್ವಾದಶೀದಿನ ಉಪವಾಸಮಾಡಿದರೆ ಸಾಲದೆ? ಅಂತಹ ಒಂದೇ ಒಂದು ದ್ವಾದಶಿಯಿದ್ದರೆ ಅದರ ಮಹಿಮೆಯನ್ನು ತಿಳಿಸಬೇಕು

೨ ಮಾರ್ಕಂಡೇಯನು ಹೇಳುತ್ತಾನೆ —ಶ್ರವಣ ನಕ್ಷತ್ರದಿಂದ ಕೂಡಿದ ಭಾದ್ರಪದ ಶುದ್ಧ ದ್ವಾದಶಿಗೆ ಶ್ರವಣ ದ್ವಾದಶಿಯೆಂದು ಹೆಸರು ಅದಕ್ಕೆ ಮಹಾದ್ವಾದಶೀಯೆಂದು ಹೆಸರುಂಟು, ಆದಿನ ಉಪವಾಸಮಾಡಿದರೆ ಮಹಾಫಲವನ್ನು ಕೊಡುತ್ತದೆ

೩ ಆ ಶ್ರವಣದ್ವಾದಶೀ ದಿವಸ ಪುಣ್ಯಕರವಾದ ನದೀಸಂಗಮದಲ್ಲಿ ಸ್ನಾನ ಮಾಡಿ ಉಪವಾಸವಿದ್ದರೆ ಯಾವ ಪ್ರಯತ್ನವೂ ಇಲ್ಲದೆ ಹನ್ನೆರಡು ದ್ವಾದಶಿಗಳಲ್ಲೂ ಉಪವಾಸವಾಗಿದ್ದ ಫಲವನ್ನು ಹೊಂದುತ್ತಾನೆ

**ಬುಧಶ್ರವಣಸಂಯುಕ್ತಾ ಸೈವ ಚೇದ್ದ್ವಾದಶೀಭವೇತ್ ।**
**ಅತ್ಯಂತಮಹತೀ ಯಸ್ಯಾಂ ಸರ್ವಂ ಕೃತಮಥಾಕ್ಷಯಂ ॥ ೪ ॥**

**ದ್ವಾದಶೀ ಶ್ರವಣೋಪೇತಾ ಯದಾ ಭವತಿ ಪಾರ್ಥಿವ ।**
**ಸಂಗಮೇ ತು ತದಾ ಸ್ನಾತ್ವಾ ಸತ್ತೀರ್ಥಸ್ನಾನಜಂ ಫಲಂ ॥ ೫ ॥**
**ಸೋಪವಾಸಃ ಸಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।**
**ವಾರಿಧಾನೀಂ ತದಾ ದತ್ವಾ ಜಲಪೂರ್ಣಾಂ ದ್ವಿಜಾತಯೇ ॥ ೬ ॥**
**ಛನ್ನಾಂ ವಸ್ತ್ರಯುತಾಂ ರಾಜಂಛತ್ರೋಪಾನಹಸಂಯುತಾಂ ।**
**ಸ್ವರ್ಗಲೋಕಮವಾಪ್ನೋತಿ ಕುಲಮುದ್ಧರತಿ ಸ್ವಕಂ ॥ ೭ ॥**

**ಸ್ವರ್ಗಂ ಸಮಾಸಾದ್ಯ ಚಿರಂ ಚ ಭೋಗಾ-**
**ನ್ಭುಕ್ತ್ವಾ ಮಹೇಂದ್ರೋಪಮದೇವತುಲ್ಯಾನ್ ।**
**ಮಾನುಷ್ಯಮಾಸಾದ್ಯ ಭವತ್ಯರೋಗೋ**
**ಧನಾನ್ವಿತೋ ಧರ್ಮಪರೋ ಮನಸ್ವೀ ॥ ೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ**
**ಮಾರ್ಕಂಡೇಯ ವಜ್ರಸಂವಾದೇ ಶ್ರಾವಣೀದ್ವಾದಶೀ**
**ಪ್ರಶಂಸಾವರ್ಣನಂ ನಾಮೈಕಷಷ್ಟ್ಯಧಿಕ**
**ಶತತಮೋಽಧ್ಯಾಯಃ.**

---

೪ ಅದೇ ದ್ವಾದಶಿಯು ಬುಧವಾರ ಶ್ರವಣನಕ್ಷತ್ರ ಯೋಗದಿಂದ ಕೂಡಿದ ರಂತೂ ಮಹತ್ತರವಾದ ಪುಣ್ಯವುಂಟಾಗುವುದು

೫-೮ ಈರೀತಿ ಶ್ರವಣದ್ವಾದಶೀ ದಿವಸ ಸಂಗಮಸ್ನಾನಮಾಡಿದರೆ ತೀರ್ಥ ಸ್ನಾನಮಾಡಿದ ಫಲವುಂಟಾಗುವುದು ಉಪವಾಸಮಾಡಿ ಉದಕಕುಂಭದಾನ, ವಸ್ತ್ರ, ಛತ್ರ, ಪಾದರಕ್ಷಗಳನ್ನು ದಾನಮಾಡಿದರ ತಾನೂ ಸ್ವರ್ಗಲೋಕವನ್ನು ಹೊಂದುವ ನಲ್ಲದ ಕುಲವನ್ನೂ ಉದ್ಧರಿಸುವನು. ಆರೀತಿ ಸ್ವರ್ಗಕ್ಕೆ ಹೋಗಿ ಇಂದ್ರ ಸಮ ನಾದ ಭೋಗಗಳನ್ನೂ ಪಡಯುವನಲ್ಲದೆ ಪುನಃ ಮನುಷ್ಯನಾಗಿ ಹುಟ್ಟಿ ಐಶ್ವರ್ಯ ವಂತನಾಗಿಯೂ, ಧರ್ಮಾತ್ಮನಾಗಿಯೂ ಆರೋಗ್ಯಶಾಲಿಯಾಗಿಯೂ ಆಗಿ ಸುಖ ಪಡುತ್ತಾನೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಶ್ರವಣದ್ವಾದಶೀ ಪ್ರಶಂಸಾವರ್ಣನೆ
ಎಂಬ ಒಂದುನೂರ ಅರವತ್ತೊಂದನೆಯ
ಅಧ್ಯಾಯವು ಮುಗಿದುದು.

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಮಹತ್ಯರಣ್ಯೇ ಯದ್ವೃತ್ತಂ ಭೂಮಿಪಾಲ ಪುರಾತನಂ ॥ ೧ ॥

ದೇಶಾ ದಾಶೇರಕಾ ನಾಮ ತೇಷಾಂ ಭಾಗೇ ತು ಪಶ್ಚಿಮೇ ।
ಅಸ್ತಿ ರಾಜನ್ಮರುರ್ದೇಶಃ ಸರ್ವಸತ್ತ್ವಭಯಂಕರಃ ॥ ೨ ॥

ಸುತಪ್ತಸಿಕತಾ ಭೂಮಿರ್ಯತ್ರ ದುಷ್ಟಮಹೋರಗಾ ।
ಸ್ವಲ್ಪಚ್ಛಾಯಾಸಮಾಕೀರ್ಣಾ ಮೃತಪ್ರಾಣಿಸಮಾಕುಲಾ ॥ ೩ ॥

ಶಮೀಖದಿರಪುಲ್ಲಾಸಕರೀರಾಃ ಪೈಲುಭಿಃ ಸಹ ।
ತತ್ರ ಭೀಮಾ ದ್ರುಮಗಣಾಃ ಕಂಟಕೈರಾವೃತಾಃ ಸಮಂ ॥ ೪ ॥

### ನೂರ ಅರವತ್ತೆರಡನೆಯ ಅಧ್ಯಾಯವು

೧ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರಮಹಾರಾಜನೇ ಕೇಳು. ಈ ಶ್ರವಣ ದ್ವಾದಶೀ ಉಪವಾಸ ವಿಷಯದಲ್ಲಿ ಪುರಾತನ ಕಾಲದಿಂದಲೂ ಒಂದು ಇತಿಹಾಸವನ್ನು ಪೂರ್ವಿಕರು ಹೇಳುತ್ತಲಿರುವರು. ಈ ಕಥೆಯು ಬಹು ಹಿಂದಿನ ಕಾಲದಲ್ಲಿ ಭಯಂಕರವಾದೊಂದು ಅರಣ್ಯದಲ್ಲಿ ನಡೆದ ವೃತ್ತಾಂತವಾಗಿದೆ

೨-೧೨. ದಾಶೇರಕವೆಂಬ ಒಂದು ದೇಶವಿದೆ. ಆ ದೇಶದ ಪಶ್ಚಿಮಭಾಗದಲ್ಲಿ ಒಂದು ಮರುಭೂಮಿ ಇದೆ ಅದು ಬಹು ಭಯಂಕರವಾದುದು ಅಲ್ಲಿನ ಮರ

ಚಂಡಪ್ರಾಣಿಗಣಾಕೀರ್ಣಾ ತತ್ರ ಭೂಮಿಸ್ತಥಾ ಕ್ವಚಿತ್ ।
ಅತ್ಯಂತತಾಪಾ ಘನಾ ನಿಸ್ತೃಣಾ ಪರುಷೋಪಲಾ ॥ ೫ ॥

ನಾಸ್ತ್ಯಮ್ಬು ತತ್ರ ಸಾಹಾರೋ ಜ್ವಲಿತಾಗ್ನಿಸಮೋ ಭೃಶಂ ।
ತಥಾಪಿ ತತ್ರ ಜೀವಂತಿ ಜನಾಃ ಕರ್ಮನಿಬಂಧನಾತ್ ॥ ೬ ॥

ನೋದಕಂ ನೋಪವಕೇಧರಾ ರಾಜಂಸ್ತತ್ರ ಬಲಾಹಕಾಃ ।
ಕದಾಚಿದಪಿ ದೃಶ್ಯಂತೇ ದೇಶೇ ನಿರಯಸನ್ನಿಭೇ ॥ ೭ ॥

ತತ್ರ ವಕ್ಷಾಂತರಗತೈಸ್ತೃಷಿತೈಃ ಶಿಶುಭಿಃ ಸಹ ।
ಉತ್ಕ್ರಾಂತಜೀವಿತಾ ರಾಜನ್ದೃಶ್ಯಂತೇಽಗ್ರೇ ವಿಹಂಗಮಾಃ ॥ ೮ ॥

ಉತ್ಪ್ಲುತ್ಯೋತ್ಪ್ಲುತ್ಯ ಸಹಸಾ ಮೃಗಾಃ ಸೈಕತಸಾಲಯಾತ್ ।
ಸೈಕತೇಷ್ವೇವ ನಶ್ಯಂತಿ ಜಲೇ ಸೈಕತಸೇತುವತ್ ॥ ೯ ॥

ತಸ್ಮಿಂಸ್ತಥಾವಿಧೇ ದೇಶೇ ಕಶ್ಚಿದ್ದೈವವಶಾದ್ವಣಿಕ್ ।
ವನಜಾತಪವಿಭ್ರಷ್ಟಃ ಪ್ರವಿಷ್ಟಸ್ತು ಪರಿಭ್ರಮನ್ ॥ ೧೦ ॥

---

ಜ್ಞವು, ಯಾವಾಗಲೂ ಕಾದು ಬಿಸಿಬಿಸಿ ಮರ-ಳಿನಿಂದ ತುಂಬಿದ ಅಲ್ಲಿ ಕೆಟ್ಟ ಹಾವುಗಳು ವಾಸವಾಗಿವೆ ನೆರಳಂತೂ ಅಲ್ಲಿ ಇಲ್ಲವೇ ಇಲ್ಲವೆನ್ನಬೇಕು ಇದ್ದರೂ ಎಲ್ಲೋ ಅಲ್ಪ ಸ್ವಲ್ಪ ಮಾತ್ರವಿದ ಅಲ್ಲಿನ ಪ್ರಾಣಿಗಳು ಬದುಕಿದ್ದರೂ ಸತ್ತಂತೆಯೇ ಇರುತ್ತವೆ ಕೆಲವು ಕಡೆ ಆ ಕಾಡಿನಲ್ಲಿ ಕಗ್ಗಲಿ, ಗೊಬ್ಬಳಿ, ಎಕ್ಕ, ಮುಂತಾದ ಮುಳ್ಳು ಮರಗಳೇ ಹೆಚ್ಚಾಗಿ ಬೆಳೆದಿವೆ. ಅಲ್ಲಿರುವ ಪ್ರಾಣಿಗಳಂತೂ ನೋಡುವುದಕ್ಕೆ ಬಹು ಭಯಂಕರವಾಗಿವೆ. ಅಲ್ಲಿ ಹುಲ್ಲು ಬೆಳೆಯುವುದಿಲ್ಲ ಒರಟು ಕಲ್ಲುಗಳು ಮಾತ್ರ ಇವೆ ಅಲ್ಲಿ ಆಹಾರ ಪದಾರ್ಥ ಸಿಗುವುದಿಲ್ಲ ಏನೊಂದಾಗ್ರಯವೂ ಅಲ್ಲಿಲ್ಲ ಯಾವಾಗಲೂ ಆ ಕಾಡು ಬೆಂಕಿ ಉರಿಯುವಂತ ಇರುತ್ತದೆ ಇಷ್ಟು ಸಂಕಟ ಪ್ರದೇಶವಾದರೂ ಪ್ರಾಣಿಗಳು ತಮ್ಮ ತಮ್ಮ ದುಷ್ಕೃತ್ಯಗಳಿಗೆ ತಕ್ಕಂತೆ ಕರ್ಮಪಾಶಬದ್ಧವಾಗಿ ಕರ್ಮಾನುಸಾರ ಅಲ್ಲಿ ಜೀವಿಸುತ್ತಲಿವೆ ಅಲ್ಲಿ ನೀರಿಲ್ಲ ನೀರನ್ನು ವರ್ಷಿಸುವ ಮೋಡಗಳ ಸುಳಿವೇ ಇಲ್ಲ ನರಕಸದೃಶವಾದ ಆ ಪ್ರದೇಶದಲ್ಲಿ ಬಾಯಾರಿದ ಹಕ್ಕಿಗಳು ತಮ್ಮ ಮರಿಗಳ ಜತೆಯಲ್ಲಿ ಪ್ರಾಣಬಿಡುವ ರೀತಿಯಲ್ಲಿ ತಲ್ಲಣಿಸುತ್ತಿರುತ್ತವೆ ಈ

ಸ ತತ್ರ ದದೃಶೇ ಪ್ರೇತಾನ್ ಕ್ಷುತ್ತೃಷ್ಣಾವ್ಯಾಕುಲೇಂದ್ರಿಯಾನ್ ।
ಉತ್ಕಚಾನ್ಮಲಿನಾನ್ರೂಕ್ಷಾನ್ನಿರ್ಮಾಂಸಾನ್ಭೀಮದರ್ಶನಾನ್ ॥ ೧೧ ॥

ಸ್ನಾಯುಬದ್ಧಸ್ಥಿರಾಕಾಯಾನ್ ಧಾವಮಾನಾನಿತಸ್ತತಃ ।
ಕಂಚಿತ್ಸಮಾಂಸಂ ತತ್ರೈಕಂ ಪ್ರೇತಸ್ಕಂಧಗತಂ ತದಾ ॥ ೧೨ ॥

ದದರ್ಶ ಬಹುಭಿಃ ಪ್ರೇತೈಃ ಸಮಂತಾತ್ಪರಿವಾರಿತಂ ।
ತತ್ಸ್ಕಂಧಾದಪರಂ ಸ್ಕಂಧಂ ನೀಯಮಾನಂ ಕ್ರಮಾತ್ಕ್ರಮಾತ್ ॥ ೧೩ ॥

ಪ್ರೇತೋಽಪಿ ದೃಷ್ಟ್ವಾ ತಾಂ ಘೋರಾಮಟವೀಂ ನರಮಾಗಗಂ ।
ಪ್ರೇತಸ್ಕಂಧಾನ್ಮಹೀಂ ಗತ್ವಾ ತಸ್ಯಾಂತಿಕಮುಪಾಗಮತ್ ॥ ೧೪ ॥

ಸೋಽಭಿವಾದ್ಯ ವಣಿಕ್ಶ್ರೇಷ್ಠಮಿದಂ ವಚನಮಬ್ರವೀತ್ ।
ಅಸ್ಮಿನ್ಘೋರೇ ಮಹಾರಣ್ಯೇ ಪ್ರವೇಶೋ ಭವತಃ ಕಥಂ ॥ ೧೫ ॥

ತಮುವಾಚ ವಣಿಗ್ಧೀಮಾನ್ಸಾರ್ಥಭ್ರಷ್ಟಸ್ಯ ಮೇ ವನೇ ।
ಪ್ರವೇಶೋ ದೈವಯೋಗೇನ ಪೂರ್ವಕರ್ಮಕೃತೇನ ತು ॥ ೧೬ ॥

---

ಹಕ್ಕಿಗಳನ್ನು ನೋಡುವುದಕ್ಕಾಗುವುದಿಲ್ಲ ಆ ಪ್ರದೇಶದಲ್ಲಿ ಪ್ರಾಣಿಗಳು ಪ್ರತಿಕ್ಷಣವೂ ಕಾದ ಮರಳಲ್ಲಿ ಹೊರಳಿ ಹೊರಳಿ ಆ ಮರಳಿನಲ್ಲಿಯೇ ಬಿದ್ದು, ಸತ್ತು ರಾಶಿರಾಶಿಯಾಗಿ ಬಿದ್ದಿರುವುದನ್ನು ನೋಡಿದರೆ ಬಿಸಿಲ್ಗುದುರೆಯೆಂಬ ಜಲಪ್ರವಾಹದ ಮೇಲೆ ಸೇತುವೆ ಯನ್ನು ಕಟ್ಟಿದಂತೆ ಕಾಣುತ್ತಿರುತ್ತದೆ ಇಂತಹ ಪ್ರದೇಶಕ್ಕೆ ಒಂದು ದಿನ ಒಬ್ಬ ವರ್ತಕನು ದಾರಿತಪ್ಪಿ ಬಂದು ಆ ಮರಳಲ್ಲಿ ಸಿಕ್ಕಿಕೊಂಡು ಬಿಟ್ಟನು ಅಲ್ಲಿ ಅವನು ಅನೇಕ ಪ್ರೇತ (ಹಣಗಳಂತಿರುವ ಮನುಷ್ಯ ಅಥವಾ ಪಿಶಾಚಿ) ಗಳನ್ನು ನೋಡಿದನು ಅವುಗಳು ಹಸಿವು ಬಾಯಾರಿಕೆಗಳಿಂದ ಕಂಗೆಟ್ಟುಸಂಕಟ ಪಡುತಿದ್ದವು ಅವುಗಳ ಮೈಬಲು ಕೊಳಕು ದೇಹದಲ್ಲಿ ರಕ್ತ,ಮಾಂಸವಿಲ್ಲ ನೋಡಲಿಕ್ಕೆ ಬಹು ಹೆದರಿಕೆ ಯಾಗುವಂತಿತ್ತು ಮೂಳೆಚಕ್ಕಳಗಳಿಂದ ಕಟ್ಟಿದಬೊಂಬೆಗಳಂತೆ ಅವು ಕಾಣುತ್ತಿದ್ದವು ಆ ಪಿಶಾಚಿಗಳು ಇಲ್ಲಿಂದಲ್ಲಿಗ, ಅಲ್ಲಿಂದಿಲ್ಲಿಗೆ ಸುಮ್ಮನೆ ಓಡಾಡುತ್ತಿದ್ದವು ಆದರೆ ಒಂದು ಪಿಶಾಚಿಯ ಹೆಗಲಮೇಲೆ ಒಬ್ಬ ಪುಷ್ಟನಾದ ಮನುಷ್ಯನು ಕೂತಿದ್ದುದನ್ನು ನೋಡಿದನು ಆ ಪಿಶಾಚಿಯು ಆ ಮನುಷ್ಯನನ್ನು ಹೊತ್ತುಕೊಂಡು ಅಲೆಯು ತ್ತಿತ್ತು ಆರೀತಿ ಹೆಗಲಮೇಲೆ ಮನುಷ್ಯನನ್ನು ಹೊತ್ತಿದ್ದ ಆ ಪಿಶಾಚಿಯು ಸುತ್ತಲೂ

ತೃಷ್ಣಾ ಮೇ ಬಾಧತೇಽತ್ಯರ್ಥಂ ಕ್ಷುತ್ತ್ವಾಮುಶ್ಚ ಭೃಶಂ ತಥಾ ।
ಪ್ರಾಣಾಃ ಕಂಠಮನುಪ್ರಾಪ್ತಾ ವದನಂ ಭ್ರಶ್ಯತೇ ಚ ಮೇ ॥ ೧೭ ॥

ಅತ್ರೋಽಪಾಯಂ ನ ಪಶ್ಯಾಮಿ ಧ್ರಿಯೇಽಹಂ ಯೇನ ಕೇನಚಿತ್ ।
ಇತ್ಯೇವಮುಕ್ತಃ ಪ್ರೇತಸ್ತು ವಣಿಜಂ ವಾಕ್ಯಮಬ್ರವೀತ್ ॥ ೧೮ ॥

ಪುನ್ನಾಗಮಿಮಮಾಶ್ರಿತ್ಯ ಪ್ರತೀಕ್ಷಸ್ವ ಕ್ಷಣಂ ಮಮ ।
ಕೃತಾತಿಥ್ಯೋ ಮಯಾ ಯಾವದ್ಗಮಿಷ್ಯಸಿ ಯಥಾಸುಖಂ ॥ ೧೯ ॥

ಏವಮುಕ್ತಸ್ತದಾ ಚಕ್ರೇ ಸ ವಣಿಕ್ತೃಷ್ಣಯಾಽನ್ವಿತಃ ।
ಮಧ್ಯಾಹ್ನಸಮಯೇ ಪ್ರಾಪ್ತೇ ಪ್ರೇತಸ್ತಂ ದೇಶಮಾಗಮತ್ ॥ ೨೦ ॥

ಪುನ್ನಾಗವೃಕ್ಷಾಚ್ಛೀತೋದಾಂ ವಾರಿಧಾನೀಂ ಮನೋರಮಾಂ ।
ದಧ್ಯೋದನಸಯುಕ್ತೇನ ವರ್ಧಮಾನೇನ ಸಂಯುತಾಂ ॥ ೨೧ ॥

ಅವತಾರ್ಯ ತತಸ್ತ್ವಗ್ರಂ ಪ್ರದದಾತಿ ಚ ಯತ್ನವಾ ।
ತತೋಽಗ್ರಮಾತ್ರೇಣ ವಣಿಕ್ಪರಾಂ ತೃಪ್ತಿಮುಪಾಗತಃ ॥ ೨೨ ॥

---

ಲಿಕ್ಕನಿಲ್ಲವಷ್ಟು ಪಿಶಾಚಿಗಳು ಮುತ್ತಿಕೊಂಡು ಓಡಾಡುತ್ತಲಿದ್ದುವು ಮತ್ತು ಆ ಪಿಶಾಚಿಗಳು ಆ ಮನುಷ್ಯನನ್ನು ಒಂದರ ಹೆಗಲಿನಿಂದೊಂದು ಕ್ರಮವಾಗಿ ತೆಗೆದು (ಕಿತ್ತು) ಕೊಂಡು, ತಮ್ಮ ತಮ್ಮ ಹೆಗಲಿನ ಮೇಲೆ ಹೊತ್ತುಕೊಂಡು ದಾರಿ ಸಾಗಿಸುತ್ತಿದ್ದುವು. ಈ ರೀತಿ ಪಿಶಾಚಿಗಳ ಹೆಗಲೇರಿ ಏರಿ ಹೋಗುತ್ತಿದ್ದ ಆ ಹೊಟ್ಟೆ ತುಂಬಿ, ದುಂಡಾಗಿ ಬೆಳೆದಿದ್ದ ಆ ಪಿಶಾಚವು ದಾರಿಯಲ್ಲಿ ಬರುತ್ತಿದ್ದ ಈ ವರ್ತಕನನ್ನು ನೋಡಿ ಪಿಶಾಚಿಗಳ ಹೆಗಲಿನಿಂದ ಕೆಳಕ್ಕಿಳಿದು ಆ ವರ್ತಕನ ಹತ್ತಿರಕ್ಕೆ ಬಂದಿತು. ಈರೀತಿ ಬಂದ ಹೊಟ್ಟೆ ತುಂಬಿದ ಆ ಪಿಶಾಚವು ವರ್ತಕನಿಗೆ ನಮಸ್ಕರಿಸಿ ಹೇಳಿದುದೇನೆಂದರೆ ಎಲೈ ಮನುಷ್ಯನೇ, ಈ ಘೋರಾರಣ್ಯಕ್ಕೆ ನಿನ್ನಂತಹ ಸುಖ ಪುರುಷನಾದವನು ಹೇಗಯ್ಯಾ ಬಂದೆ? ಎಂದು ಕೇಳಲು ಆ ವರ್ತಕನು ಈರೀತಿ ಹೇಳಿದನು — ಅಯ್ಯಾ, ನಾನು ವ್ಯಾಪಾರಮಾಡಿ ಅದರಲ್ಲಿ ಬಹಳ ಹಣವನ್ನು ಕಳೆದುಕೊಂಡೆನು. ದೈವಯೋಗದಿಂದಲೂ ಜನ್ಮಾಂತರದಲ್ಲಿ ಮಾಡಿದ ದುಷ್ಕರ್ಮದೋಷದಿಂದಲೂ ಹೇಗೋ ದಾರಿತಪ್ಪಿ ಇಲ್ಲಿಗೆ ಬಂದು ಸಿಕ್ಕಿಕೊಂಡಿದ್ದೇನೆ ನನಗೆ ಹಸಿವು ಬಾಯಾರಿಕೆಗಳಿಂದ ಪ್ರಾಣಹೋಗುತ್ತಲಿದೆ. ನನ್ನ ಮುಖವು ಬಾಡುತ್ತಲಿದೆ ನಾಲಿಗೆಯು

ವಿತೃಷ್ಣೋ ವಿಜ್ವರಶ್ಚೈವಂ ಕ್ಷಣೇನ ಸಮಪದ್ಯತ ।
ತತಃ ಪ್ರೇತೇಷು ಸರ್ವೇಷು ಕ್ರಮಾದ್ಭಾಗಂ ತದಾ ದದೌ ॥ ೨೩ ॥

ದಧ್ಯೋದನಾತ್ಸಪಾನೀಯಾತ್ತೇಽಪಿ ತೃಪ್ತಿಂ ಪರಾಂ ಯಯುಃ ।
ಅಥ ಸಂತರ್ಪಯಿತ್ವಾ ತು ಪ್ರೇತಾಂಸ್ತಾನ್ಸ ತು ಸರ್ವಶಃ ॥ ೨೪ ॥

ಪ್ರೇತಾಧಿಪಃ ಸ ಬುಭುಜೇ ಪಶ್ಚಾದನ್ನಂ ಯಥಾಸುಖಂ ।
ತಸ್ಯ ಭುಕ್ತವತಸ್ತ್ವನ್ನಂ ಪಾನೀಯಂ ಚ ಕ್ಷಯಂ ಯಯೌ ॥ ೨೫ ॥

ಪ್ರೇತಾಧಿಪಂ ತತಸ್ತೃಪ್ತಂ ವಣಿಗ್ವಚನಮಬ್ರವೀತ್ ।
ಆಶ್ಚರ್ಯಮೇತತ್ಪರಮಂ ವನೇಽಸ್ಮಿನ್ಪ್ರತಿಭಾತಿ ಮೇ ॥ ೨೬ ॥

ಅನ್ನಪಾನಸ್ಯ ಸಂಪ್ರಾಪ್ತಿಃ ಪರಮಸ್ಯ ಕುತಸ್ತವ ।
ಸ್ತೋಕೇನ ಚ ತಥಾನ್ನೇನ ಬಿಭರ್ಷಿ ಚ ಬಹೂನ್ಕಥಂ ॥ ೨೭ ॥

ತೃಪ್ತಾ ಅಪಿ ಕಥಂ ಸರ್ವೇ ನಿರ್ಮಾಂಸಾ ಭಿನ್ನಕುಕ್ಷಯಃ ।
ಕಶ್ಚಿತ್ತ್ವಮಸ್ಯಾಂ ಘೋರಯಾಮಟವ್ಯಾಂ ತು ಕೃತಾಲಯಃ ॥ ೨೮ ॥

ಬಣಗುತ್ತಲಿದೆ ಇದಕ್ಕೆ ನಾನು ಈ ಭಯಂಕರ ಕಾಡಿನಲ್ಲಿ ಯಾವ ಉಪಾಯವನ್ನೂ ಕಾಣದೆ ದುಃಖಪಡುತ್ತಲಿದ್ದೇನೆ ಹೀಗೆಂದು ವರ್ತಕನು ತನ್ನ ವೃತ್ತಾಂತವನ್ನು ಹೇಳಲು ಆ ಪಿಶಾಚವು ವರ್ತಕನೊಡನೆ ಮುಂದೆ ಹೇಳುವಂತೆ ಹೀಗೆ ಹೇಳಿತು.

೧೯-೪೫ ಅಯ್ಯಾ ವರ್ತಕನೇ! ಇಲ್ಲಿ ಕಾಣುವ ಪುನ್ನಾಗವೃಕ್ಷದ ಕೆಳಗೆ ನೀನು ಕುಳಿತುಕೊಂಡು ವಿಶ್ರಮಿಸಿಕೊಳ್ಳುತ್ತಾ, ನನ್ನ ಆಗಮನವನ್ನು ನೋಡುತ್ತಲಿರು ನಾನು ಕೂಡಲೇ ಬಂದು ನಿನಗೆ ಆತಿಥ್ಯಮಾಡಿಸಿ ಕಳುಹಿಸಿಕೊಡುವೆನು. ಊಟಮಾಡಿದ ಬಳಿಕ ನಿನ್ನ ಮನಸ್ಸಿಗೆ ಬಂದಂತೆ ಹೋಗುವಿಯಂತೆ ಹೀಗೆಂದು ಹೇಳಿ ಆ ಪಿಶಾಚಿಯು ಹೊರಟುಹೋಯಿತು. ಅದರ ಮಾತಿನಂತೆ ವರ್ತಕನು ಹಸಿವು ಬಾಯಾರಿಕೆಗಳಿಂದ ಸಂಕಟಪಡುತ್ತಾ ಆ ಪುನ್ನಾಗವೃಕ್ಷದ ಕೆಳಗೆ ಕೂತುಕೊಂಡನು

ಮಧ್ಯಾಹ್ನ ಸಮಯಕ್ಕೆ ಸರಿಯಾಗಿ ಆ ಯಜಮಾನಪ್ರೇತವು ಅಲ್ಲಿಗೆ ಬಂದಿತು ಆರೀತಿ ಬಂದ ಆ ಪ್ರೇತವು ಆ ಪುನ್ನಾಗವೃಕ್ಷದ ಮೇಲೆ ಹತ್ತಿ ಅಲ್ಲಿನಿಂದ ಒಂದು ಬಿಂದಿಗೆ ನೀರನ್ನೂ ಒಂದು ಅರಕನಚಟ್ಟಿ ತುಂಬಾ ಮೊಸರನ್ನವನ್ನೂ

ಏತನ್ಮೇ ಸಂಶಯಂ ಛಿಂದಿ ಪರಂ ಕೌತೂಹಲಂ ಹಿ ಮೇ ।
ಏವಮುಕ್ತಃ ಸ ವಣಿಜಾ ಪ್ರೇತೋ ವಚನಮಬ್ರವೀತ್ ॥ ೨೯ ॥

ವಾಣಿಜ್ಯಸಕ್ತಸ್ಯ ಪುರಾ ಕಾಲೋಽತೀತೋ ಮಮಾನಘ ।
ಶಾಕಲೇ ನಗರೇ ರಮ್ಯೇ ನಾಸ್ತಿಕಸ್ಯ ದುರಾತ್ಮನಃ ॥ ೩೦ ॥

ಧನಲೋಭಾನ್ಮಯಾ ತತ್ರ ನ ಕದಾಚಿದಪಿ ಪ್ರಭೋ ।
ದತ್ತಾಽಸೀದ್ಭಿಕ್ಷವೇ ಭಿಕ್ಷಾ ಕೃಪಣೇನ ಕಥಂಚನ ॥ ೩೧ ॥

ಪ್ರಾತಿವೇಶ್ಯಶ್ಚ ತತ್ರಾಸೀದ್ಬ್ರಾಹ್ಮಣೋ ಗುಣವಾನ್ಮಮ ।
ಶ್ರವಣದ್ವಾದಶೀಯೋಗೇ ಮಾಸಿ ಭಾದ್ರಪದೇ ತದಾ ॥ ೩೨ ॥

ಸ ಕದಾಚಿನ್ಮಯಾ ಸಾರ್ಧಂ ತೌಷೀಂ ನಾಮ ನದೀಂ ಯಯೌ ।
ತಸ್ಯಾಶ್ಚ ಸಂಗಮಃ ಪುಣ್ಯೋ ಯತ್ರಾಸೀಚ್ಚಂದ್ರಭಾಗಯಾ ॥ ೩೩ ॥

ಚಂದ್ರಭಾಗಾಸರಿಚ್ಛ್ರೇಷ್ಠಾ ಯತ್ರ ಶೀತಾಮಲೋದಕಾ ।
ಮಹಾದೇವಜಟಾಜೂಟೇ ಗಂಗಾನಿಪತಿತಾ ಪುರಾ ॥ ೩೪ ॥

ತೆಗೆದುಕೊಂಡು ಕೈಸನ್ನೆಯಿಂದ ಆ ವರ್ತಕನಿಗೆ ಹೊಟ್ಟೆ ತುಂಬುವಷ್ಟು ಮೊಸರನ್ನವನ್ನೂ ಕುಡಿದು ದಣಿಯುವಷ್ಟು ಸೀನೀರನ್ನೂ ಕೊಟ್ಟಿತು ವರ್ತಕನಿಗೆ ಹೊಟ್ಟೆ ತುಂಬಿ ಬಾಯಾರಿಕೆಯುಡುಗಿ ಪರಮ ಸಂತೋಷಪಡುತ್ತಾ ಅವನು ಆ ಮರದಡಿಯಲ್ಲಿ ವಿಶ್ರಮಿಸಿಕೊಂಡನು ಬಳಿಕ ಒಂದೊಂದಾಗಿ ಪಿಶಾಚಿಗಳು ಆ ಮರದ ಬುಡಕ್ಕೆ ಬಂದು ತಮ್ಮ ತಮ್ಮ ಪಾಲಿಗೆ ಬಂದಷ್ಟು ಮೊಸರನ್ನವನ್ನೂ ಸೀನೀರನ್ನೂ ತಗೆದುಕೊಂಡು ತೃಪ್ತಿಪಡುತ್ತಾ ಆನಂದಸಾಗರದಲ್ಲಿ ಮುಳುಗಿದುವು. ಎಲ್ಲ ಪಿಶಾಚಿಗಳೂ ಉಂಡು ತಿಂದು ನೀರು ಕುಡಿದು ತೇಗಿದ ಬಳಿಕ ಆ ಪಿಶಾಚಿಗಳ ಯಜಮಾನನು ತಾನಷ್ಟು ಮೊಸರನ್ನವನ್ನುಂಡು ಬಿಂದಿಗೆಯಲ್ಲಿದ್ದ ನೀರನ್ನು ಕುಡಿದನು ಇವನ ಊಟವಾಗುವುದರೊಳಗಾಗಿ ನೀರೂ, ಅನ್ನವೂ ಬರಿದಾಗಿ ಹೋಯಿತು ಪಿಶಾಚಗಳ ಯಜಮಾನನಿಗೆ ಊಟವಾದುದನ್ನೂ ಅನ್ನ, ನೀರುಗಳು ಮುಗಿದುಹೋದುದನ್ನೂ ನೋಡುತ್ತಲಿದ್ದ ಆ ವರ್ತಕನು ಪರಮಾಶ್ಚರ್ಯಪಡುತ್ತಾ ಅದನ್ನು ಕುರಿತು ಈರೀತಿ ಕೇಳಿದನು ಎಲೈ ಪ್ರೇತರಾಜನೇ! ಈ ಭಯಂಕರ ಕಾಡಿನಲ್ಲಿ ಈರೀತಿ ನಡೆದಿರುವುದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗಿದೆ ಮೊದಲು ನಿನಗೆ ಸ್ವಲ್ಪ ಮೊಸರನ್ನವೂ ಬಂದು

ಚಂದ್ರೇಣ ಭಾಗತೋ ನ್ಯಸ್ತಾ ಚಂದ್ರಭಾಗಾ ಸ್ಮೃತಾ ಹಿ ಸಾ ।
ತತ್ಕಾಲತಪ್ತಸಲಿಲಾ ತೌಷೀ ತತ್ರಾರ್ಕನಂದಿನೀ ॥ ೩೫

ಶೀತೋಷ್ಣೇ ಚೋದಕೇ ತಸ್ಮಿನ್ಸಂಗಮೇ ಸುಮನೋಹರೇ ।
ತಂ ಸಂ ದೇಶಂ ಸಮಾಸಾದ್ಯ ಪ್ರಾತಿವೇಶ್ಯಾನುಸೌ ದ್ವಿಜಃ ॥ ೩೬

ಶ್ರವಣದ್ವಾದಶೀಯೋಗೇ ಸ್ನಾನಾರ್ಜನ ಉಪೋಷಿತಃ ।
ಚಾಂದ್ರಭಾಗಸ್ಯ ತೋಯಸ್ಯ ವಾರಿಧಾನೀ ಸಮಾ ದೃಢಾ ॥ ೩೭

ಬಿಂದಿಗೆ ನೀರೂ ಸಿಕ್ಕಿತು ಅದು ಶಿರುಬರುತ್ತಾ ತಿಕ್ಷ್ಣವಾಗಿ ನನಗೂ, ಇಷ್ಟು ಜ ಪಶಾಚಿಗಳಿಗೂ ತೃಪ್ತಿಯಾಗಿ ನನಗೂ ಮೇಲಾದಷ್ಟು ಸಿಕ್ಕಿತು. ಕೊಂಚನಾದ ಅನ್ನಪ್ರ ಅಕ್ಷಯವಾದುದು ಹೇಗೆ? ಇಷ್ಟು ಜನ ಹಿಡಿದ ಕೋಗಾಲಿರಿಗೆ ಹೊಟ್ಟೆ ತುಂ ಬುದು ಹೇಗೆ? ಈರೀತಿ ಘೋರವಾದ ಅಡವಿಯ ್ಲ ನೀನೊಬ್ಬನೇ ಮನೆಮಾ ಕೊಂಡು ಹೇಗೆ ವಾಸಮಾಡುತ್ತಲಿದ್ದೀಯೆ? ಇದನ್ನು ತಿಳಿಯಬೇಕೆಂದು ನನ ಆಶಯುಂಟಾಗಿದೆ ನನ್ನ ಮನಸ್ಸಿನ ಈ ಸಂಶಯವನ್ನು ಪರಿಹರಿಸಬೇಕೆಂದ ಕೇಳಲು, ಆ ಪ್ರೇತರಾಜನು ಈರೀತಿ ಹೇಳಿದನು ಅಯ್ಯಾ ವರ್ತಕನೇ! ನನ್ನ ಕ ಯನ್ನು ಹೇಳುವೆನು ಕೇಳು

ನಾನು ಹಿಂದಿನ ಜನ್ಮದಲ್ಲಿ ಹಣಗಾರನಾದ ವರ್ತಕನಾಗಿದ್ದೆನು. ನನ್ನ ಊರ ಶಾಕಲವೆಂಬ ನಗರ, ನನ್ನ ಸಮಾನರಾದ ಸ್ನೇಹಿತರೂ ಜನ ಲೋಗರೂ ಯಾರು ಇರಲಿಲ್ಲ ಹೀಗೆ ನಾನು ಜೀವನಮಾಡುತ್ತಿದ್ದೆನು ಒಂದು ದಿನ ಬಿಡಿ ಅಕ್ಕಿಯನ್ನಾ ಗಲೀ ಒಂದು ಬಿಡಿ ಕಾಸು ಧರ್ಮವನ್ನಾಗಲೀ ನಾನು ಭಿಕ್ಷುಕರಿಗೆ ದಾನಮಾಡಲಿಲ್ಲ ನನ್ನ ಮನೆಯ ಪಕ್ಕದಲ್ಲಿ ಒಬ್ಬ ಶ್ರೋತ್ರಿಯನಾದ ಬ್ರಾಹ್ಮಣನು ವಾಸವಾಗಿದ್ದನು. ಹೀಗಿರಲು ಒಂದಾನೊಂದು ಭಾದ್ರಪದಮಾಸದಲ್ಲಿ ಶ್ರವಣ ನಕ್ಷತ್ರ ಸೇರಿದ ದ್ವಾದಶೀ ಪ್ರಾಪ್ತವಾಯಿತು ಆಗ ಆ ಬ್ರಾಹ್ಮಣನೂ, ನಾನೂ ಸ್ನಾನಕ್ಕಾಗಿ ತೋಷೀನದಿಯ ಸಂಗಮಕ್ಕೆ ಹೋದೆವು ಆ ತೋಷೀನದಿಯು ಚಂದ್ರಭಾಗಾ ನದಿಯೊಡನೆ ಸಂಗಮ ವಾಗುತ್ತದೆ ಚಂದ್ರಭಾಗೆಯು ಒಹು ತಂಪಾದ ನೀರು ಹರಿಯುವ ಹೊಳೆ ಆ ತೋಷೀನದಿಯಿಂದ ಹೊರಟ ಬಿಸಿನೀರಿನ ಪ್ರವಾಹದಿಂದ ಕೂಡಿದ ನದಿಗೆ ಚಂದ್ರಭಾಗೆ ಯೆಂಬ ಹೆಸರು ಆ ನದಿಗೆ ಈಹೆಸರು ಬರಲುಕಾರಣವೇನೆಂದರೆ --ವಿಷ್ಣು ಪಾದದಿಂದ ಜನಿಸಿದ ಗಂಗೆಯು ಈಶ್ವರನ ಜಡೆಯನ್ನು ಹೊಂದಿ ಅಲ್ಲಿಂದ ಕೆಳಕ್ಕೆ ಬಿದ್ದಿತಷ್ಟೆ ? ಆಗ ಈಶ್ವರನ ಜಡೆಯಲ್ಲಿದ್ದ ಚಂದ್ರನಿಂದ ಭಾಗಿಸಲ್ಪಟ್ಟ ಆ ನದಿ ಕೆಳಕ್ಕೆ ಹರಿದು ಬಂದಿತು

ದಧ್ಯೋದನಯುತೈಃ ಸಾರ್ಧಂ ಸಂಪ್ರೋಕ್ತೈರ್ವರ್ಧಮಾನಕೈಃ ।
ಛತ್ರೈರ್ಥ್ಯೋಪಾನಹೈಃ ರಮ್ಯೈರ್ವಸ್ತ್ರೈಶ್ಚ ವಿವಿಧೈರ್ಯುತಾ ॥ ೩೮ ॥

ಪ್ರದದೌ ವಿಪ್ರಮುಖ್ಯೇಭ್ಯೋ ರಹಸ್ಯಜ್ಞೋ ಮಹೀಪತಿಃ ।
ಚಿತ್ತಸಂರಕ್ಷಣಾರ್ಥಾಯ ತಸ್ಯಾಪಿ ಚ ತದಾ ಮಯಾ ॥ ೩೯ ॥

ಸೋಪವಾಸೇನ ದತ್ತೈಕಾ ವಾರಧಾನೀ ನವಾ ದೃಢಾ ।
ಚಾಂದ್ರಭಾಗಸ್ಯ ತೋಯಸ್ಯ ದಧ್ಯೋದನಯುತಾ ತದಾ ॥ ೪೦ ॥

ಗತ್ವಾ ಗೃಹಮನುಪ್ರಾಪ್ಯ ತತಃ ಕಾಲೇನ ಕೇನಚಿತ್ ।
ಪಂಚತ್ವಮಹಮಾಪಾದ್ಯ ನಾಸ್ತಿಕ್ಯಾತ್ಪ್ರೇತತಾಂ ಗತಃ ॥ ೪೧ ॥

ಅಸ್ಯಾಮಟವ್ಯಾಂ ಘೋರಾಯಾಂ ಯೋ ಸಾ ವ್ಯಾಕುಶಲಸ್ತದಾ ।
ಶ್ರವಣದ್ವಾದಶೀಯೋಗೇ ದತ್ತಾ ಯ್ಯಾಸೌ ಮಯಾ,ಸಘ ॥ ೪೨ ॥

ಮವರಿಂದ ಅಸ್ಪರ್ಧವಾದ ಚಂದ್ರಭಾಗೆಯೆಂಬ ಹೆಸರನ್ನು ಹೊಂದಿತು ತೋಷಿಯು ಸೂರ್ಯನ ಮಗಳಾದ್ದರಿಂದ ಬಿಸಿಲಿನಿಂದ ಬಿಸಿಬಿಸಿಯಾಗಿ ಹರಿಯುತ್ತಲಿದೆ ಈ ಎರಡು ನದೀ ಸಂಗಮವೂ ಪ್ರೇಕ್ಷಣೀಯವಾದ ಸ್ಥಳ, ಒಂದು ತಣ್ಣೀರು, ಮತ್ತೊಂದ ರುವ ಬಿಸಿನೀರು. ಇವೆರಡೂ ಸಂಗಮವಾಗಿ ಸಮಶೀತೋಷ್ಣವಾಗಿ ಇಲ್ಲಿ ಹರಿಯು ತ್ತಿರುವುದು ಅಂತಹ ಸಂಗಮದಲ್ಲಿ ಆ ಬ್ರಾಹ್ಮಣನು ಸ್ನಾನಮಾಡಿ ಉಪವಾಸನಾಗಿ ದ್ದನು ಮತ್ತು ಆ ಬ್ರಾಹ್ಮಣನು ತಂಪಾದ ಚಂದ್ರಭಾಗಾ ನದಿಯ ನೀರಿನಿಂದ ಕೂಡಿದ ಒಂದು ಬಿಂದಿಗೆ (ಉದಕುಂಭ) ನೀರನ್ನೂ, ಮೊಸರನ್ನವನ್ನೂ ಬ್ರಾಹ್ಮಣರಿಗ ದಾನಮಾಡಿದನು ನಾನೂ ಕೂಡ ಅವನಿಗೆ ಕಡಿಮೆಯಾಗಬಾರದೆಂದು ಭಾವಿಸಿ, ನನ್ನ ಮನಸ್ಸಮಾಧಾನಕ್ಕೋಸ್ಕರ ಒಂದು ಶಕ್ತಿಯಾಗಿದ್ದ ಹೊಸ ಬಿಂದಿಗೆಯ ತುಂಬಾ ಚಂದ್ರಭಾಗಾನದಿಯ ಉದಕವನ್ನೂ, ಮೊಸರನ್ನವನ್ನೂ ಬ್ರಾಹ್ಮಣನಿಗೆ ಉಪವಾಸ ವಿದ್ದು ದಾನಮಾಡಿದೆನು. ಆರೀತಿ ಉಪವಾಸವಾಗಿದ್ದು ಉದಕುಂಭ ದಧ್ಯೋದನ ಗಳನ್ನು ದಾನಮಾಡಿದುದರ ಫಲವಾಗಿ ನಾನು ನಾಸ್ತಿಕನಾದರೂ ಶ್ರವಣ ದ್ವಾದಶೀ ಉಪವಾಸ ದಾನಾದಿಗಳಿಂದ ಪುನೀತನಾದನು ನಾನು ಭೂಲೋಕದಲ್ಲಿ ಒಹುಕಾಲ ಬದುಕಿದ್ದು ನತ್ತಮೇಲೆ ನಾಸ್ತಿಕನಾಗಿದ್ದುದರ ಫಲವಾಗಿ ಇಂತಹ ಪಿಶಾಚ ಜನ್ಮ ವನ್ನೂ ಉಪೋಷ್ಯ ದಾನಗಳ ಅಪೇಕ್ಷಿತ ಫಲವಾಗಿ ಈ ಭೋಜನ ಪಾನಿಯ

ದಧ್ಯೋದನಯುತಾರಮ್ಯಾ ವಾರಿಧಾನೀ ನವಾ ದೃಢಾ ।
ಸೇಯಂ ಮಧ್ಯಾಹ್ನಸಮಯೇ ದಿವಸೇ ದಿವಸೇ ಮಮ ॥ ೪೩ ॥

ಉಪತಿಷ್ಠತ್ಸದೈವೇಹ ಯಥಾ ದೃಷ್ಟಾ ತ್ವಯಾನಘ ।
ಬ್ರಹ್ಮಸ್ವಹಾರಿಣಸ್ತ್ವೇತೇ ಪಾಪಾಃ ಪ್ರೇತತ್ವಮಾಗತಾಃ ॥ ೪೪ ॥

ಪರದಾರಗತಾಃ ಕೇಚಿತ್ಸ್ವಾಮಿದ್ರೋಹರತಾಃ ಪರೇ ।
ಮಿತ್ರದ್ರೋಹರತಾಃ ಕೇಚಿದ್ದೇಶೇಽಸ್ಮಿನ್ಭೃಶದಾರುಣೇ ॥ ೪೫ ॥

ಮಮಾನುಯಾನಂ ಕುರ್ವಂತಿ ಅನ್ನಪಾನಕೃತೇಽನಘ ।
ಅಕ್ಷಯೋ ಭಗವಾನ್ವಿಷ್ಣುಃ ಪರಮಾತ್ಮಾ ಸನಾತನಃ ॥ ೪೬ ॥

ತಮುದ್ದಿಶ್ಯ ತು ಯದ್ದತ್ತಂ ತದಕ್ಷಯ್ಯಂ ಪ್ರಕೀರ್ತಿತಂ ।
ಅಕ್ಷಯ್ಯೇನ ತಥಾಽನ್ನೇನ ತೃಪ್ತಾ ಅಪಿ ಹಿ ಮಾನದ ॥ ೪೭ ॥

ಗಳನ್ನು ಪಡೆದಿರುವೆನು. ಈ ಘೋರಾರಣ್ಯದಲ್ಲಿ ಮಹಾ ಮಹಾ ಪಾಪಿಗಳೆಲ್ಲರೂ ಪಿಶಾಚಿ (ಪ್ರೇತ) ಗಳಾಗಿ ಅಲೆಯುತ್ತಲಿರುವರು. ನಾನು ಶ್ರವಣ ದ್ವಾದಶೀದಿನ ಉಪವಾಸಮಾಡಿ ಉದಕುಂಭ ದಧ್ಯೋದನಗಳನ್ನು ಬ್ರಾಹ್ಮಣರಿಗೆ ದಾನಮಾಡಿದುದರಿಂದ, ಆ ಪುಣ್ಯವು ಮಧ್ಯಾಹ್ನಕಾಲದಲ್ಲಿ ಅನ್ನ, ನೀರಿನ ರೂಪವಾಗಿ ಪ್ರತಿದಿನವೂ ನನ್ನ ಸಮೀಪಕ್ಕೆ ಬರುವುದು, ಇದನ್ನು ನೀನು ಈಗ ತಾನೇ ನೋಡಿರುವೆಯಷ್ಟೆ. ಈ ಮೊಸರನ್ನ ನೀನೀರುಗಳ ಆಶೆಗಾಗಿ ಪ್ರತಿದಿನವೂ, ನನ್ನನ್ನು ಈ ಪಿಶಾಚಿಗಳು ಹೊತ್ತು ತಿರುಗುತ್ತಲಿರುವುವು. ಈ ಪಿಶಾಚಿಗಳಲ್ಲಿ ಕೆಲವು ಬ್ರಹ್ಮಸ್ವ (ಬ್ರಾಹ್ಮಣನ ಸ್ವತ್ತು) ವನ್ನು ಅಪಹರಿಸಿದವುಗಳಾಗಿಯೂ, ಮತ್ತು ಕೆಲವು ಪರಸ್ತ್ರೀಯರಲ್ಲಿ ಆಸಕ್ತನಾದುವುಗಳಾಗಿಯೂ, ಮತ್ತು ಕೆಲವು, ಸ್ವಾಮಿದ್ರೋಹ, ಮಿತ್ರದ್ರೋಹ ಮುಂತಾದ ಮಹಾ ಪಾಪಗಳನ್ನು ಮಾಡಿದವುಗಳಾಗಿಯೂ ಈ ಕಾಡಿನಲ್ಲಿ ಪಿಶಾಚಿಗಳಾಗಿ ಅಲೆಯುತ್ತಲಿವೆ. ಅನ್ನಕ್ಕೆ ಗತಿಯಿಲ್ಲದೆ ಇವು, ಅನ್ನ, ನೀರಿಗೋಸ್ಕರ ನನ್ನನ್ನು ಆಶ್ರಯಿಸಿಕೊಂಡಿವೆ. ಮಹಾನುಭಾವನಾದ ಮಹಾವಿಷ್ಣುವು ಅಕ್ಷಯ ಫಲವನ್ನು ಕೊಡತಕ್ಕವನಾಗಿದ್ದಾನೆ.

೪೬-೫೧ ಮಹಾವಿಷ್ಣುವನ್ನು ಉದ್ದೇಶಮಾಡಿ ಯಾವ ಕರ್ಮವನ್ನೇ ಮಾಡಿದಾಗ್ಯೂ ಅದು ಅಕ್ಷಯವಾಗಿ ಪರಿಣಮಿಸುವುದು. ಎಲೈ ವರ್ತಕನೇ! ಪ್ರತಿ

ಪ್ರೇತಭಾವೇನ ದೌರ್ಬಲ್ಯಂ ನ ವಿಮುಂಚತಿ ಕರ್ಹಿಚಿತ್ ।
ಅಹಂ ಚ ಪೂಜಯಿತ್ವಾ ತ್ವಾಮತಿಥಿಂ ಸಮುಪಸ್ಥಿತಂ ॥ ೪೮ ॥

ಪ್ರೇತಭಾವಾದ್ವಿನಿರ್ಮುಕ್ತೋ ಯಾಸ್ಯಾಮಿ ಪರಮಾಂ ಗತಿಂ ।
ಮಯಾ ವಿಹೀನಾಃ ಪ್ರೇತಾಸ್ತು ವನೇಽಸ್ಮಿನ್ಭೃಶದಾರುಣೇ ॥ ೪೯ ॥

ಪೀಡಾಮನುಭವಿಷ್ಯಂತಿ ದಾರುಣಾಂ ಕರ್ಮಯೋಗಜಾಂ ।
ಸತೇಷಾಂ ತ್ವಂ ಮಹಾಭಾಗ ಮದನುಗ್ರಹಕಾಮ್ಯಯಾ ॥ ೫೦ ॥

ಪ್ರತ್ಯೇಕಂ ಗೋತ್ರನಾಮಾನಿ ಗೃಹ್ಣೀಷ್ವ ಲಿಖಿತೇನ ಚ ।
ಅಸ್ತಿ ಕಕ್ಷ್ಯಾಗತೈವೇಷಾ ತವ ಸಾ ಪುಸ್ತಕಾ ಶುಭಾ ॥ ೫೧ ॥

ಹಿಮವಂತಮುಥಾಸಾದ್ಯ ತತ್ರ ತ್ವಂ ಲಪ್ಸ್ಯಸೇ ನಿಧಿಂ ।
ಗಯಾಶೀರ್ಷೇ ತತೋ ಗತ್ವಾ ಶ್ರಾದ್ಧಂ ಕುರು ಮಹಾಮತೇ ॥ ೫೨ ॥

ಏಕೈಕಂ ತ್ವಮುಥೋದ್ದಿಶ್ಯ ಪ್ರೇತಂ ಪ್ರೇತಂ ಯಥಾಸುಖಂ ।
ತತಸ್ತು ತೇ ವಿಮೋಕ್ಷ್ಯಂತಿ ಪ್ರೇತಭಾವಮಸಂಶಯಂ ॥ ೫೩ ॥

ದಿನವೂ ಈ ರೀತಿ ಅಕ್ಷಯವಾಗುತ್ತಿರುವ ಅನ್ನದಿಂದ ಈ ಪಿಶಾಚಿಗಳು ತೃಪ್ತರಾದಾಗ್ಯೂ ಸಹ ಈ ಪ್ರೇತಭಾವವೂ ಈ ದುರ್ಬಲತ್ವವೂ ಮಾತ್ರ ಎಂದಿಗೂ ಹೋಗುವುದಿಲ್ಲ ತಾನಾಗಿ ಬಂದ ಅತಿಥಿಯಾದ ನಿನ್ನನ್ನು ನಾನು ಪೂಜಿಸಿ ತೃಪ್ತಿಪಡಿಸಿದುದರಿಂದ ಈ ಪ್ರೇತಭಾವವನ್ನು ಕಳೆದುಕೊಂಡು ಶ್ರೇಷ್ಠವಾದ ಗತಿಯನ್ನು ಹೊಂದುತ್ತೇನೆ ನಾನು ಹೊರಟುಹೋದಮೇಲೆ ಭಯಂಕರವಾದ ಯಾತನೆಯುಳ್ಳ ಈ ಕಾಡಿನಲ್ಲಿರುವ ಈ ಪಿಶಾಚಿಗಳು ಅನ್ನ, ನೀರಿಗೆ ಗತಿಯಿಲ್ಲದೆ ಬಹಳ ದಾರುಣವಾದ ವೇದನೆಯನ್ನನುಭವಿಸಬೇಕಾಗುತ್ತದೆ ಅಯ್ಯಾ ಮಹಾನುಭಾವನಾದ ವರ್ತಕನೇ! ನನ್ನ ಮೇಲೆ ಅನುಗ್ರಹವಿಟ್ಟು ನೀನು ಈ ಪಿಶಾಚಿಗಳ ಹೆಸರು ಗೋತ್ರಗಳನ್ನೆಲ್ಲಾ ಬರೆದುಕೋ! ನಿನ್ನ ಕಂಕುಳಲ್ಲಿರುವ ಆ ಪುಸ್ತಕವನ್ನು ಈಚೆಗೆ ತೆಗೆ ಹೆಸರುಗಳನ್ನೆಲ್ಲಾ ಅದರಲ್ಲಿ ತಪ್ಪದೆ ಎಲ್ಲವನ್ನೂ ಬರೆದುಕೋ ನೀನು ಹಿಮಾಲಯದ ತಪ್ಪಲಿಗೆ ಹೋದರೆ ಅಲ್ಲಿ ಬೇಕಾದಷ್ಟು ದ್ರವ್ಯ ಸಿಕ್ಕುವುದು ಅದನ್ನೆಲ್ಲಾ ಸಂಗ್ರಹಿಸಿಕೊಂಡು ಗಯಾಶೀರ್ಷಕ್ಕೆ ಹೋಗು ಅಲ್ಲಿ ಇವರಿಗೆಲ್ಲಾ ಶ್ರಾದ್ಧಮಾಡು ಒಬ್ಬೊಬ್ಬನ ಹೆಸರು ಗೋತ್ರ

ಇತ್ಯೇವಂ ಸ ವದನ್ನೇವ ತಪ್ತಜಾಂಬೂನದಪ್ರಭಃ ।
ವಿಮಾನವರಮಾಸ್ಥಾಯ ಸ್ವರ್ಗಲೋಕಂ ತತೋ ಗತಃ ॥ ೫೪ ॥

ಸ್ವರ್ಗತೇ ಪ್ರೇತನಾಥೇ ತು ಪ್ರೇತಾನಾಂ ಸ ವಣಿಕ್ಕ್ರಮಾತ್ ।
ನಾಮಗೋತ್ರಾಣಿ ಸಂಗೃಹ್ಯ ಪ್ರಯಾತಃ ಸ ಹಿಮಾಲಯಂ ॥ ೫೫ ॥

ತತ್ರ ಪ್ರಾಪ್ಯ ನಿಧಿಂ ಗತ್ವಾ ನಿಕ್ಷಿಪ್ಯ ಚ ತಥಾ ಗೃಹೇ ।
ಧನಂ ಕಿಂಚಿದುಪಾದಾಯ ಗಯಾಶೀರ್ಷಂ ತತೋ ಯಯೌ ॥ ೫೬ ॥

ಪ್ರೇತಾನಾಂ ಕ್ರಮಶಸ್ತತ್ರ ಚಕ್ರೇ ಶ್ರಾದ್ಧಂ ದಿನೇ ದಿನೇ ।
ಯಸ್ಯಯಸ್ಯ ಯದಾ ಶ್ರಾದ್ಧಂ ಕರೋತಿ ಸ ಮಹಾನ್ವಣಿಕ್ ॥ ೫೭ ॥

ಸಸ ತಸ್ಯ ತದಾ ಸ್ವಪ್ನೇ ದರ್ಶಯತ್ಯಾತ್ಮನಸ್ತನುಂ ।
ಬ್ರವೀತಿ ಚ ಮಹಾಭಾಗ ಪ್ರಸಾದೇನ ತವಾನಘ ॥ ೫೮ ॥

ಪ್ರೇತಭಾವೋ ಮಯಾ ತ್ಯಕ್ತಃ ಪ್ರಾಪ್ತೋಽಸ್ಮಿ ತ್ರಿದಿವಂ ಧ್ರುವಂ ।
ಕೃತ್ವಾ ಸ ಧನದಾನೇನ ಪ್ರೇತಾನಾಂ ನಿಷ್ಕೃತಿಂ ವಣಿಕ್ ॥ ೫೯ ॥

ಗಳನ್ನೂ ಬೇರೆಬೇರೆಯಾಗಿಯೇ ಹೇಳಿಕೊಂಡು ಪಿಂಡವನ್ನು ಹಾಕು. ಅವರಿಗೆಲ್ಲಾ ಈ ದುರ್ಗತಿಯು (ಈ ಪಿಶಾಚಿ ಜನ್ಮ) ನಾಶವಾಗಿ ಸುಖವಾಗಿ ಸ್ವರ್ಗಕ್ಕೆ ಹೊರಟು ಹೋಗುತ್ತಾರೆ.

ಹೀಗೆ ಆ ಯಜಮಾನನು ಹೇಳುತ್ತಿರುವಷ್ಟರಲ್ಲೇ ಅವನ ಬಳಿಗೆ ಅಪರಂಜೀ ಚಿನ್ನದಂತೆ ಹೊಳೆ ಹೊಳೆಯುತ್ತಿದ್ದ ಒಂದು ವಿಮಾನವು ದೇವಲೋಕದಿಂದ ಬಂದಿತು. ಕೂಡಲೇ ಆ ಪುಣ್ಯಾತ್ಮನು ಆ ವಿಮಾನದ ಮೇಲೆ ಹತ್ತಿ ಸ್ವರ್ಗಲೋಕಕ್ಕೆ ಹೊರಟುಹೋದನು. ಈರೀತಿ ಪ್ರೇತರಾಜನು ಸ್ವರ್ಗಕ್ಕೆ ಹೊರಟುಹೋದ ಬಳಿಕ ಆ ವರ್ತಕನು ಉಳಿದಿದ್ದ ಎಲ್ಲಾ ಪಿಶಾಚಿಗಳ ಹೆಸರನ್ನೂ, ಗೋತ್ರಗಳನ್ನೂ ಬರೆದುಕೊಂಡು ಹಿಮಾಲಯಕ್ಕೆ ಹೊರಟುಹೋದನು. ಅಲ್ಲಿ ಪ್ರೇತರಾಜನ ಮಾತಿನಂತೆ ಯಥೇಚ್ಛವಾಗಿ ನಿಧಿಯು ಸಿಕ್ಕಿತು. ಆ ಹಣವನ್ನೆಲ್ಲಾ ತೆಗೆದುಕೊಂಡು ಮನೆಗೆ ಹೋಗಿ ಅವನ್ನೆಲ್ಲಾ ಭದ್ರಪಡಿಸುವವನಾಗಿ ಅದರಲ್ಲಿ ಕೊಂಚ ಹಣವನ್ನು ಮಾತ್ರ ವೆಚ್ಚಕ್ಕೆ ತೆಗೆದುಕೊಂಡು ಗಯೆಗೆ ಹೋದನು. ಕ್ರಮವಾಗಿ ಆ ಗಯಾಶೀರ್ಷದಲ್ಲಿ ಅನುಕ್ರಮವಾಗಿ ಆ ಪ್ರೇತಗಳಿಗೆಲ್ಲಾ ದಿನೇ ದಿನೇ ಶ್ರಾದ್ಧಮಾಡುತ್ತ ಬಂದನು. ಆ

ಜಗಾಮ ಸ್ವಗೃಹಂ ತತ್ರ ಮಾಸಿ ಭಾದ್ರಪದೇ ತದಾ ।
ಶ್ರವಣದ್ವಾದಶೀಯೋಗೇ ಪೂಜಯಿತ್ವಾ ಜನಾರ್ದನಂ ॥ ೬೦ ॥

ಧನಂ ಚ ದತ್ವಾ ವಿಪ್ರೇಭ್ಯೋ ಸೋಪವಾಸೋ ಜಿತೇಂದ್ರಿಯಃ ।
ಪುಣ್ಯೇಷು ಸತತಂ ರಾಜನ್ನದೀನಾಂ ಸಂಗಮೇಷು ಚ ॥ ೬೧ ॥

ಗಂಗಾಸರಯ್ವೋರ್ಗಂಗಾಯಾಃ ಶೋಣಸ್ಯ ಚ ಮಹಾಮತಿಃ ।
ಇಕ್ಷುಮತ್ಯಾಶ್ಚ ಗಂಗಾಯಾ ಗಂಗಾಯಮುನಯೋಸ್ತಥಾ ॥ ೬೨ ॥

ಗೋಮತ್ಯಾಶ್ಚ ಸರಯ್ವಾಶ್ಚ ಕೌಶಿಕೀಗಂಡಕ್ಯೋಸ್ತಥಾ ।
ವಿಪಾಶಯಾ ದೇವಹ್ರದಾ ಯತ್ರ ಯೋಗಂ ಪ್ರಪದ್ಯತೇ ॥ ೬೩ ॥

ವಿಪಾಶಾ ಚ ತಥಾ ಯೋಗಂ ಯತ್ರ ಯಾತಿ ಶತದ್ರುಣಾ ।
ಇರಾವತೀ ತಥಾ ಯೋಗಂ ಯತ್ರ ವ್ರಜತಿ ಸಿಂಧುನಾ ॥ ೬೪ ॥

ಚಂದ್ರಭಾಗಾ ಚ ವ್ರಜತಿ ಯತ್ರ ಯೋಗಂ ವಿತಸ್ತಯಾ ।
ಮಹಾಸಿಂಧುಶ್ಚ ಸಂಯೋಗಂ ಯತ್ರ ಯಾತಿ ವಿತಸ್ತಯಾ ॥ ೬೫ ॥

ವರ್ತಕನು ಯಾರ ಯಾರ ಹೆಸರನ್ನು ಹೇಳಿಕೊಂಡು ಯಾವ ಯಾವ ದಿವಸ ಶ್ರಾದ್ಧ ಮಾಡಿದನೋ ಆ ದಿವಸ ರಾತ್ರಿ ಸ್ವಪ್ನದಲ್ಲಿ ಆಯಾ ಪಿಶಾಚಿಗಳು ಬಂದು ತಮ್ಮ ನಿಜ ಸ್ವರೂಪವನ್ನು ಅವನಿಗೆ ತೋರಿಸಿ ಎಲೈ ಮಹಾನುಭಾವನೇ, ನಿನ್ನ ಅನುಗ್ರಹದಿಂದ ನನಗೆ ಪಿಶಾಚಿ ಜನ್ಮ ಹೋಯಿತು ಈಗ ನಾನು ಸ್ವರ್ಗಕ್ಕೆ ಹೋಗುತ್ತಲಿದ್ದೇನೆ ಎಂದು ಹೇಳುತ್ತಾ ಆ ಪಿಶಾಚಿ ಪರಿವಾರವೆಲ್ಲವೂ ಸದ್ಗತಿಯನ್ನು ಹೊಂದಿದವು ಈ ಮೇರೆ ಆ ವರ್ತಕನು ಧನವನ್ನು ದಾನಮಾಡಿ ಗಯಾಶ್ರಾದ್ಧವನ್ನು ಮಾಡಿ ಅವುಗಳನ್ನೆಲ್ಲಾ ಸ್ವರ್ಗಕ್ಕೆ ಕಳುಹಿಸಿದ ಬಳಿಕ ತಮ್ಮ ಮನಗೆ ಬಂದು ಭಾದ್ರಪದಮಾಸ ಬರುವುದನ್ನೇ ಕಾದಿದ್ದು ಆ ತಿಂಗಳು ಬಂದಾಗ ಶುದ್ಧ ದ್ವಾದಶೀ ದಿವಸ ಶ್ರವಣನಕ್ಷತ್ರ ಯೋಗವನ್ನು ನೋಡಿದವನಾಗಿ ಆ ದಿವಸ ಮಹಾವಿಷ್ಣುವನ್ನು ಪೂಜೆಮಾಡಿ ಬ್ರಾಹ್ಮಣರಿಗೆಲ್ಲಾ ಯಥೇಚ್ಛವಾಗಿ ದ್ರವ್ಯದಾನಮಾಡಿದನು ಮತ್ತು ಆ ದಿವಸ ಉಪೋಷ್ಯದಿಂದಿದ್ದು ನದಿಗಳ ಸಂಗಮಗಳನ್ನು ಹುಡುಕಿಕೊಂಡು ಹೋಗಿ ಅಲ್ಲಿ ಯಾವಾಗಲೂ (ಪ್ರತಿ ವರ್ಷವೂ) ಸ್ನಾನಮಾಡಿ ಬರುತ್ತಿದ್ದನು ಅವನು ಯಾವ

ಪ್ರತ್ಯಬ್ದಂ ಯಾವದೇತೇಷು ಸಂಗಮೇಷು ಮಹಾವಣಿಕ್ ।
ಕರೋತಿ ವಿಧಿವದ್ದಾನಂ ಯಾವದ್ದಿಷ್ಟಾಂತಮಾಗತಃ ॥ ೬೬ ॥

ಅವಾಪ ಪರಮಂ ಸ್ಥಾನಂ ದುರ್ಲಭಂ ಯತ್ತು ಜಂತುಭಿಃ ।
ಯತ್ರ ಕಾಮಫಲಾವೃಕ್ಷಾ ನದ್ಯಃ ಪಾಯಸಕರ್ದಮಾಃ ॥ ೬೭ ॥

ಶೀತಲಾಮಲಪಾನೀಯಾಃ ಪುಷ್ಕರಿಣ್ಯೋ ಮನೋಹರಾಃ ।
ಸುವರ್ಣಸಿಕತಾ ರಾಜನ್ಮಣಿಸೋಪಾನಭೂಷಿತಾಃ ॥ ೬೮ ॥

ಆನಂತ್ಯಾಯ ಸ ಸಂಪ್ರಾಪ್ತೋ ದೇಶಂ ತಂ ಭೂರಿದಕ್ಷಿಣಃ ।

---

ಯಾವ ನದೀಸಂಗಮಗಳಲ್ಲಿ ಸ್ನಾನಮಾಡಿದನೆಂಬುದನ್ನು ಕೇಳು ಒರೆಯುತ್ತೇನೆ -- ಗಂಗಾ, ಸರಯೂ ಸಂಗಮ, ಗಂಗಾ-ಶೋಣಾ ಸಂಗಮ, ಇಕ್ಷುಮತೀ-ಗಂಗಾ ಸಂಗಮ, ಗಂಗಾ-ಯಮುನಾ ಸಂಗಮ, ಗೋಮತೀ-ಸರಯೂ ಸಂಗಮ, ಕೌಶಿಕೀ-ಗಂಡಕೀ ಸಂಗಮ, ವಿಪಾಶಾ-ದೇವಹ್ರದಾ ಸಂಗಮ, ವಿಪಾಶಾ-ಶತದ್ರು ಸಂಗಮ, ಇರಾವತೀ-ಸಿಂಧೂ ಸಂಗಮ. ಚಂದ್ರಭಾಗಾ-ವಿತಸ್ತಾ ಸಂಗಮ, ವಿತಸ್ತಾ-ಮಹಾಸಿಂಧೂ ಸಂಗಮ ಈರೀತಿಯಾಗಿ ಒಂದೊಂದು ವರ್ಷ ಒಂದೊಂದು ಸಂಗಮ ಸ್ಥಳಕ್ಕೆ ಹೋಗಿ ಸ್ನಾನಮಾಡಿ ಉಪವಾಸವಾಗಿದ್ದು ಶ್ರವಣ ದ್ವಾದಶೀ ವ್ರತವನ್ನು ಮಾಡಿ ಆ ಪುಣ್ಯಾತ್ಮನಾದ ವರ್ತಕನು ತನಗೆ ದೃಷ್ಟ-ಮಾರ್ಗಗಳ ವೃತ್ತಾಂತಗಳು ಗೊತ್ತಾಗಿದ್ದುದರಿಂದ ಆ ಫಲವನ್ನು ಪಿಶಾಚ ತೃಪ್ತಿಯ ಅತಿಥಿಸತ್ಕಾರಗಳ ಮಹಿಮೆಯನ್ನು ನೆನೆಸಿಕೊಂಡವನಾಗಿ ಯಥೇಚ್ಛನಾಗಿ ದಾನ ಧರ್ಮಗಳನ್ನು ಮಾಡಿದನು ಈರೀತಿಮಾಡಿದ ಉದಾರದಾನದಿಂದಲೂ ಶ್ರವಣದ್ವಾದಶೀ ವ್ರತಮಹಿಮೆಯಿಂದಲೂ ಆ ವರ್ತಕನು ಪ್ರಾಣಿಗಳಿಂದ ಸಾಮಾನ್ಯವಾಗಿ ಪಡೆಯಲು ದುರ್ಲಭವಾದ ಪರಮಪದವಿಯನ್ನು ಪಡೆದನು ಆ ಮಹಾಸ್ಥಳದಲ್ಲಿ ಇಷ್ಟಾರ್ಥವನ್ನು ನೆರವೇರಿಸುವ ಕಾಮಫಲ ಪ್ರದವಾದ ಕಲ್ಪವೃಕ್ಷಗಳೂ ಪಾಯಸದ ಮಡುವಿನಿಂದ ಕೂಡಿ ಹರಿಯುವ ನದಿಗಳೂ, ನಿರ್ಮಲವಾದ ಶೀತಲೋದಕವನ್ನುಳ್ಳ ಸುಂದರ ಸರೋವರಗಳೂ ಬೇಕಾದಷ್ಟಿವೆ ಆ ಸರೋವರದ ದಡದಲ್ಲಿರುವ ಮರಳು ರಾಶಿಗಳಲ್ಲ ಚಿನ್ನದ ಮರಳುರಾಶಿಗಳಾಗಿವೆ ಆ ಸರೋವರಕ್ಕೆ ಕಟ್ಟಿರುವ ಸೋಪಾನಗಳೆಲ್ಲಾ ರತ್ನಗಳಿಂದ ಭೂಷಿತವಾಗಿವೆ ವಿಶೇಷವಾಗಿ ದಾನಮಾಡಿದ ಆ

ತಂ ದೇಶಮಾಸಾದ್ಯ ವಣಿಕ್ ಮಹಾತ್ಮಾ
ಸುತಪ್ತಜಾಂಬೂನದಭೂಷಿತಾಂಗಃ ।
ಕಲ್ಪಂ ಸಮಗ್ರಂ ಮುದಿತೋ ಯುದಾತ್ಮಾ
ರೇಮೇ ಸ ರಾಮಾಭಿಯುತಃ ಕೃತಾತ್ಮಾ ॥ ೬೯ ॥

ವಿಮಾನೈರಪ್ಸರೋಭಿಶ್ಚ ಸಿದ್ಧಗಂಧರ್ವಸೇವಿತಃ ।
ವಿಷ್ಣುಲೋಕಮವಾಪ್ನೋತಿ ಯಾವದಾಭೂತಸಂಪ್ಲವಂ ॥ ೭೦ ॥

ರಾಜಸೂಯಾದಿಭಿರ್ಯಜ್ಞೈರ್ಯತ್ಫಲಂ ಸಮವಾಪ್ಯತೇ ।
ಶ್ರವಣದ್ವಾದಶೀಂ ಕೃತ್ವಾ ತತ್ಫಲಂ ಲಭತೇ ನರಃ ॥ ೭೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಪಿಶಾಚಮೋಕ್ಷಣೇ
ಶ್ರವಣದ್ವಾದಶೀ ಮಾಹಾತ್ಮ್ಯವರ್ಣನಂನಾಮ
ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ

---

ವರ್ತಕನು ಅನಂತಾನಂತ ಕೋಟಿ ಸುವರ್ಣ ನಿಚಯದಿಂದೊಡಗೂಡಿದ ಆ ಸ್ಥಳಕ್ಕೆ ತಾನು ಮಾಡಿದ ವಿಪುಲ ದ್ರವ್ಯದಾನದ ಫಲವಾಗಿ ಪ್ರವೇಶಮಾಡಿದನು. ಈರೀತಿ ಮಹಾತ್ಮನಾದ ಆ ವರ್ತಕನು ಅಂತಹ ಸ್ಥಳಕ್ಕೆ ಚಿನ್ನದಂತೆ ಕೂಡಿದ ದೇಹಕಾಂತಿಯಿಂದ ಕೂಡಿ ಪ್ರವೇಶಿಸಿದವನಾಗಿ ಕಲ್ಪಾಂತ್ಯದವರೆಗೂ ಆನಂದದಿಂದ ಕೂಡಿ ದೇವತಾ ಸ್ತ್ರೀಯರೊಡನೆ ಭೋಗಿಸುತ್ತಾ ಸುಖವಾಗಿದ್ದನು. ವತ್ತು ಈ ಸುಖವನ್ನೆಲ್ಲಾ ಅನುಭವಿಸಿದ ಬಳಿಕ ಆ ವರ್ತಕನು ಸಿದ್ಧಗಂಧರ್ವರಿಂದ ಸೇವಿತವಾದ ವಿಮಾನದಲ್ಲಿ ಕುಳಿತು, ಅಪ್ಸರ ನಾರಿಯರಿಂದೊಡಗೂಡಿದವನಾಗಿ ಪಂಚಭೂತಗಳಿರುವವರೆಗೆ ವಿಷ್ಣುಲೋಕದಲ್ಲಿ ವಾಸಮಾಡುತ್ತಾನೆ. ಕೇಳಯ್ಯಾ ! ವಜ್ರರಾಜ, ಹೀಗೆಂಬದಾಗಿ, ಮಾರ್ಕಂಡೇಯರು ನಿರೂಪಿಸಿದರು.

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಪಿಶಾಚಮೋಕ್ಷ ವಿಷಯದಲ್ಲಿ ಶ್ರವಣದ್ವಾದಶೀ
ಮಾಹಾತ್ಮ್ಯ ವರ್ಣನವೆಂಬ ಹೆಸರಿನ ನೂರ ಅರವತ್ತೆರಡನೆಯ
ಅಧ್ಯಾಯವು ಮುಗಿಯಿತು

॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ತ್ರಿಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಏಕಾಮುಪೋಷ್ಯ ಕೃಷ್ಣಾಂ ಯಾಂ ದ್ವಾದಶೀಂ ವಿಧಿನಾ ನರಃ ।
ಮಹತ್ಫಲಮವಾಪ್ನೋತಿ ತಾಂ ಸಮಾಚಕ್ಷ್ವ ಭಾರ್ಗವ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪೌಷ್ಯಾಂತು ಸಮತೀತಾಯಾಂ ಶ್ರವಣೇನ ತು ಸಂಯುತಾ ।
ದ್ವಾದಶೀ ಯಾ ಭವೇತ್ಕೃಷ್ಣಾ ಪ್ರೋಕ್ತಾ ಸಾ ತಿಲದ್ವಾದಶೀ ॥ ೨ ॥

ತಿಲೈಃ ಸ್ನಾನಂ ತಿಲೈರ್ಹೋಮಂ ನೈವೇದ್ಯಂ ತಿಲಮೋದಕೈಃ ।
ದೀಪಾಶ್ಚ ತಿಲತೈಲೇನ ತಥಾ ದೇಯಂ ತಿಲೋದಕಂ ॥ ೩ ॥

### ನೂರ ಅರವತ್ತಮೂರನೆಯ ಅಧ್ಯಾಯವು.

೧. ವಜ್ರಮಹಾರಾಜನು ಪುನಃ ಕೇಳುತ್ತಾನೆ —ಎಲೈ ಮಾರ್ಕಂಡೇಯ ಮಹಾಮುನಿಯೇ --ಇದೇ ಮೇರೆ ಕೃಷ್ಣಪಕ್ಷ ದ್ವಾದಶಿಯಲ್ಲಿಯಾವುದಾದರೊಂದರಲ್ಲಿ ನಿಯಮ ಉಪೋಷ್ಯವನ್ನು ಮಾಡಿದರ ಎಂತಹ ಮಹತ್ಫಲ ಒರುವುದೋ ಅದನ್ನು ದಯಮಾಡಿ ತಿಳಿಸು

೨ ಮಾರ್ಕಂಡೇಯನು ಹೇಳುತ್ತಾನೆ —ಪುಷ್ಯಮಾಸವಲ್ಲಿ ಬಹುಳದ ಪಕ್ಷ ಕಳೆದುಹೋದ ಮೇಲೆ ಮುಂದಿನ ಮಾಘ ಬಹುಳದಲ್ಲಿ ಬರುವ ದ್ವಾದಶೀಶ್ರವಣ ನಕ್ಷತ್ರವ್ಯಾಪಿಯಾಗಿದ್ದರೆ ಆ ದ್ವಾದಶಿಗೆ ತಿಲದ್ವಾದಶಿಯೆಂದು ಹೆಸರು

೩-೪ ಆವಿಸ ತಿಲವನ್ನು ಅರೆದು ಅದನ್ನೊತ್ತಿಕೊಂಡು ಸ್ನಾನಮಾಡಬೇಕು.

ತಿಲಾಶ್ಚ ದೇಯಾ ವಿಪ್ರೇಭ್ಯಸ್ತಸ್ಮಿನ್ನಹನಿ ಪಾರ್ಥಿವ ।
ಉಪವಾಸದಿನೇ ರಾಜನ್ಹೋತವ್ಯಾಶ್ಚ ತಥಾ ತಿಲಾಃ ॥ ೪ ॥

ಉಪೋಷಿತೇನಾಪರೇಽಹ್ನಿ ಹೋತವ್ಯಾಶ್ಚ ವಿಶೇಷತಃ ।
ಇಂಧನಂ ಚ ಪ್ರದಾತವ್ಯಂ ಬ್ರಾಹ್ಮಣೇಭ್ಯಸ್ತಥಾಽನಘ ॥ ೫ ॥

ತಿಲಸ್ತ್ರಸ್ಥಂ ತಥಾ ದತ್ವಾ ಸೋಪವಾಸೋ ಜಿತೇಂದ್ರಿಯಃ ।
ನ ದುರ್ಗತಿಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೬ ॥

ತದ್ವಿಷ್ಣೋಃ ಪರಮಂ ಪದಂ ಹೋಮಮಂತ್ರಃ ಪ್ರಕೀರ್ತಿತಃ ।
ಪೌರುಷಂ ಚ ತಥಾ ಸೂಕ್ತಂ ಶ್ರೀಸೂಕ್ತೇನ ಚ ಸಂಯುತಂ ॥ ೭ ॥

ಹೋಮಃ ಕಾರ್ಯೋಽಥ ರಾಜೇಂದ್ರ ಸಾವಿತ್ರ್ಯಾ ಚ ಯತಾತ್ಮನಾ ।
ಏತತ್ಪ್ರೋಕ್ತಂ ದ್ವಿಜಾತೀನಾಂ ಸ್ತ್ರೀಶೂದ್ರೇಷು ತಥಾ ಶೃಣು ॥ ೮ ॥

ಎಳ್ಳಿನಿಂದಲೇ ಹೋಮಮಾಡಬೇಕು ಎಳ್ಳಿನ ಚಿಗಳಿ, ಎಳ್ಳುಂಡೆ ಎಳ್ಳಿನ ಕಡಬು ಗಳನ್ನು ದೇವರಿಗೆ ನೈವೇದ್ಯಮಾಡಬೇಕು ಎಳ್ಳಿನ ಎಣ್ಣೆಯಿಂದಲೇ ದೀಪವನ್ನು ಉರಿಸಬೇಕು ತಿಲೋದಕ ತರ್ಪಣವನ್ನೇ ಕೊಡಬೇಕು ಬ್ರಾಹ್ಮಣರಿಗೆ ಎಳ್ಳುದಾನ ಮಾಡಬೇಕು ಈ ರೀತಿ ಆ ದಿನ ಉಪವಾಸವಿಂದ್ದು ತಿಲಹೋಮವನ್ನು ಮಾಡಬೇಕು

೫-೬ ದ್ವಾದಶೀದಿವಸ ಉಪವಾಸವಾಗಿದ್ದು ಮಾರನೇ ದಿವಸ ಹೋಮ ಗಳನ್ನು ಮಾಡಿ ಬ್ರಾಹ್ಮಣರಿಗೆ ಸೌದೆಯನ್ನು ದಾನಮಾಡಬೇಕು. ಮತ್ತು ಒಂದು ಕೊಳಗದಷ್ಟು ಎಳ್ಳನ್ನು ಹೋಮಮಾಡಬೇಕು ಹೀಗೆ ಮಾಡಿದರೆ ಸದ್ಗತಿ ಯುಂಟಾಗುವುದು

೭-೮ ಹೋಮಮಾಡುವುದಕ್ಕೆ ತದ್ವಿಷ್ಣೋಃ ಪರಮಂ ಎಂಬ ಮಂತ್ರವನ್ನು ಉಪಯೋಗಿಸಬೇಕು ಪುರುಷಸೂಕ್ತ, ಶ್ರೀಸೂಕ್ತಮಂತ್ರಗಳಿಂದಲೂ ಹೋಮ ಮಾಡಬೇಕು ಮತ್ತು ಗಾಯತ್ರಿಯಿಂದಲೂ, ತಿಲಹೋಮವನ್ನು ಮಾಡಬೇಕು ಈರೀತಿ ವೇದಮಂತ್ರದಿಂದ ಹೋಮವು ಬ್ರಾಹ್ಮಣರಿಗೆ ಮಾತ್ರ ಹೇಳಲ್ಪಟ್ಟಿತು ಸ್ತ್ರೀ ಶೂದ್ರರ ವಿಷಯವನ್ನು ಹೇಳುವೆನು ಕೇಳು

ದ್ವಾದಶಾಷ್ಟಾಕ್ಷರೋ ಮಂತ್ರಸ್ತೇಷಾಂ ಪ್ರೋಕ್ತೋ ಮಹಾತ್ಮನಾಂ ।
ಹಿತೌ ತೌ ಚ ದ್ವಿಜಾತೀನಾಂ ಮಂತ್ರಶ್ರೇಷ್ಠೌ ನರಾಧಿಪ ॥ ೯ ॥

ತಾಭ್ಯಾಮಭ್ಯಧಿಕೋ ಮಂತ್ರೋ ವಿದ್ಯತೇ ನೇಹ ಕುತ್ರಚಿತ್ ।
॥ ವಜ್ರ ಉವಾಚ ॥
ದ್ವಾದಶಾಷ್ಟಾಕ್ಷರೌ ಮಂತ್ರೌ ಕಥಯಸ್ವ ಮಮಾನಘ ॥ ೧೦ ॥

ಪುಣ್ಯೌ ಪವಿತ್ರೌ ಮಾಂಗಲ್ಯೌ ಸರ್ವಪಾಪಪ್ರಣಾಶನೌ ।
॥ ಮಾರ್ಕಂಡೇಯ ಉವಾಚ ॥
ಓಂ ನಮೋ ಭಗವತೇ ವಾಸುದೇವಾಯ ।
ಓಂ ನಮೋ ನಾರಾಯಣಾಯ । ೧೧ ॥

ಏತೌ ಮಯಾ ತೇ ಕಥಿತೌ ಪವಿತ್ರೌ
ಮಂತ್ರೋತ್ತಮೌ ಪಾಪಹರೌ ವರೇಣ್ಯೌ ।
ನಾರಾಯಣೌ ಸರ್ವತಪಸ್ವಿನಾಂ ಚ
ರಹಸ್ಯಭೂತೌ ಭುವನೇಷು ನಿತ್ಯಂ ॥ ೧೨ ॥

---

೯ ಜನರಿಗೆಲ್ಲಾ ದ್ವಾದಶಾಕ್ಷರ ಮಂತ್ರ, ಅಷ್ಟಾಕ್ಷರ ಮಂತ್ರವೇ ಹೇಳಲ್ಪಟ್ಟಿದೆ ಮಹಾತ್ಮರಾದ ಬ್ರಾಹ್ಮಣರಿಗೂ ಸಹ ಆ ಮಂತ್ರಗಳೆರಡೂ ಜಪಕ್ಕೆ ಶ್ರೇಷ್ಠವಾದುವೆಂದು ತಿಳಿದುಕೋ ಇವೆರಡು ಮಂತ್ರಕ್ಕಿಂತ ಶ್ರೇಷ್ಠವಾದ ಬೇರೇ ಮಂತ್ರವು ಈ ಲೋಕದಲ್ಲಿ ಎಲ್ಲೂ ಇಲ್ಲವೆಂದು ತಿಳಿ.

೧೦-೧೧ ಎಲೈ ಮಾರ್ಕಂಡೇಯ ಮಹರ್ಷಿಯೇ, ಪುಣ್ಯಕರವೂ, ಪರಮ ಪವಿತ್ರವೂ ಮಂಗಳದಾಯಕವೂ, ಪಾಪಪ್ರಣಾಶಕವೂ ಆದ ಆ ಎರಡು ದ್ವಾದಶಾಷ್ಟಾಕ್ಷರ ಮಹಾಮಂತ್ರಗಳನ್ನು ದಯ ನನಗೆ ದಯಮಾಡಿ ಉಪದೇಶಮಾಡು. ಮಾರ್ಕಂಡೇಯನು ವಜ್ರಮಹಾರಾಜನಿಗೆ ದ್ವಾದಶಾಷ್ಟಾಕ್ಷರಗಳನ್ನು ಉಪದೇಶಿಸುವನು, ಕೇಳಯ್ಯಾ, ವಜ್ರಮಹಾರಾಜ, ಓಂ ನಮೋ ಭಗವತೇ ವಾಸುದೇವಾಯ, ಎಂಬ ಹನ್ನೆರಡಕ್ಷರವುಳ್ಳ ಮಂತ್ರಕ್ಕೆ ದ್ವಾದಶಾಕ್ಷರ ಮಂತ್ರವೆಂದು ಹೆಸರು ಓಂ ನಮೋ ನಾರಾಯಣಾಯ ಎಂಬ ಎಂಟಕ್ಷರದ ಮಂತ್ರಕ್ಕೆ ಅಷ್ಟಾಕ್ಷರ ಮಂತ್ರವೆಂದು ಹೆಸರು ಇದರ ಅರ್ಥವೇನೆಂದರೆ --ಪ್ರಣವಸ್ವರೂಪನೂ ಭಗವಂತನೂ ಆದ ವಾಸುದೇವಸ್ವಾಮಿಗೆ ನಮಸ್ಕಾರಮಾಡುತ್ತೇನೆ ಪ್ರಣವರೂಪಿಯಾದ ನಾರಾಯಣನಿಗೆ ನಮಸ್ಕಾರಮಾಡುತ್ತೇನೆ

**ಯಥಾ ತಿಥಿಸ್ತೇ ಶ್ರವಣೇನ ಯುಕ್ತಾ**
**ಮಾಘಸ್ಯ ಮಾಸಸ್ಯ ತಥಾ ತವೋಕ್ತಾ ।**
**ಕಾರ್ಯಾ ತಥೇಯಂ ನೃಪತೇ ವಿಶೇಷಾ-**
**ದ್ಯೋಗೇ ಪವಿತ್ರೇ ಸರಿತೋರ್ದ್ವಯಸ್ಯ** ॥ ೧೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ತಿಲದ್ವಾದಶೀ ಪ್ರಶಂಸಾವರ್ಣನಂ ನಾಮ ತ್ರಿಷಷ್ಟ್ಯಧಿಕ ಶತತಮೋಽಧ್ಯಾಯಃ.**

---

೧೨-೧೩ ಎಲೈ ವಜ್ರಮಹಾರಾಜನೇ, ನಿನಗೆ ಮಂತ್ರೋತ್ತಮಗಳೆನಿಸಿದ ಪರಮಶ್ರೇಷ್ಠಗಳಾದ, ತಪಸ್ವಿಗಳು ನಿತ್ಯವೂ ಜಪಿಸಲು ಯೋಗ್ಯವಾದ, ಅತ್ಯಂತರಹಸ್ಯವಾದ ಈ ಎರಡು ಮಹಾಮಂತ್ರಗಳನ್ನು ಉಪದೇಶಿಸಿರುತ್ತೇನೆ. ಮಾಘಮಾಸದಲ್ಲಿ ಶ್ರವಣನಕ್ಷತ್ರದಿಂದ ಕೂಡಿದ ದ್ವಾದಶಿಯು ಎಂತಹ ಪವಿತ್ರವಾದುದೋ ಶ್ರವಣ ದ್ವಾದಶೀಯೋಗದಲ್ಲಿ ಸಂಗಮಸ್ನಾನವು ಎಂತಹ ಪುಣ್ಯಪ್ರದವಾದುದೋ ಅದೇರೀತಿ ಈ ಎರಡು ಮಂತ್ರಗಳೂ ಸಹ ಅವಕ್ಕೆ ಸಮವಾದ ಯೋಗ್ಯತೆಯುಳ್ಳವುಗಳು ಎಂದು ವಜ್ರರಾಜನಿಗೆ ಮಾರ್ಕಂಡೇಯನು ಹೇಳಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ತಿಲದ್ವಾದಶೀಪ್ರಶಂಸಾ ವರ್ಣನಯೆಂಬ ಹೆಸರಿನ ಒಂದುನೂರ ಅರವತ್ತಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಚತುಃಷಷ್ಟ್ಯಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।**
**ಮಾಗಧೇಷು ತು ಯದ್ವೃತ್ತಂ ತಚ್ಛೃಣುಷ್ವ ನರಾಧಿಪ ॥ ೧ ॥**

**ಬಭೂವ ಮಾಗಧೋ ರಾಜಾ ಚಂಡವೇಗ ಇತಿಶ್ರುತಃ ।**
**ತಸ್ಯಾಸೀದ್ರೂಪಸಂಪನ್ನಾ ಭಾರ್ಯಾ ನಯನಸುಂದರೀ ॥ ೨ ॥**

**ಸರ್ವಧರ್ಮಾನ್ಪರಿತ್ಯಜ್ಯ ಪ್ರತಿಸಂವತ್ಸರಂ ತು ಸಾ ।**
**ತಿಲಾನ್ಹೋಮಯತೇವಿಪ್ರೈರ್ಜುಹೋತಿ ಚ ತಥಾ ಸ್ವಯಂ ॥ ೩ ॥**

**ಶ್ರವಣದ್ವಾದಶೀಯೋಗೇ ಮಾಘೇ ಮಾಸಿ ಹುತಾಶನೇ ।**
**ದೇವಸ್ಯ ಚೈವ ನೈವೇದ್ಯಂ ಕರೋತಿ ತಿಲಮೋದಕೈಃ ॥ ೪ ॥**

---

### ನೂರ ಅರವತ್ತನಾಲ್ಕನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರಮಹಾರಾಜನೇ ಕೇಳು ಈ ವಿಷಯದಲ್ಲಿ ಹಿಂದೆ ಮಗಧದೇಶದಲ್ಲಿ ನಡೆದ ಒಂದಾನೊಂದು ಇತಿಹಾಸವನ್ನು ಪೂರ್ವಿಕರು ಹೇಳುತ್ತಲಿರುವರು ಆ ಕಥೆಯನ್ನು ಈಗ ನಿನಗೆ ಹೇಳುವೆನು, ಕೇಳು

೨-೪ ಮಗಧದೇಶದಲ್ಲಿ ಚಂಡವೇಗನೆಂಬ ರಾಜನಿದ್ದನು ಆತನಿಗೆ ಪರಮ ಸೌಂದರ್ಯವತಿಯಾದ ನಯನಸುಂದರಿಯೆಂಬ ಹೆಂಡತಿಯಿದ್ದಳು ಆಕೆಯು ಸಕಲ ಧರ್ಮಗಳನ್ನೂ ಬಿಟ್ಟವಳಾಗಿ ಪ್ರತಿ ವರ್ಷವೂ ಮಾಘಮಾಸದಲ್ಲಿ ದ್ವಾದಶೀಶ್ರವಣ ನಕ್ಷತ್ರದೊಡನೆ ಸೇರಿದ ಸಮಯದಲ್ಲಿ ಬ್ರಾಹ್ಮಣರನ್ನು ಕರೆಯಿಸಿ ಮಹಾವಿಷ್ಣುಪ್ರೀತಿ

**ಅರ್ಚನೇನ ಚ ವಾಸೋಭಿಃ ಪೂಜಯತ್ಯಪಿ ಮಾಧವಂ ।**
**ಮಹಾರಂಜಿತರಕ್ತಾನಿ ವಾಸಾಂಸಿ ವಿವಿಧಾನಿ ಚ　　॥ ೫ ॥**

**ಬ್ರಾಹ್ಮಣೀನಾಂ ಚ ಗೇಹೇಷು ವಿಸರ್ಜಯತಿ ತತ್ಪರಾ ।**
**ಮಹಾವರ್ತಿಪ್ರದಾನಂ ಚ ವಿಧತ್ತೇ ಕೇಶವಾಲಯೇ　　॥ ೬ ॥**

**ತಾಂ ಕದಾಚಿತ್ಸುಖಾಸೀನಾಂ ಬ್ರಾಹ್ಮಣೀಂ ತು ವಸಂತಿಕಾ ।**
**ಪಪ್ರಚ್ಛ ಸಖಿಭಾವೇನ ರಹಸ್ಯಂ ನಿರ್ಜನೇಸ್ಥಿತಾ　　॥ ೭ ॥**

**॥ ವಸಂತಿಕೋವಾಚ ॥**

**ಸರ್ವಧರ್ಮಾನ್ಪರಿತ್ಯಜ್ಯ ಮಾಘೇ ಮಾಸಿ ಶುಭಾನನೇ ।**
**ದ್ವಾದಶ್ಯಾಂ ಕೃಷ್ಣಪಕ್ಷಸ್ಯ ಕಸ್ಮಾದರ್ಚಯಸೇ ಹರಿಂ　　॥ ೮ ॥**

**ಕಸ್ಮಾತ್ತಥಾ ಬಹುತಿಲಂ ಹಾವಯಸ್ಯನಲೇ ತಥಾ ।**
**ಏತನ್ಮೇ ಸಂಶಯಂ ಛಿಂಧಿ ರಹಸ್ಯಂ ಚೇನ್ನ ತೇ ಶುಭೇ　　॥ ೯ ॥**

ಯಾಗಿ ತಿಲಹೋಮವನ್ನು ಮಾಡಿಸುತ್ತಿದ್ದಳಲ್ಲದ ತಾನೂ ಕೂಡ ಭಕ್ತಿಯಿಂದ ಅಗ್ನಿಯಲ್ಲಿ ತಿಲಹೋಮವನ್ನು ಮಾಡುತ್ತಿದ್ದಳು ಮತ್ತು ಹೋಮಾನಂತರಪಲ್ಲಿ ಎಳ್ಳಿನ ಚಿಗಳಿ ಮುಂತಾದ ಎಳ್ಳಿನ ತಿಂಡಿಗಳನ್ನು ಮಾಡಿಸಿ ದೇವರಿಗೆ ನೈವೇದ್ಯಮಾಡಿ ಬ್ರಾಹ್ಮಣರಿಗೆ ವಸ್ತ್ರದಾನ ತಿಲದಾನಗಳನ್ನೂ ಸುವಾಸಿನಿಯರಿಗೆ, ಸೀರೆ ಕುಪ್ಪಸಗಳನ್ನೂ, ವಿಶೇಷವಾಗಿ ದಾನಮಾಡುತ್ತಿದ್ದಳು ಮತ್ತು ದೇವಸ್ಥಾನಗಳಲ್ಲಿ ಎಳ್ಳಿನ ದೀಪಗಳನ್ನು ಹಚ್ಚಿಸುತ್ತಿದ್ದಳು ಹೀಗಿರಲು ಆಕೆಯು ಒಂದು ದಿನ ಸುಖದಿಂದ ಕುಳಿತಿದ್ದ ಸಮಯದಲ್ಲಿ ವಸಂತಿಕೆ ಎಂಬ ಆಕೆಯ ಸಖಿಯು ಸಮೀಪಕ್ಕೆ ಬಂದು ಯಾರೂ ಇಲ್ಲದ ಸಮಯದಲ್ಲಿ ಒಂದು ರಹಸ್ಯವಾದ ಸಂಗತಿಯನ್ನು ಪ್ರಶ್ನೆಮಾಡಿದಳು ಅದೇನೆಂದರೆ !—

೮-೯ ಆ ವಸಂತಿಕೆಯು ಕೇಳುತ್ತಾಳೆ ಎಲೌ ಸಖಿಯೇ, ನೀನು ಸಕಲ ಧರ್ಮಗಳನ್ನೂ ಬಿಟ್ಟು ಮಾಘ ಬಹುಳ ದ್ವಾದಶೀ ದಿವಸ ಮಹಾವಿಷ್ಣುವನ್ನೇಕೆ ಪೂಜಿಸುತ್ತೀಯೇ? ಮತ್ತು ಆ ದಿವಸ ಬಹಳವಾಗಿ ಅಗ್ನಿಯಲ್ಲಿ ತಿಲಹೋಮ ಮಾಡಲು ಕಾರಣವೇನು? ಈ ವಿಷಯವು ರಹಸ್ಯವಲ್ಲದೆ ಇದ್ದರೆ ನನಗೆ ತಿಳಿಸಿ ನನ್ನ ಸಂದೇಹವನ್ನು ಪರಿಹರಿಸಬೇಕೆಂದು ಪ್ರಶ್ನೆಮಾಡಿದಳು

॥ ನಯನಸುಂದರ್ಯುವಾಚ ॥

ರಹಸ್ಯಮೇತತ್ಪರಮಂ ನ ರಹಸ್ಯಂ ತಥಾ ತ್ವಯಿ ।
ತ್ವಂ ಮೇ ಸಖೀಶ್ವರೀ ಪ್ರಾಣಸ್ತ್ವಂ ಮೇ ಪ್ರಾಣಧನೇಶ್ವರೀ ॥ ೧೦ ॥

ಅಸ್ತಿ ವೈತಸ್ತಿಕೋ ನಾಮ ದೇಶಃ ಪರಮಧಾರ್ಮಿಕಃ ।
ತತ್ರ ಗ್ರಾಮವರೇ ಚಾಸೀದ್ವಸತಿರ್ಮೇ ಸುಶೋಭನಾ ॥ ೧೧ ॥

ಚಂಡವೇಗಶ್ಚ ವಿಪ್ರೋಽಭೂದ್ಭರ್ತಾ ಮೇ ಪೂರ್ವಜನ್ಮನಿ ।
ನಾಸ್ತಿಕೋ ನಿರನುಕ್ರೋಶಸ್ತರ್ಕಶಾಸ್ತ್ರರತಃ ಸದಾ ॥ ೧೨ ॥

ತತ್ರೈವ ವಿಷಯೇ ರಾಜಾ ಬಭೂವ ದಧಿವಾಹನಃ ।
ತಸ್ಯ ಭಾರ್ಯಾ ವಯಸ್ಯಾ ಮೇ ಬಭೂವ ಕಮಲಾ ಶುಭಾ ॥ ೧೩ ॥

ಸಾ ಕದಾಚಿನ್ಮಾಮುವಾಚ ರಹಸ್ಯಂ ವರವರ್ಣಿನೀ ।
ನಾರೀ ಭರ್ತೃಕೃತಾದರ್ಥಂ ಪುಣ್ಯಂ ಪ್ರಾಪ್ನೋತಿ ಸುಂದರೀ ॥ ೧೪ ॥

ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಿತಂ ।
ಪತಿಂ ಶುಶ್ರೂಷತೇ ಯಾ ತು ತೇನ ಸ್ವರ್ಗೇ ಮಹೀಯತೇ ॥ ೧೫ ॥

---

೧೦-೨೯ ನಯನಸುಂದರಿಯು ಹೇಳುತ್ತಾಳೆ —ಎಲೌ ಸಖಿಯೇ, ನೀನು ಕೇಳಿದ ಪ್ರಶ್ನೆಯು ತುಂಬಾ ರಹಸ್ಯವಾದುದಾದರೂ ನಿನ್ನಲ್ಲಿ ಈ ಗುಟ್ಟನ್ನು ಬಿಚ್ಚಿಟ್ಟು ಹೇಳುತ್ತೇನೆ ಕೇಳು ನೀನು ನನ್ನ ಸಖಿಯರಲ್ಲಿ ಅತ್ಯುತ್ತಮಳು ಮತ್ತು ನೀನು ನನ್ನ ಪ್ರಾಣಧನಗಳಿಗೂ ಸಹ ಈಶ್ವರಿಯಾಗಿರುವುದರಿಂದ ಈ ಗುಟ್ಟಾದ ಸಂಗತಿಯನ್ನು ನಿನ್ನೊಡನೆ ಮರೆಮಾಚದ ಹೇಳುತ್ತೇನೆ —ಬಹು ಜನ ಧಾರ್ಮಿಕರು ವಾಸವಾಗಿರುವ ವೈತಸ್ತಿಕವೆಂಬ ದೇಶವಿದೆ ಆ ಊರಿನಲ್ಲಿ ನಾನು ನನ್ನ ಹಿಂದಿನ ಜನ್ಮದಲ್ಲಿ ಬ್ರಾಹ್ಮಣ ಜನ್ಮದಲ್ಲಿ ಜನಿಸಿದ್ದೆನು ಈಗ ನನ್ನ ಗಂಡನಾಗಿರುವ ಚಂಡವೇಗನೇ ಹಿಂದಿನ ಜನ್ಮದಲ್ಲೂ ಬ್ರಾಹ್ಮಣನಾಗಿ ಹುಟ್ಟಿ ನನಗೆ ಗಂಡನಾಗಿದ್ದನು ಆದರೆ ಅವನು ಬಹಳ ನಾಸ್ತಿಕನಾಗಿಯೂ, ಕ್ರೂರನಾಗಿಯೂ, ಜಗಳಗಂಟನಾಗಿಯೂ ಇದ್ದನು ಆ ದೇಶದಲ್ಲಿ ದಧಿವಾಹನನೆಂಬ ರಾಜನಿದ್ದನು ಆತನ ಹೆಂಡತಿಯಾದ ಕಮಲೆಯೆಂಬ ಹೆಸರಿನ ಮಹಾರಾಣಿಯು ನನಗೆ ಪ್ರಾಣ ಸಖಿಯಾಗಿದ್ದಳು ಆ ನನ್ನ ಸಖಿಯು

ಕರ್ತವ್ಯಂ ಯೋಷಿತಾ ಪುಣ್ಯಂ ಪೃಥಗ್ವಾಪಿ ತದಿಚ್ಛಯಾ ।
ಪತಿಸ್ತೇ ನಾಸ್ತಿಕೋ ಭದ್ರೇ ಕಿಂಚಿನ್ನಾಚರತೇ ಶುಭಂ ॥ ೧೬ ॥

ನ ಚಾಚರಸಿ ಧರ್ಮಂ ತ್ವಂ ತಥಾ ಚ ತದನುಜ್ಞಯಾ ।
ಕಾ ಗತಿಃ ಪರಲೋಕೇ ತೇ ಭವಿಷ್ಯತಿ ಶುಭಾನನೇ ॥ ೧೭ ॥

ಇಹ ಯತ್ಕ್ರಿಯತೇ ಕರ್ಮ ಪ್ರೇತ್ಯ ತತ್ರೋಪಭುಜ್ಯತೇ ।
ಯೇನೋಪ್ತಂ ಫಲಕಾಲೇ ತು ಸ ಏವಾಶ್ನಾತಿ ಭಾಮಿನಿ ॥ ೧೮ ॥

ಮಾನುಷ್ಯಂ ದುರ್ಲಭಂ ಪ್ರಾಪ್ಯ ವಿದ್ಯುತ್ಸಂಪಾತಚಂಚಲಂ ।
ನಾಚರಂತಿ ಶುಭಂ ಯೇ ತು ತೇಷಾಂ ಜನ್ಮ ನಿರರ್ಥಕಂ ॥ ೧೯ ॥

ಕದಾಚಿದಪಿ ವಾಮೋರು ಯೋನಿಷ್ವಥ ಪರಿಭ್ರಮನ್ ।
ಮಾನುಷ್ಯಂ ನಾಮ ಜಾಯೇತ ಯತ್ರಾಯತ್ತಂ ಶುಭಾಶುಭಂ ॥ ೨೦ ॥

ಚಂಡಾಲತ್ವೇಽಪಿ ಮಾನುಷ್ಯಂ ಸರ್ವಥಾ ಸಖಿ ದುರ್ಲಭಂ ।
ಆತ್ಮಾ ಶಕ್ಯಸ್ತಯಾ ತ್ರಾತುಂ ಮಾನುಷ್ಯಾನ್ನಾನ ತಃ ಶುಭೇ ॥ ೨೧ ॥

ಒಂದು ದಿನ ರಹಸ್ಯವಾಗಿ ನನ್ನನ್ನು ನೋಡಿ ಒಂದು ಮಾತನ್ನು ಹೇಳಿದಳು ಎಲೌ ಪ್ರಿಯ ಸಖಿಯೇ ! ಹೆಂಗಸಾದವಳು ಗಂಡನು ಮಾಡಿದ ಪುಣ್ಯ ಕಾರ್ಯಗಳಲ್ಲಿ ಅರ್ಧ ಭಾಗ ಪುಣ್ಯವನ್ನು ಪಡೆಯುತ್ತಾಳೆ. ಹೆಂಗಸಾದವಳಿಗೆ ಪತಿಶುಶ್ರೂಷೆಯೇ ಪರಮ ಪುಣ್ಯಪ್ರದವಾದ ವ್ರತವೆಂದು ತಿಳಿ. ಪತಿ ಶುಶ್ರೂಷೆಗಿಂತ ಬೇರೆಯೊಂದು ಯಜ್ಞವಾಗಲೀ ಬೇರೊಂದು ವ್ರತವಾಗಲೀ ಮತ್ತೊಂದು ಉಪವಾಸವಾಗಲೀ ಹೆಂಗಸಿಗೆ ಇಲ್ಲವೇ ಇಲ್ಲ ಯಾವ ಹೆಂಗಸು ಪತಿಭಕ್ತಿಯಿಂದ ಪತಿಸೇವೆಮಾಡುತ್ತಾ ಪತಿಯೇ ಸಕಲ ವ್ರತವೆಂದು ತಿಳಿದಿರುವಳೋ ಆ ಮಹಾಪತಿವ್ರತೆಯು ಗಂಡನೊಡನ ಸ್ವರ್ಗ ಲೋಕದಲ್ಲಿಯೂ ಸಹ ಸುಖವನ್ನನುಭವಿಸುತ್ತಾಳೆ ಒಂದು ವೇಳೆ ಹೆಂಗಸಾದವಳು ಏನಾದರೊಂದು ಪುಣ್ಯ ಕಾರ್ಯಗಳನ್ನು ಮಾಡಬೇಕೆನ್ನುವುದಾದರೆ ಪತಿಯ ಅಪ್ಪಣೆಯನ್ನೇ ಪಡೆದು ಮಾಡಬೇಕಾಗಿದೆ ಇಂತಿರಲು ನಿನ್ನ ಗಂಡನು ಮಹಾ ನಾಸ್ತಿಕನಾಗಿ ಯಾವ ಪುಣ್ಯ (ಶುಭ) ಕರ್ಮಗಳನ್ನೂ ಮಾಡುವುದಿಲ್ಲ ನೀನಾದರೂ ಅವನ ಅಪ್ಪಣೆಯನ್ನು ಪಡೆದು ಯಾವುದೊಂದು ಧರ್ಮ ಕಾರ್ಯವನ್ನೂ ಮಾಡದೆ ಹೀಗೆ ಇದ್ದರೆ ಹೇಗೆ ! ನಿನಗೆ ಪರಲೋಕದಲ್ಲಿ ಸದ್ಗತಿಯು ಹೇಗೆ ಉಂಟಾಗುತ್ತದೆ ? ಈ

ತವ್ಯೋಪರಿ ತಥಾ ಜಾತಾ ಸಖೀಭಾವೇನ ಮೇ ಕೃಪಾ ।
ಕದರ್ಯಸ್ಯಾಸ್ಯ ಭಾರ್ಯಾ ತ್ವಂ ಸುಸ್ವಭಾವಾ ಪತಿವ್ರತಾ ॥ ೨೨ ॥

ತತ್ರ ತೇನುಗ್ರಹಂ ಕಿಂಚಿತ್ಕರಿಷ್ಯಾಮಿ ನಿಬೋಧ ತತ್ ।
ಹರಸ್ಯ ದಯಿತಾ ಭಾರ್ಯಾ ಶೈಲೇಂದ್ರತನಯಾ ಉಮಾ ॥ ೨೩ ॥

ವಿಸ್ತಾರಿತಮಹಾಕೂಲಾ ಸಾ ವಿತಸ್ತಾ ಮಹಾನದೀ ।
ಅವೃತ್ತಿಕರ್ಷಿತಃ ಪಾಪಂ ಕೃತ್ತ್ವೈವ ಋತುಪಂಚಕಂ ॥ ೨೪ ॥

ಸ್ನಾನೇನೈಕೇನ ಸಕಲಂ ಶೈಶಿರೇಣ ವ್ಯಪೋಹತಿ ।
ಯಸ್ಯಾಂಯಸ್ಯಾಂ ತಿಥೌ ಸ್ನಾತಃ ಸ್ವರ್ಗಮಾಪ್ನೋತ್ಯಸಂಶಯಂ ॥ ೨೫ ॥

ತಸ್ಯಾಂ ಸಂವತ್ಸರಂ ಸ್ನಾತ್ವಾ ಮೋಕ್ಷೋಪಾಯಂ ತು ವಿಂದತಿ ।
ಯಾ ಚ ಸುಸ್ವಾದುಸಲಿಲಾ ಯಾ ಚ ಪಾಪಕ್ಷಯಂಕರೀ ॥ ೨೬ ॥

ಜನ್ಮದಲ್ಲಿ ಏನಾದರೊಂದು ಪುಣ್ಯ ಕಾರ್ಯವನ್ನು ಮಾಡಿದ್ದರೆ ಮಾತ್ರವೇ ಅದು ನಮ್ಮೊಡನೆ ಪರಲೋಕಕ್ಕೆ ಬಂದು ನಮಗೆ ಉತ್ತಮ ಫಲವನ್ನು ಕೊಡುವುದಲ್ಲದೆ ಬೇರೆಯಿಲ್ಲ. ಯಾರು ಕಾಲದಲ್ಲಿ ಬೀಜವನ್ನು ನೋಡಿ ಬಿತ್ತುವರೋ ಅದು ಫಲಕ್ಕೆ ಬಂದಾಗ ಆ ಫಲವನ್ನು ಅವರು ಅನುಭವಿಸುತ್ತಾರೆ. ಬೀಜವೇ ಇಲ್ಲದೆ ಗಿಡವಾಗಿ ಫಲವಾಗುವುದುಂಟೇ ! ಈ ಮನುಷ್ಯ ಜನ್ಮವು ಮಿಂಚಿನಂತೆ ಚಂಚಲ ಗತಿಯುಳ್ಳದು. ಇಂತಹ ದುರ್ಲಭವಾದ ಮಾನವ ಜನ್ಮವು ಬಂದಿರುವಾಗ ಯಾರು ಧರ್ಮ ಕಾರ್ಯಗಳನ್ನು ಮಾಡದೇ ಹೋಗುವರೋ ಅವರ ಜನ್ಮ ನಿರರ್ಥಕ (ವ್ಯರ್ಥ) ವೆಂದು ತಿಳಿ. ಎಲೌ ಪ್ರಿಯ ಸಖಿಯೇ ! ಮತ್ತು ಕೇಳು. ಎಷ್ಟೋ ವಿಧವಾದ ಎಂಭತ್ತುನಾಲ್ಕು ಲಕ್ಷ ಜನ್ಮಗಳಲ್ಲಿ ವಿವಿಧ ಯೋನಿಗಳಲ್ಲಿ ಹುಟ್ಟಿಹುಟ್ಟಿ ಸತ್ತು ಸತ್ತು ಎಲ್ಲೋ ಸ್ವಲ್ಪ ಪುಣ್ಯದಿಂದ ಮನುಷ್ಯ ಜನ್ಮವು ಪ್ರಾಪ್ತವಾಗಬೇಕಾಗಿದೆ. ಇಂತಹ ಮನುಷ್ಯ ಜನ್ಮದಲ್ಲಿ ಚಂಡಾಲ ಜಾತಿಯಲ್ಲಿ ಜನ್ಮ ಪ್ರಾಪ್ತಿಯಾಗುವುದೂ ಸಹ ಕಷ್ಟವೆಂದು ತಿಳಿಮುಕೋ ! ಮನುಷ್ಯಜನ್ಮದಲ್ಲಿ ಹುಟ್ಟಿ ಆತ್ಮೋದ್ಧಾರಮಾಡಿಕೊಳ್ಳದೇ ಹೋದರೆ ಇನ್ಯಾವ ಜನ್ಮದಲ್ಲೂ ಆಗುವುದಿಲ್ಲವೆಂದೇ ತಿಳಿ. ಎಲೌ ವಯಸ್ಯೆಯೇ ! ನಿನ್ನ ಮೇಲೆ ಏನೋ ಒಂದು ವಿಧವಾದ ಕೃಪ ನನಗೆ ಹುಟ್ಟಿದುದ

ತಸ್ಯಾಸ್ತೀರೇ ಮಯಾ ನಿತ್ಯಂ ಪ್ರತಿಸಂವತ್ಸರಂ ಶುಭೇ ।
ಉಪೋಷ್ಯ ಮಾಘಕೃಷ್ಣಸ್ಯ ದ್ವಾದಶ್ಯಾಂ ಶ್ರವಣೇ ತಥಾ ॥ ೨೭ ॥

ಪೂಜಿತೋ ಭಗವಾನ್ವಿಷ್ಣು ರ್ಬ್ರಾಹ್ಮಣಾಶ್ಚ ಹುತಾಶನಃ ।
ತಿಲೈಸ್ತಸ್ಮಾತ್ತು ತೇ ಖ್ಯಾತಂ ಬ್ರಾಹ್ಮಮೇತದ್ವ್ರತಂ ಮಮ ॥ ೨೮ ॥

ತಸ್ಮಾತ್ಸ್ಕನ್ನಂ ತಿಲಂ ಯಚ್ಚ ಯದಗ್ನೌ ಪತಿತಂ ನ ಚ ।
ತತಃ ಪುಣ್ಯಫಲಂ ಸರ್ವಂ ತ್ವಮಾಪ್ನುಹಿ ವರಾನನೇ ॥ ೨೯ ॥

ಇತ್ಯೇವಮುಕ್ತಯಾ ಗತ್ವಾ ಭರ್ತಾ ಪೃಷ್ಟಸ್ತದಾ ಮಯಾ ।
ಹಸತಾ ತೇನ ಚಾಪ್ಯುಕ್ತಾ ಗಚ್ಛ ಗೃಹ್ಣೀಷ್ವ ತತ್ಫಲಂ ॥ ೩೦ ॥

---

ರಿಂದ ಇದನ್ನೆಲ್ಲಾ ನಿನಗೆ ನಾನು ಹೇಳುತ್ತಲಿದ್ದೇನೆ ನಿನ್ನ ಗಂಡನು ಕ್ಷುದ್ರನೂ, ಕೃಪಣನೂ ಆಗಿದ್ದರೂ, ನೀನು ಒಳ್ಳೆಯ ಸ್ವಭಾವವನ್ನು ಹೊಂದಿ ಪತಿವ್ರತೆಯಾಗಿದ್ದೀಯೇ ! ನಿನಗೆ ನಾನೊಂದು ಅನುಗ್ರಹವನ್ನು ಮಾಡಬೇಕೆಂದಿದ್ದೇನೆ ಅದನ್ನು ಕೇಳಿ ಅದರಂತೆ ಮಾಡು. ನಿನಗೆ ಒಳ್ಳೆಯದಾಗುವುದು, ಅದೇನೆನ್ನುವಿಯೋ ಕೇಳು ! ಹಿಮಗಿರಿರಾಜನ ಮಗಳಾದ ಉಮಾದೇವಿಯು ವಿಸ್ತೃತವಾದ ವಡಗರೆರಡರಿಂದೂಡ ಗೂಡಿದವಳಾಗಿ ವಿತಸ್ತಯೆಂಬ ಹೆಸರಿನ ನದೀರೂಪದಿಂದ ಪ್ರವಹಿಸುತ್ತಲಿದ್ದಾಳೆ ಆ ವಿತಸ್ತಾನದಿಯಲ್ಲಿ ಯಾರು ಸ್ನಾನಮಾಡುವರೋ ಅವರು ಐದು ಋತುಗಳ ಕಾಲ ಮಾಡಿದ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಯಾವ ನದಿಯ ನೀರು ಬಹಳ ರುಚಿಕರವಾಗಿರುವುದೋ, ಯಾವ ನದಿಯ ಸ್ನಾನದಿಂದ ಸಕಲ ಪಾಪಗಳೂ ನಾಶವಾಗುವುವೋ, ಆ ನದೀ ತೀರದಲ್ಲಿ ನಾನು ಪ್ರತಿ ವರ್ಷವೂ ಮಾಘ ಬಹುಳ ದ್ವಾದಶೀ ದಿವಸ ಶ್ರವಣ ನಕ್ಷತ್ರ ಯೋಗವಿದ್ದ ಕಾಲದಲ್ಲಿ ಉಪವಾಸವಾಗಿದ್ದು ವಿಷ್ಣುವನ್ನೂ, ಬ್ರಾಹ್ಮಣರನ್ನೂ, ಅಗ್ನಿಯನ್ನೂ ಪೂಜಿಸಿ ತಿಲಹೋಮಗಳನ್ನು ಮಾಡಿಸುತ್ತಲಿದ್ದೇನೆ ಈ ತಿಲಗಳು ಬ್ರಾಹ್ಮಣರ ಹಸ್ತದಿಂದ ಯಾರ ಕ್ಷೇಮಾರ್ಥವಾಗಿ ಅಗ್ನಿಯಲ್ಲಿ ಹೋಮಮಾಡಲ್ಪಡುವುವೋ ಅದರಿಂದ ಮಹಾಪುಣ್ಯವುಂಟಾಗುವುದು. ಈ ಕೆಲಸವನ್ನು ನೀನೂ ಸಹ ಪತಿಯಾಜ್ಞೆಯಿಂದ ಮಾಡಿ ಪುಣ್ಯವನ್ನು ಸಂಪಾದಿಸು ನಿನಗೆ ಒಳ್ಳೆಯದಾಗಲಿ.

ಸ್ವಯಂ ಕೃತ್ವಾ ಶುಭಂ ಕರ್ಮ ಕಮಲಾ ಸಾ ಸಖೀ ಮಮ ।
ಸಹ ಭರ್ತ್ರಾ ವಿಶಾಲಾಕ್ಷಿ ವಿಷ್ಣುಲೋಕಮಿತೋ ಗತಾ ॥ ೩೧ ॥
ತಲ್ಲೋಕಮಕ್ಷಯಂ ತಸ್ಯಾಃ ಶ್ರುತಂ ವೈವಸ್ವತಾನ್ಮಯಾ ।
ತಸ್ಮಾದ್ದೃಷ್ಟಫಲಂ ಭದ್ರೇ ಕರೋಮಿ ತಿಲದ್ವಾದಶೀಂ ॥ ೩೨ ॥
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ಪೃಚ್ಛಸಿ ಸುಂದರಿ ।

॥ ಮಾರ್ಕಂಡೇಯ ಉವಾಚ ॥

ಏತಚ್ಛ್ರುತ್ವಾ ಶುಭಂ ವಾಕ್ಯಂ ಬ್ರಾಹ್ಮಣ್ಯಪಿ ವಸಂತಿಕಾ ॥ ೩೩ ॥
ಶ್ರವಣದ್ವಾದಶೀಯೋಗೇ ಪೂಜಯಾಮಾಸ ಕೇಶವಂ ।
ಮಾಘಕೃಷ್ಣೇ ಮಹಾಭಾಗ ತಿಲೈರ್ನಿತ್ಯಮತಂದ್ರಿತಾ ॥ ೩೪ ॥
ಪೂಜಯಿತ್ವಾಽಪಿ ಸಾ ದೇವಂ ಶ್ವೇತದ್ವೀಪಮಿತೋ ಗತಾ ।
ಸಾಪಿ ರಾಜ್ಞೀ ಮಹಾಭಾಗಾ ತಥಾ ನಯನಸುಂದರೀ ॥ ೩೫ ॥
ಅಮಲಂ ಸ್ಥಾನಮಾಸಾದ್ಯ ವಿರರಾಜ ಶಶಿಪ್ರಭಾ ।
ತಸ್ಮಾತ್ಸರ್ವಪ್ರಯತ್ನೇನ ತದಾ ಪೂಜ್ಯೋ ಜನಾರ್ದನಃ ॥ ೩೬ ॥

---

೩೦-೩೨ ಈರೀತಿ ನನ್ನ ಸಖಿಯಾದ ಆ ಮಹಾರಾಣಿಯು ಹೇಳಿದ ಮಾತನ್ನು ಕೇಳಿ ನಾನು ನನ್ನ ಗಂಡನೊಡನೆ ಈ ವೃತ್ತಾಂತವನ್ನೆಲ್ಲಾ ಹೇಳಿ ಆತನ ಅಪ್ಪಣೆಯಂತೆ ಆ ವ್ರತವನ್ನು ಮಾಡಿದನು ಮಹಾರಾಣಿ ಕಮಲಾದೇವಿಯಾದರೋ ಆ ವ್ರತವನ್ನು ಮಾಡಿ ಗಂಡನೊಡನೆ ವಿಮಾನವನ್ನೇರಿ ವಿಷ್ಣುಲೋಕಕ್ಕೆ ಹೋದು ದನ್ನು ನೋಡಿದನು ಮತ್ತು ಆಕೆಯು ಅಲ್ಲಿ ಅಕ್ಷಯವಾದ ಪುಣ್ಯ ಫಲವನ್ನು ಪಡೆದ ಳೆಂದು ವೈವಸ್ವತ ಮನುವೂ ನನಗೆ ಹೇಳಿದನು ಆದ್ದರಿಂದಲೌ ಸಖಿಯೇ! ನಾನು ಕಣ್ಣಿನಲ್ಲಿ ಕಂಡಂತೆ ಮಹಾ ಫಲವನ್ನು ಕೊಟ್ಟ ಈ ತಿಲದ್ವಾದಶೀವ್ರತವನ್ನು ಹಿಂದಿನ ಜನ್ಮ ಸಂಸ್ಕಾರದಿಂದ ಈಗ ಮಾಡುತ್ತಲಿದ್ದೇನೆ ಎಲೌ ಗೆಳತಿ! ನೀನು ಕೇಳಿದ ಪ್ರಶ್ನೆಗೋಸ್ಕರ ಇಷ್ಟು ವೃತ್ತಾಂತವನ್ನು ನಿನ್ನೊಡನೆ ಹೇಳಬೇಕಾಗಿ ಬಂತು ಕೇಳಿದೆಯೋ!

೩೩-೪೦. ಮಾರ್ಕಂಡೇಯನು ಹೇಳುತ್ತಾನೆ —ಈರೀತಿ ಹೇಳಿದ ಮಹಾ ರಾಣಿಯ ಮಾತನ್ನು ಕೇಳಿ ಆ ಬ್ರಾಹ್ಮಣ ಸ್ತ್ರೀಯು ಮಾಘ ಬಹುಳ ದ್ವಾದಶೀ ಶ್ರವಣ ಯೋಗದಲ್ಲಿ ತಿಲಹೋಮಗಳನ್ನು ಮಾಡಿ ಮಹಾವಿಷ್ಣುವನ್ನು ಭಕ್ತಿಯಿಂದ ಪೂಜಿ ಸಿದಳು. ಈರೀತಿ ಮಾಡಿದ ವ್ರತ ಮಹಿಮೆಯಿಂದ ಆಕೆಯು ಈ ಭೂಲೋಕದಿಂದ

ತಿಲೈರ್ನಿತ್ಯಂ ಮಹಾಭಾಗ ಹೋತವ್ಯಾಶ್ಚ ತಥಾ ತಿಲಾಃ ।
ತಿಲಾಶ್ಚ ದೇಯಾ ವಿಪ್ರೇಭ್ಯಸ್ತಸ್ಮಿನ್ನಹನಿ ಪಾರ್ಥಿವ ॥ ೩೭ ॥

ಏಕೈಕಸ್ಮಾತ್ತಿಲಾದ್ರಾಜಂಸ್ತಿಲಬೀಜೋದ್ಭವೇ ಯಥಾ ।
ಸುಕೃಷ್ಟಕ್ಷೇತ್ರಜಾದ್ದೃಷ್ಟಂ ದೇವೇ ಕಾಲಪ್ರವರ್ಷಿಣೀ ॥ ೩೮ ॥
ಏಕೈಕಸ್ಮಾತ್ತಿಲಾತ್ತದ್ವತ್ಫಲಮಕ್ಷಯ್ಯಮುಚ್ಯತೇ ।

ಸ್ವರ್ಲೋಕೇ ವಿಷ್ಣುಲೋಕೇ ವಾ ಮಾನುಷ್ಯೇ ಯದಿ ವಾ ನೃಪ ।
ಅಕ್ಷಯ್ಯಂ ಫಲಮಾಪ್ನೋತಿ ಏಕೈಕಸ್ಮಾತ್ತಿಲಾತ್ತಿಲಾತ್ ॥ ೩೯ ॥

ತಸ್ಮಾತ್ಪ್ರಯತ್ನೇನ ನರೇಂದ್ರಚಂದ್ರ
ತಸ್ಯಾಂ ಸಮಭ್ಯರ್ಚಯ ವಾಸುದೇವಂ ।

---

ಶ್ವೇತದ್ವೀಪಕ್ಕೆ ಪ್ರಯಾಣಮಾಡಿದಳು. ಅದೇ ಮೇರೆ ನಯನ ಸುಂದರಿಯೂ ಸಹ ನಿರ್ಮಲವಾದ ಸ್ಥಾನವನ್ನು ಹೊಂದಿ ಚಂದ್ರನಂತೆ ಪ್ರಕಾಶಿಸುತ್ತಿದ್ದಳು. ಆದ್ದರಿಂದ ಯಾರೇ ಆಗಲೀ ಸರ್ವ ಪ್ರಯತ್ನದಿಂದಲಾದರೂ ಆದಿನ ಮಹಾವಿಷ್ಣುವನ್ನು ಪೂಜಿಸಬೇಕು. ಮತ್ತು ತಿಲಹೋಮವನ್ನು ಮಾಡಬೇಕು. ಆ ದಿನ ಬ್ರಾಹ್ಮಣರಿಗೆ ತಿಲದಾನವನ್ನು ಮಾಡಬೇಕು. ಚನ್ನಾಗಿ ಉತ್ತು ಹದಮಾಡಿದ ನೆಲದಲ್ಲಿ ಒಂದೊಂದು ಎಳ್ಳನ್ನು ಬಿತ್ತಿ ಅದರಿಂದ ಗಿಡವಾಗಿ ಆ ಗಿಡ ದೊಡ್ಡದಾಗಿ ಹೂಬಿಟ್ಟು ಕಾಯಾಗಿ ಎಷ್ಟು ಎಳ್ಳು ಅದರಿಂದ ಬೆಳೆಯಾಗುವುದೋ ಅಂತಹ ಎಷ್ಟೋ ಎಳ್ಳು, ದಾನಮಾಡಿದ ರಾಶಿಯೂ ಹೋಮಮಾಡಿದ ಎಳ್ಳು ಕಾಳುಗಳೂ ಸಹ ಗಿಡವಾಗಿ ಫಲಿಸಿದರೆ ಅದೆಷ್ಟು ಎಳ್ಳಿನ ರಾಶಿಯಾಗುವುದೋ ಆ ಮಹಾರಾಶಿಯ ಒಂದೊಂದು ಎಳ್ಳು ಕಾಳೂ ಸಹ ಅಕ್ಷಯವಾಗಿ ಅನಂತವಾಗಿ ಪರಿಣಮಿಸಿ ಅಂತಹ ದಾನ ಹೋಮಮಾಡಿದ ಮಹಾ ಮಹಿಮಾಶಾಲಿಯು ಸ್ವರ್ಗಲೋಕದಲ್ಲೂ, ವಿಷ್ಣುಲೋಕದಲ್ಲೂ, ಮನುಷ್ಯ ಲೋಕದಲ್ಲೂ ಒಂದೊಂದು ಎಳ್ಳಿನ ಲೆಖ್ಖದಂತೆ ಅಕ್ಷಯ ಫಲವನ್ನು ಹೊಂದುತ್ತಾನ. ಆದ್ದರಿಂದ ಎಲೈ ವಜ್ರಮಹಾರಾಜನೇ! ಎಷ್ಟು ಪ್ರಯತ್ನದಿಂದಲಾದರೂ ಮಾಘ ಬಹುಳ

ಉಪೋಷಿತಃ ಪ್ರೀತಿಮನಾ ಯಥಾವ-
ತ್ತ್ರಾಣಂ ಸ ದೇವಃ ಪ್ರಥಿತೋ ನರಾಣಾಂ ॥ ೪೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚಂಡವೇಗೋಪಾಖ್ಯಾನೇ
ತಿಲದ್ವಾದಶೀಮಾಹಾತ್ಮ್ಯವರ್ಣನಂನಾಮ
ಚತುಃಷಷ್ಟ್ಯಧಿಕ ಶತತಮೋಽಧ್ಯಾಯಃ.

---

ದ್ವಾದಶೀ (ತಿಲದ್ವಾದಶೀ) ದಿವಸ ಉಪೋಷ್ಯಮಾಡಿ ನೀನೂ ಸಹ ಮಹಾ ವಿಷ್ಣು ವನ್ನು ಪೂಜಿಸು ಅಂತಹವರನ್ನು ಮಹಾವಿಷ್ಣುವು ಉದ್ಧಾರಮಾಡುವನೆಂದು ಹೇಳಿದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದ ಚಂಡವೇಗೋಪಾಖ್ಯಾನದಲ್ಲಿ ತಿಲದ್ವಾದಶೀ
ಮಹಿಮಾವರ್ಣನೆಯೆಂಬ ಹೆಸರಿನ ನೂರ ಅರವತ್ತನಾಲ್ಕನೇ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಪಂಚಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಹೋತವ್ಯೇ ವಿಷ್ಣುದೈವತ್ಯೇ ಸಾವಿತ್ರೀ ಮೇ ತ್ವಯೋದಿತಾ ।
ಹೋಮಕರ್ಮಣಿ ಸಂದೇಹೋ ಮಹಾನ್ಮೇ ಭೃಗುನಂದನ ॥ ೧ ॥
ಸವಿತಾ ದೈವತಂ ತಸ್ಯಾಃ ಸಾವಿತ್ರೀತ್ಯುಚ್ಯತೇ ತತಃ ।
ತಯಾ ಕಥಂ ತು ಕರ್ತವ್ಯಂ ಹೋಮಕರ್ಮ ಚ ವೈಷ್ಣವಂ ॥ ೨ ॥
ಪ್ರಭಾವಮಾರ್ಷೇಶ್ಚ ತಥಾ ತಸ್ಯಾಸ್ತ್ವಂ ಮಮ ಕೀರ್ತಯ ।
ವೇದಮಾತಾ ತು ಸಾ ಪ್ರೋಕ್ತಾ ಸರ್ವಪಾಪಪ್ರಣಾಶಿನೀ ॥ ೩ ॥

॥ ಮಾರ್ಕಂಡೇಯ ಉವಾಚ ॥

ರವಿಮಧ್ಯೇ ಸ್ಥಿತಃ ಸೋಮಃ ಸೋಮಮಧ್ಯೇ ಹುತಾಶನಃ ।
ತೇಜೋಮಧ್ಯೇ ಸ್ಥಿತಂ ಸತ್ತ್ವಂ ಸತ್ತ್ವಮಧ್ಯೇ ಸ್ಥಿತೋಽಚ್ಯುತಃ ॥ ೪ ॥

---

### ನೂರ ಅರವತ್ತೈದನೆಯ ಅಧ್ಯಾಯವು.

೧-೩ ವಜ್ರಮಹಾರಾಜನು ಪ್ರಶ್ನೆ ಮಾಡುತ್ತಾನೆ —ವಿಷ್ಣುದೇವತಾ ಹೋಮಕ್ಕೆ ಸಾವಿತ್ರೀ ಮಂತ್ರವನ್ನು ಉಪಯೋಗಿಸಬೇಕೆಂದು ನೀನು ಹೇಳಿರುವಿ, ಈ ವಿಷಯದಲ್ಲಿ ನನಗೆ ಒಂದು ಪ್ರಬಲವಾದ ಸಂದೇಹವುಂಟಾಗಿದೆ ಆ ಸಾವಿತ್ರಿ (ಗಾಯತ್ರೀ) ಯು ವೇದಮಾತಯೆಂದೂ ಸರ್ವಪಾಪಪ್ರನಾಶಕಳೆಂದೂ, ಆ ಮಂತ್ರಕ್ಕೆ ಸೂರ್ಯನೇ ದೇವತೆಯಾದುದರಿಂದ ಸಾವಿತ್ರಿಯೆಂದು ಹೆಸರಾಯಿತೆಂದೂ ಹೇಳಲ್ಪಟ್ಟಿದೆ ಆ ಗಾಯತ್ರಿಯ ಆರ್ಷೇಯ (ಪುರಾತನ) ವಾದ ಮಹಾತ್ಮ್ಯೆ ಎಂತಹದು. ಆದರಿಂದ ವೈಷ್ಣವ ಸಂಬಂಧವಾದ ಹೋಮಗಳನ್ನು ಮಾಡುವುದೆಂತು ? ಈ ವಿಚಾರವನ್ನು ದಯಪಿಟ್ಟು ತಿಳಿಸು

೪-೧೨ ಮಾರ್ಕಂಡೇಯನು ಹೇಳುತ್ತಾನೆ —ಗಾಯತ್ರೀ ಮಂತ್ರ ಮಹಿಮೆ ,

ಅಂಗುಷ್ಠಮಾತ್ರಃ ಪುರುಷಃ ಪೂರ್ವಮೇವ ಮಯೇರಿತಃ ।
ಶಂಕರೇಣ ತದಾ ದೃಷ್ಟಃ ಪ್ರಭವಃ ಸರ್ವತೇಜಸಾಂ ॥ ೫ ॥

ಸ ವಿಷ್ಣುರ್ಭುವನಾಧಾರೋ ಯಸ್ಯೇದಂ ಸಕಲಂ ಜಗತ್ ।
ವರೇಣ್ಯಂ ತಚ್ಚ ಸವಿತುರ್ಭರ್ಗವಾಚ್ಯಂ ತು ಯೋಗಿನಾಂ ॥ ೬ ॥

ಧ್ಯೇಯಂ ವರಂ ತದುದ್ದಿಷ್ಟಂ ಬಹಿರಂತಶ್ಚ ಯಾದವ ।
ಧೀಶಬ್ದವಾಚ್ಯಂ ಬ್ರಹ್ಮಾಣಂ ಪ್ರಚೋದಯತಿ ಯಃ ಸದಾ ॥ ೭ ॥

ಸೃಷ್ಟ್ಯರ್ಥಂ ಭಗವಾನ್ವಿಷ್ಣುಃ ಸವಿತಾ ಸ ಪ್ರಕೀರ್ತಿತಃ ।
ಸರ್ವಲೋಕಪ್ರಸವನಾತ್ಸವಿತಾ ಸ ತು ಕೀರ್ತ್ಯತೇ ॥ ೮ ॥

ಯತಸ್ತದ್ದೇವದೈವತ್ಯಾ ಸಾವಿತ್ರೀತ್ಯುಚ್ಯತೇ ತತಃ
ಗಾನಾದ್ವಾ ತ್ರಾಯತೇ ಯಸ್ಮಾದ್ಗಾಯತ್ರೀ ವಾ ತದಾ ಸ್ಮೃತಾ ॥ ೯ ॥

ಸೂರ್ಯಮಂಡಲಮಧ್ಯದಲ್ಲಿ ಚಂದ್ರನೂ, ಚಂದ್ರಮಂಡಲಮಧ್ಯದಲ್ಲಿ ಅಗ್ನಿಯೂ, ಅಗ್ನಿಮಂಡಲ ಮಧ್ಯದಲ್ಲಿ ಸತ್ವವೂ, ಸತ್ವಮಧ್ಯದಲ್ಲಿ ಪರಮಾತ್ಮನಾದ ಅಚ್ಯುತನೂ ಇರುವರು ಎಲೈ ರಾಜನೇ! ನಾನು ಬಹು ಹಿಂದೆ ನಿನಗೆ ಹೇಳಿದ ಶಂಕರಗೀತೆಯಲ್ಲಿ ಈ ವಿಚಾರವನ್ನು ಕುರಿತು ಅಚ್ಯುತನು ಒಂದು ಅಂಗುಷ್ಠ (ಹೆಬ್ಬೆಟ್ಟು) ಮಾತ್ರನಾದ ಪುರುಷಸ್ವರೂಪದಲ್ಲಿದ್ದುಕೊಂಡು ಎಲ್ಲರ ತೇಜಸ್ಸನ್ನೂ ತಾನು ಬೆಳಗಿಸುತ್ತಾ ಭುವನಾಧಾರನಾಗಿ ಪ್ರತಿಯೊಂದು ಪ್ರಾಣಿಯ ಹೃದಯಾಂತರಾಳದಲ್ಲಿದ್ದುಕೊಂಡು ಅಂತರ್ಯಾಮಿಯಾಗಿ ಯಾರಿಗೂ ಗೋಚರಿಸದ ಜಗದ್ವ್ಯಾಪಕನಾಗಿರುವನ್ನು ತಿಳಿಸಿದೇನಷ್ಟೇ? ಆ ಶ್ರೇಷ್ಠನಾದ ತೇಜಃಪುಂಜವು ಯೋಗಿಗಳಿಂದ ಭರ್ಗವೆಂಬ ಹೆಸರಿಂದ ಆದಿತ್ಯಮಂಡಲದಲ್ಲಿದ್ದುಕೊಂಡು ಸರ್ವದಾ ಧ್ಯಾನಮಾಡಲ್ಪಡುತ್ತಲಿದೆ ಅದನ್ನು ಶಂಕರನೊಬ್ಬನು ಕಣ್ಣಿನಿಂದ ನೋಡಿರುವನು ಆ ತೇಜಸ್ಸು ಸಕಲ ಪ್ರಪಂಚದ ಒಳಗೂ, ಹೊರಗೂ ಇದ್ದುಕೊಂಡು ಧೀ (ಬುದ್ಧಿ) ಎಂಬ ಶಬ್ದ ವಾಚ್ಯನಾದ ಪರಬ್ರಹ್ಮಸ್ವರೂಪನನ್ನು ಕುರಿತು ಧ್ಯಾನಮಾಡತಕ್ಕದಾಗಿದೆ ಪರಮಾತ್ಮನಾದ ಮಹಾವಿಷ್ಣುವಿನ ಆತ್ಮಪ್ರಕಾಶವೇ ಅದೆಂದು ತಿಳಿದುಕೋ, ಸಕಲ ಲೋಕವನ್ನೂ ಸೃಷ್ಟಿಮಾಡುವವನಾದುದರಿಂದ ಪರಮಾತ್ಮನು ಸವಿತೃವೆಂದೂ ಸರ್ವ ಲೋಕವನ್ನೂ ಪ್ರಸವಿಸುವುದರಿಂದ ಸವಿತೃವೆಂದೂ ಹೀಗೆ ನಾನಾರೀತಿಯಾಗಿ ವ್ಯುತ್ಪತ್ತಿಮಾಡಿ ಹೇಳ

**ಏತಸ್ಮಾತ್ಕಾರಣಾದ್ರಾಜನ್ ಸಾವಿತ್ರೀ ಕೀರ್ತಿತಾ ಮಯಾ ।**
**ತವ ಧರ್ಮಭೃತಾಂ ಶ್ರೇಷ್ಠ ನಿತ್ಯಂ ನೈಷ್ಣವಕರ್ಮಸು ॥ ೧೦ ॥**

**ಸವ್ಯಾಹೃತೀಕಪ್ರಣವಾಂ ಗಾಯತ್ರೀಂ ಶಿರಸಾ ಸಹ ।**
**ಯೇ ಜಪಂತಿ ಸದಾ ತೇಷಾಂ ನ ಭಯಂ ವಿದ್ಯತೇ ಕ್ವಚಿತ್ ॥ ೧೧ ॥**

**ದಶಕೃತ್ವಃ ಪ್ರಜಪ್ತಾ ಸಾ ರಾತ್ರ್ಯಹ್ನಾ ಯತ್ಕೃತಂ ಲಘು ।**
**ತತ್ಪಾಪಂ ಪ್ರಣುದತ್ಯಾಶು ನಾತ್ರ ಕಾರ್ಯಾ ವಿಚಾರಣಾ ॥ ೧೨ ॥**

ಇಹುದು ಆದ್ದರಿಂದ ಪವಿತ್ರವೆನಿಸಿದ ಆ ಪರಮಾತ್ಮನ ಶಕ್ತಿಗೆ ಸಾವಿತ್ರೀಯೆಂಬ ಹೆಸರುಬಂದಿದೆ ಈ ಸಾವಿತ್ರೀ ಮಂತ್ರವನ್ನು ಸರ್ವದಾ ಗಾನ (ಉಚ್ಚಾರಣೆ ಜಪ) ಮಾಡುವುದರಿಂದ ಜನರು ಸಂರಕ್ಷಿಸಲ್ಪಡುತ್ತಿದ್ದಾರೆ ಎಂಬ ಅರ್ಥವನ್ನನುಸರಿಸಿ (ಗಾನಾತ್ ತ್ರಾಯತ ಇತಿ) ಗಾಯತ್ರೀಯೆಂದು ಈ ಮಂತ್ರಕ್ಕೆ ಹೆಸರುಬಂದಿದೆ ಈ ಕಾರಣವೆಂದಲೇ ನಿನ್ನೊಡನೆ ಈ ಸಾವಿತ್ರೀ ಶಬ್ದಾರ್ಥವು ನನ್ನಿಂದ ಹೇಳಲ್ಪಟ್ಟಿತು ಎಲೈ ಸಕಲ ಧರ್ಮ ರಹಸ್ಯಗಳನ್ನೂ ತಿಳಿದ ರಾಜ್ರರಾಜನೇ! ನೈಷ್ಣವ ಕರ್ಮಗಳಲ್ಲಿ ಯಾರು ಪ್ರಣವ ವ್ಯಾಹೃತೀ ಸಹಿತವಾದ ಈ ಗಾಯತ್ರಿಯನ್ನು ಶಿರಸ್ಸಿನೊಡನೆ ಸೇರಿಸಿ (ಸಹಸ್ರಾರ ಚಕ್ರದಲ್ಲಿ ನಿಲ್ಲಿಸಿ) ಜಪಮಾಡುತ್ತಿರುವರೋ ಅವರಿಗೆ ಎಲ್ಲಿಯೂ ಯಾವಿಂದಲೂ ಸ್ವಲ್ಪವಾದರೂ ಭಯವೆಂಬುದು ಇಲ್ಲವೇ ಇಲ್ಲ ಈ ವಿಧವಾದ ಮಹಾ ಮಹಿಮೆಯಿಂದೊಡಗೂಡಿದ ಗಾಯತ್ರೀ ಮಂತ್ರವನ್ನು ಪ್ರತಿದಿವಸವೂ ಯಾರು ಹತ್ತು ಸರ್ತಿಯಾದರೂ ಭಕ್ತಿಯಿಂದ ಜಪಮಾಡುವರೋ ಅಂತಹವರು ಪ್ರತಿದಿನವೂ ಅಹೋರಾತ್ರಿಗಳಲ್ಲಿ ಮಾಡಿದ ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾರೆ ಈ ವಿಷಯದಲ್ಲಿ ಸಂದೇಹವಿಲ್ಲ

ಟಿಪ್ಪಣಿ —ಸಹಸ್ರಾರ ಚಕ್ರ, ಗಾಯತ್ರೀಜಪ, ಸಂಧ್ಯಾವಂದನೆಗಳ ವಿಚಾರವನ್ನೂ ಸಹ ಸಂದರ್ಭಾನುಸಾರವಾಗಿ ಬರುವ ಸನ್ನಿವೇಶಗಳನ್ನನುಸರಿಸಿಕೊಂಡು ಮತ್ತೆ ಬರೆಯುತ್ತೇನೆ ಈಗ ಇದುವರೆಗೆ ಬರದಿರುವ ಗಾಯತ್ರೀ ಜಪವೇ ಜಪಕ್ಕೂ ಧ್ಯಾನಕ್ಕೂ ಮುಖ್ಯವಾದುದು ಇದೇ ಸಾಕಾರಧ್ಯಾನವು ಈ ಗಾಯತ್ರೀಮೂರ್ತಿ ಸ್ವರೂಪಧ್ಯಾನವು ಮುಕ್ತಾವಿದ್ರುಮ ಹೇಮನೀಲ ಧವಳಾಕೃತಿಯುಳ್ಳ ಐದುಮುಖವು ಗಾಯತ್ರೀ ಸ್ವರೂಪವೆಂದು ಗಾಯತ್ರೀ ಧ್ಯಾನಶ್ಲೋಕದಲ್ಲಿ ಹೇಳಿರುತ್ತಾರೆ ಅದನ್ನನುಸರಿಸಿ ಗಾಯತ್ರಿಯ ಚಿತ್ರವನ್ನು ನಿರ್ಮಾಣ ಮಾಡಿರುವುದನ್ನು ಸಹ ಅನೇಕರು ನೋಡಿರುವರು. ಹಾಗೆ ನೋಡದೆ ಇದ್ದವರು ಈ ಕೂಡಲೇ ವಿಚಾರಿಸಿ ಒಂದು

ಶತಂ ಜಪ್ತ್ವಾ ತು ಸಾ ದೇವೀ ಪಾಪೋಪಶಮನಾ ಸ್ಮೃತಾ ।
ಸಹಸ್ರಜಪ್ತ್ವಾ ಸಾ ದೇವೀ ಚೋಪಪಾತಕನಾಶಿನೀ ॥ ೧೩ ॥

ಲಕ್ಷಜಾಪ್ಯೇನ ಚ ತಥಾ ಮಹಾಪಾತಕನಾಶಿನೀ ।
ಕೋಟಿಜಾಪ್ಯೇನ ರಾಜೇಂದ್ರ ಯದಿಚ್ಛತಿ ತದಾಪ್ನುಯಾತ್ ॥ ೧೪ ॥

ವಿದ್ಯಾಧರತ್ವಂ ಯಕ್ಷತ್ವಂ ಗಂಧರ್ವತ್ವಮಥಾಪಿ ವಾ ।
ದೇವತ್ವಮಥವಾ ರಾಜ್ಯಂ ಭೂಲೋಕೇ ಹತಕಂಟಕಂ ॥ ೧೫ ॥

ಕೋಟಿಸಾಹಸ್ರಜಾಪ್ಯೇನ ನಿಷ್ಕಾಮಃ ಪುರುಷೋತ್ತಮ ।
ವಿಧಿನಾ ರಾಜಶಾರ್ದೂಲ ಪ್ರಾಪ್ನೋತಿ ಪರಮಂ ಪದಂ ॥ ೧೬ ॥

ಗಾಯತ್ರೀ ಚಿತ್ರವನ್ನು ಚಿತ್ರದ ಅಂಗಡಿಯಿಂದ ತಂದು ತನ್ನ ತನ್ನ ಜಪ (ಧ್ಯಾನ) ಮಂದಿರಗಳಲ್ಲಿಟ್ಟುಕೊಂಡು ಧ್ಯಾನಕಾಲವಲ್ಲಿ ನೋಡುತ್ತಾ ಮೇಲೆ ಬರೆದಿರುವ ಗಾಯತ್ರೀ ಸಾವಿತ್ರೀ ಶಬ್ದಾರ್ಥವನ್ನು ಚೆನ್ನಾಗಿ ಮನಸ್ಸಿಗೆ ತಂದುಕೊಂಡು ಜಪ ಮಾಡುತ್ತ ಬಂದರೆ ಅಂಥವರು ಈ ಜನ್ಮದಲ್ಲೇ ಜೀವನ್ಮುಕ್ತರಾಗಲು ಸಂದೇಹವಿಲ್ಲ. ಈ ಮಾತನ್ನು ನಾವು ಅನುಭವದಿಂದ ಬರೆದಿರುವೆವೇ ಹೊರತು ಇದು ಪುಸ್ತಕದ ಬವನೇಕಾಯಿಯೆಂದು ಮಾತ್ರ ಯಾರೂ ಖಂಡಿತ ಭಾವಿಸಬಾರದು. ಇನ್ನು ವಿಚಾರ ಸರಣಿಯನ್ನನುಸರಿಸೋಣ

೧೩-೧೬ ನೂರಾವರ್ತಿ ಗಾಯತ್ರೀ ಜಪವನ್ನು ಮಾಡಿದರೆ ಸಕಲ ಪಾಪಗಳೂ ಪರಿಹಾರವಾಗುವುವು. ಲಕ್ಷ ಜಪದಿಂದ ಮಹಾ ಪಾಪಗಳೆಲ್ಲಾ ನಾಶವಾಗುವುವು. ಕೋಟಿ ಜಪದಿಂದ ಮನಸ್ಸಿನ ಇಷ್ಟಾರ್ಥಗಳೆಲ್ಲವೂ (ಹೇಳ ಹೇಳಿದಂತೆ) ನೆರವೇರುವುವು. ಮತ್ತು ಈ ಕೋಟಿ ಗಾಯತ್ರೀ ಪುರಶ್ಚರಣೆ ಮಾಡಿದ ಮನುಷ್ಯನು ವಿದ್ಯಾಧರ, ಯಕ್ಷ, ಗಂಧರ್ವ, ದೇವತಾ ರೂಪಗಳಿಂದ ಸ್ವರ್ಗಲೋಕದಲ್ಲಿ ಭೋಗಪಡುವನಲ್ಲದೇ ಪುನಃ ಮನುಷ್ಯಲೋಕದಲ್ಲಿ ಹುಟ್ಟುವಾಗ ರಾಜ್ಯಾಧಿಪತಿಯ ಮನೆಯಲ್ಲೇ ಹುಟ್ಟುವನು. ಈ ಮಾತು ಕಾಮನೆಯಿಂದ ಮಾಡಿದವನ ಮಾತಾಯಿತು. ಹಾಗಲ್ಲದ ಯಾವ ಆಶಯನ್ನೂ ಮನಸ್ಸಿನಲ್ಲಿಡದೆ ನಿಷ್ಕಾಮನೆಯಿಂದ ಕೋಟಿ ಗಾಯತ್ರೀ ಜಪಮಾಡಿದ ಮಹಾನುಭಾವನು ನಿಜವಾಗಿ ಪರಮಾತ್ಮನೊಡನೆ ಸೇರಿ

ಯಥಾ ಕಥಂಚಿಜ್ಜಪ್ತೈಷಾ ದೇವೀ ಪರಮಪಾವನೀ ।
ಸರ್ವಕಾಮಪ್ರದಾ ಪ್ರೋಕ್ತಾ ವಿಧಿನಾ ಕಿಂಪುನರ್ನೃಪ ॥ ೧೭ ॥

॥ ವಜ್ರ ಉವಾಚ ॥

ವಿಧಿನಾ ಕೇನ ಜಪ್ತವ್ಯಾ ಗಾಯತ್ರೀ ಪಾಪನಾಶಿನೀ ।
ಮಹಾಪವಿತ್ರಾ ಪರಮಾ ಸರ್ವಕಲ್ಯಾಣಕಾರಿಣೀ ॥ ೧೮ ॥

॥ ಮಾರ್ಕಂಡೇಯ ಉವಾಚ ॥

ಕುಶಶಯ್ಯಾಂ ನಿವಿಷ್ಟಸ್ತು ಕುಶಪಾಣಿರ್ಜಿತೇಂದ್ರಿಯಃ ।
ಅರ್ಕಮಧ್ಯಗತಂ ಧ್ಯಾಯೇತ್ಪುರುಷಂ ತಂ ಮಹಾದ್ಯುತಿಂ ॥ ೧೯ ॥

ಅಥವಾsರ್ಕಂ ಮಹೀಪಾಲ ಬಹಿಃ ಸ್ನಾತಸ್ತ್ವತಂದ್ರಿತಃ ।
ಅನನ್ಯಚಿತ್ತೋ ಮೇಧಾವೀ ಪೂರ್ವಾಹ್ಣೇ ತು ವಿಶೇಷತಃ ॥ ೨೦ ॥

ಭೈಕ್ಷ್ಯಯಾವಕಶಾಕಾಶೀ ಪಯೋಮೂಲಾಶನೋsಥವಾ ।
ಫಲಪುಷ್ಪಾಶನೋ ವಾಪಿ ನಕ್ತಂ ವಾಪಿ ಹವಿಷ್ಯಭುಕ್ ॥ ೨೧ ॥

ಹೋಗಿ ಅದ್ವೈತಾನಂದವನ್ನೇ ಅನುಭವಿಸುವನು. ಎಲೈ ರಾಜಸಿಂಹನೇ! ಇನ್ನೊಂದು ಮಾತನ್ನು ಹೇಳುತ್ತೇನೆ ಕೇಳು. ಪರಮಪಾವನೆಯಾದ ಈ ಮಹಾತಾಯಿಯನ್ನು ಕುರಿತು ಹೇಗೆ ಹೇಗೆ ಜಪಮಾಡಿದರೂ ಸಮಸ್ತ ಇಷ್ಟಾರ್ಥಗಳನ್ನೂ ಸಲ್ಲಿಸುವಳೆಂದು ಮೇಲೆ ವಿಧಿ ವಿಹಿತವಾಗಿ (ಬ್ರಹ್ಮ ಅಥವಾ ಗಾಯತ್ರ್ಯುಪದೇಶ ಕಾಲದಲ್ಲಿ ಗುರುವಿನಿಂದ ಉಪದೇಶಿಸಲ್ಪಟ್ಟ ಅಂಗನ್ಯಾಸ, ಕರನ್ಯಾಸ, ಹೃದಯನ್ಯಾಸ, ಧ್ಯಾನಗಳೊಡನೆ) ಜಪಮಾಡಿದವರ ವಿಚಾರದಲ್ಲಿ ಮಾತೆತ್ತಬೇಕಾಗಿಯೇ ಇಲ್ಲ ಅಂಥವರಿಗೆ ಇಷ್ಟಾರ್ಥವನ್ನು ಕೇಳದೇ ಇದ್ದರೂ ಕೊಟ್ಟೇಕೊಡುತ್ತಾಳೆ.

೧೮ ವಜ್ರಮಹಾರಾಜನು ಹೇಳುತ್ತಾನೆ --ಸಕಲ ಪಾಪನಾಶಿನಿಯಾದ ಪರಮಪವಿತ್ರಳಾದ, ಸಕಲ ಲೋಕಕಲ್ಯಾಣಕಾರಿಣಿಯಾದ ಗಾಯತ್ರೀ ಮಾತೆಯನ್ನು ಅದಾವವಿಧಿಯಿಂದ ಜಪಿಸ (ಧ್ಯಾನಿಸ) ಬೇಕೆಂಬ ವಿಧಾನವನ್ನು ದಯಮಾಡಿ ಹೇಳೈ ಮುನಿವರನೇ

೧೯-೨೨ ಮಾರ್ಕಂಡೇಯನು ಹೇಳುತ್ತಾನೆ —ದರ್ಭಾಸನದಲ್ಲಿ ಕುಳಿತುಕೊಂಡು ಕಯ್ಯಲ್ಲಿ ಧರ್ಮ ಪವಿತ್ರವನ್ನು ಧರಿಸಿ ಜಿತೇಂದ್ರಿಯನಾಗಿ ಅನನ್ಯ ಭಕ್ತಿಯಿಂದ ಅರ್ಕಮಂಡಲಮಧ್ಯಗತನಾದ, ಮೇಲೆ ವಿವರಿಸಿದ ಲಕ್ಷಣವುಳ್ಳ ಮಹಾ

ಅನೇನ ವಿಧಿನಾ ಜಪ್ಯಂ ಯಃ ಕರೋತಿ ಮಹೀಪತೇ ।
ಸ ಯಾತಿ ಪರಮಂ ಸ್ಥಾನಂ ವಾಯುಭೂತಃ ಖಮೂರ್ತಿಮಾನ್ ॥ ೨೦ ॥

ಅಕಾಮಃ ಕಾಮಕಾಮಸ್ತು ಕಾಮಮಾಪ್ನೋತ್ಯಭೀಪ್ಸಿತಂ ।
ಸವ್ಯಾಹೃತೀಕಪ್ರಣವಾಃ ಪ್ರಾಣಾಯಾಮಾಸ್ತು ಷೋಡಶ ॥ ೨೩ ॥

ಅಪಿ ಭ್ರೂಣಹಣಂ ಮಾಸಾತ್ಪುನಂತ್ಯಹರಹಃ ಕೃತಾಃ ।
ಸವ್ಯಾಹೃತೀಕಪ್ರಣವಾಂ ಗಾಯತ್ರೀಂ ಶಿರಸಾ ಸಹ ॥ ೨೪ ॥

ತ್ರಿಃ ಪಠೇದಾಯತಪ್ರಾಣಃ ಪ್ರಾಣಾಯಾಮಃ ಸ ಉಚ್ಯತೇ ।
ಪ್ರಾಣಾಯಾಮತ್ರಯಂ ಕಾರ್ಯಂ ಕಲ್ಯಮುತ್ಥಾಯ ವೈ ದ್ವಿಜಃ ॥ ೨೫ ॥

ಅಹೋರಾತ್ರಕೃತಾತ್ಪಾಪಾತ್ತತ್ಕ್ಷಣಾದೇವ ಮುಚ್ಯತೇ ।
ಸರ್ವದೋಷಹರಂ ಪ್ರೋಕ್ತಂ ಪ್ರಾಣಾಯಾಮಂ ದ್ವಿಜನ್ಮನಾಂ ॥ ೨೬ ॥

ಪ್ರಕಾಶಮಾನನಾದ ಪರಮಪುರುಷನನ್ನು ಧ್ಯಾನಿಸಬೇಕು. ಅಥವಾ ಪ್ರಾತಃಕಾಲದಲ್ಲಿ ಸ್ನಾನಮಾಡಿ ಸವಿತೃಮಂಡಲವನ್ನು ಧ್ಯಾನಿಸಬೇಕು. ಮಧ್ಯಾಹ್ನ ಕಾಲದಲ್ಲಿ ಭಿಕ್ಷೆ ಮಾಡಿ ನವಣೆ ಅನ್ನವನ್ನು ಅಥವಾ ಹಾಲು, ಗೆಡ್ಡೆಗೆಣಸುಗಳನ್ನಾಗಲೀ, ಫಲಾಹಾರ ಗಳನ್ನಾಗಲೀ ಮಾಡಿಕೊಂಡಿದ್ದು, ಸಾಯಂಕಾಲ ಹವಿಷ್ಯಾನ್ನವನ್ನುಂಡುಕೊಂಡು ತ್ರಿಕಾಲದಲ್ಲೂ ಗಾಯತ್ರೀ ಜಪವನ್ನು ಮಾಡಬೇಕು. ಈರೀತಿ ವಿಶೇಷವಿಧಿಯಿಂದ ಯಾರು ಗಾಯತ್ರೀಜಪವನ್ನು ಮಾಡುತ್ತ ಇರುವರೋ ಅವರು ಪರಮಪುರುಷನ ಪರಮಪದವಿಯನ್ನೇ ಹೊಂದುವರು. ಅವರನ್ನು ಮೂರ್ತಿಮಂತನಾದ ವಾಯು ದೇವರೆಂದು ತಿಳಿಯಬೇಕು

೨೩-೨೬ ಕಾಮನೆಯಿಂದಲಾಗಲೀ, ಕಾಮನೆ ಇಲ್ಲದೆಯೋ ಆಗಲಿ ಮಾಡಿದ ಗಾಯತ್ರೀ ಜಪವು ಮನದಲ್ಲ ನೆನೆದ ಇಷ್ಟವನ್ನು ಸಲ್ಲಿಸಿಯೇ ಬಿಡುವುದು. ವ್ಯಾಹೃತೀ ಪ್ರಣವ (ಓಂ ಎಂಬುವೇ ಪ್ರಣವ ಭೂರ್ಭುವಸ್ಸುವಃ ಎಂಬುದೇ ವ್ಯಾಹೃತಿ) ದೊಡನೆ, ಗಾಯತ್ರಿಯನ್ನು ಸೇರಿಸಿ ಮೂರು ಬಾರಿ ಉಚ್ಚರಿಸಿ ಉಸಿರು ತಡೆಯುವುದಕ್ಕೆ ಪ್ರಾಣಾಯಾಮವೆಂದು ಹೆಸರು. ಈ ಪ್ರಾಣಾಯಾಮ ಕ್ರಮವನ್ನು ಗುರೂಪದೇಶ ಕ್ರಮದಿಂದ ಹದಿನಾರಾವರ್ತಿ ಮಾಡಿದರೆ ಭ್ರೂಣಹತ್ಯಾ (ಎಳೇಮಕ್ಕಳನ್ನು ಕೊಂದ) ಪಾಪವು ಪರಿಹಾರವಾಗುತ್ತದೆ. ಪ್ರತಿದಿವಸವೂ ಪ್ರಾತಃಕಾಲದಲ್ಲೆದ್ದ ಒಡನೆಯೇ ಮೇಲೆ ಬರೆದ ಕ್ರಮದಂತೆ ಮೂರಾವರ್ತಿ ಪ್ರಾಣಾಯಾಮವನ್ನು ಮಾಡಬೇಕು. ಈ ರೀತಿ ಪ್ರತಿದಿನವೂ ಮಾಡುತ್ತಾ ಬಂದರೆ ಹಗಲೂ ರಾತ್ರಿಗಳಲ್ಲಿ ಮಾಡಿದ ಪಾಪಗಳ

ತತಸ್ತ್ವಭ್ಯಧಿಕಂ ನಾಸ್ತಿ ರಾಜನ್ಪರಮಪಾವನಂ ।
ಪ್ರಾಣಸಂಧಾರಣಂ ಮಾಸಂ ಕುಶಾಗ್ರಚ್ಯುತಬಿಂದುನಾ ॥ ೨೭ ॥

ಯಃ ಕುರ್ಯಾದಂಭಸಾಂ ಪಾನಂ ಪ್ರಾಣಾಯಾಮಂ ತು ತತ್ಸಮಂ ।
ನಿರೋಧಾಜ್ಜಾಯತೇ ವಾಯುಸ್ತಸ್ಮಾದಗ್ನಿಸ್ತತೋ ಜಲಂ ॥ ೨೮ ॥

ತ್ರಿಭಿಃ ಶರೀರಂ ಸಕಲಂ ಪ್ರಾಣಾಯಾಮೈಶ್ಚ ಶುಧ್ಯತಿ ।
ಆಕೇಶಾಗ್ರಾನ್ನಖಾಗ್ರಾಚ್ಚ ತಪಸ್ತಸ್ಯೇತ್ಸ ಉತ್ತಮಃ ॥ ೨೯ ॥

ಆತ್ಮಾನಂ ಶೋಧಯೇದ್ಯಸ್ತು ಪ್ರಾಣಾಯಾಮೈಃ ಪುನಃಪುನಃ ।
ಶ್ರಾವಣ್ಯಾಂ ಪೌರ್ಣಮಾಸ್ಯಾಂ ತು ಸೋಽಪವಾಸೋ ಜಿತೇಂದ್ರಿಯಃ ॥ ೩೦ ॥

ಪ್ರಾಣಾಯಾಮಶತಂ ಕೃತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ।
ಅಂತರ್ಜಲೇ ತ್ರಿರಾವರ್ತ್ಯ ಗಾಯತ್ರೀಂ ಪ್ರಯತೋ ಜಪೇತ್ ೩೧ ॥

---

ಲ್ಲವೂ ಪರಿಹಾರವಾಗುತ್ತವೆ ಈ ಪ್ರಾಣಾಯಾಮ ಕರ್ಮವೆಂಬುದು ಬ್ರಾಹ್ಮಣನಿಗೆ ಸಕಲ ದೋಷ (ಪಾಪ) ವನ್ನೂ ಪರಿಹರಿಸುವ ಮಂತ್ರವೆಂದು ಹೇಳಲ್ಪಟ್ಟಿದೆ.

೨೭-೩೧. ದರ್ಭೆಯ ತುದಿಯಿಂದ ಒಂದೊಂದು ತೊಟ್ಟಾಗಿ ಬಿದ್ದ ನೀರಿನ ಹನಿಗಳನ್ನು ಸಂಗ್ರಹಿಸಿ ಅದನ್ನು ಕುಡಿದುಕೊಂಡು ಒಂದು ತಿಂಗಳು ಪ್ರಾಣಧಾರಣೆ ಮಾಡಿ ಪ್ರಾಣಾಯಾಮಮಾಡುತ್ತಾ ಬಂದರೆ ಅದಕ್ಕಿಂತ ಶ್ರೇಷ್ಠವಾದ ತಪಸ್ಸು ಮತ್ತೊಂದಿಲ್ಲ ಪ್ರಾಣಾಯಾಮದ ಮೂಲಕ ಬಲಗಡೆ ವಾಯುವನ್ನು ನಿರೋಧ ಮಾಡಿ (ತಡೆ) ದವರ ಒಳಗೇ ವಾಯುವು ಉತ್ಪತ್ತಿಯಾಗಿ ಅದರಿಂದ ಅಗ್ನಿಯೂ, ಅದರಿಂದ ನೀರೂ ಸಹ ಉತ್ಪತ್ತಿಯಾಗುತ್ತದೆ ಈರೀತಿ ಒಳಗೆ ಹುಟ್ಟಿದ ಗಾಳಿ ಬೆಂಕಿ ನೀರುಗಳಿಂದ ಪ್ರಾಣವು ಒಳಗೇ ನಿರೋಧಿಸಲ್ಪಟ್ಟು ದೇಹದ ಅಂತರ್ಭಾಗ ವೆಲ್ಲವೂ, ಶುದ್ಧಿಯಾಗುತ್ತವೆ ಈರೀತಿ ನಖ ಶಿಖಾ ಪರ್ಯಂತವಾಗಿ ಶುದ್ಧಿಮಾಡುವ ಶಕ್ತಿಯುಳ್ಳ ಪ್ರಾಣಾಯಾಮಮಾಡುವುದೇ ಮಹಾ ತಪಸ್ಸೆನಿಸಿಕೊಳ್ಳುವುದು ಇದ ಕ್ಕಿಂತ ಬೇರೆ ಉತ್ತಮವಾದ ತಪಸ್ಸಿಲ್ಲವೇ ಇಲ್ಲ ಈರೀತಿ ಗುರುಮುಖೇನ ಅಭ್ಯಾಸ ಮಾಡಿದ ಪ್ರಾಣಾಯಾಮ ಕ್ರಮದಿಂದ ಯಾವನು ಪುನಃ ಪುನಃ ಶ್ರಾವಣ ಶುದ್ಧ ಪೌರ್ಣಿಮಾ ದಿವಸದಲ್ಲಿ ಜಿತೇಂದ್ರಿಯನಾಗಿದ್ದು ಉಪವಾಸದಿಂದ ವಾಯು ನಿರೋಧ ಮಾಡುವನೋ ಮತ್ತು ಈ ಕ್ರಮದಿಂದ ಒಂದು ನೂರು ಪ್ರಾಣಾಯಾಮ ರೂಪ

ಮುಚ್ಯತೇ ಪಾತಕೈಃ ಸರ್ವೈರ್ಯದಿ ನ ಬ್ರಹ್ಮಹಾ ಭವೇತ್ ।
ನಾಸ್ತಿ ಸತ್ಯಾತ್ಪರೋ ಧರ್ಮೋ ನಾಸ್ತಿ ಕೃಷ್ಣಸಮಾ ಗತಿಃ ॥ ೩೨ ॥

ಗಾಯತ್ರ್ಯಾಶ್ಚ ಪರಂ ನಾಸ್ತಿ ದಿವಿ ಚೇಹ ಚ ಪಾವನಂ ।
ಹುತಾ ಚ ವರದಾ ದೇವೀ ಸರ್ವಕಾಮಫಲಪ್ರದಾ ॥ ೩೩ ॥

ಗಾಯತ್ರ್ಯಾಃ ಘುತಿಲೈರ್ಹೋಮಃ ಸರ್ವಪಾಪಪ್ರಣಾಶನಃ ।
ಶಾಂತಿಕಾಮೋ ಯವೈಃ ಕುರ್ಯಾದಾಯುಷ್ಕಾಮೋ ಘೃತೇನ ಚ ॥ ೩೪ ॥

ಕರ್ಮಣಾಂ ಸಿದ್ಧಿಕಾಮಸ್ತು ಕುರ್ಯಾತ್ಸಿದ್ಧಾರ್ಥಕೈರ್ನರಃ ।
ಬ್ರಹ್ಮವರ್ಚಸಕಾಮಸ್ತು ಪಯಸಾ ಸ ಸಮಾಚರೇತ್ ॥ ೩೫ ॥

ಪುತ್ರಕಾಮಸ್ತಥಾ ದಧ್ನಾ ಧಾನ್ಯಕಾಮಸ್ತು ಶಾಲಿಭಿಃ ।
ಕ್ಷೀರವೃಕ್ಷಸಮಿದ್ಭಿಶ್ಚ ಗ್ರಹಪೀಡಾ ಪ್ರಶಾಂತಯೇ ॥ ೩೬ ॥

---

ವಾದ ತಪಸ್ಸನ್ನು ಮಾಡುವನೋ ಅವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ ನೀರಿನೊಳಗೆ ಮುಳುಗಿಕೊಂಡು ಮೂರಾವರ್ತಿ ಪ್ರಾಣಾಯಾಮದಿಂದ ಗಾಯತ್ರೀ ಜಪಮಾಡಿದವರು, ಬ್ರಹ್ಮಹತ್ಯೆಯನ್ನು ಮಾಡಿದ್ದಾಗ್ಯೂ ಅಂತಹ ಪಾಪವೂ ನಾಶವಾಗುವುದು. ಸತ್ಯ(ನಿಜ)ಕ್ಕಿಂತ ಬೇರೆ ಧರ್ಮವೇ ಇಲ್ಲ ಮಹಾ ವಿಷ್ಣುವಿಗೆ ಸಮನಾದ ಉದ್ಧಾರಕನು ಮತ್ತೊಬ್ಬನಿಲ್ಲ ಇವರಂತೆಯೇ ಈ ಲೋಕ ಪರಲೋಕಗಳಲ್ಲಿ ಗಾಯತ್ರಿಗಿಂತ ಬೇರೆಯಾದ ಪರಮಪಾವನ ಮಂತ್ರವು ಬೇರೆ ಯೊಂದಿಲ್ಲವೇ ಇಲ್ಲ ಇಂತಹ ಪರಮಶ್ರೇಷ್ಠವಾದ ಗಾಯತ್ರೀಮಂತ್ರದಿಂದ ಹೋಮ ಮಾಡಿದರೆ ಸಕಲ ಇಷ್ಟಾರ್ಥಗಳೂ ಕೈಗೂಡುವುವು

೩೪-೪೭ ಗಾಯತ್ರಿಯಿಂದ ತಿಲಹೋಮವನ್ನು ಮಾಡಿದರೆ ಸಕಲ ಪಾಪ ಗಳೂ ನಾಶವಾಗುವುವು ಯವೇ (ಅಕ್ಕಿ) ಯಿಂದಲೂ ತುಪ್ಪದಿಂದಲೂ ಹೋಮ ಮಾಡಿದರೆ ಆಯುಸ್ಸು ಹೆಚ್ಚುತ್ತದೆ ಹಾಲಿನಿಂದ ಹೋಮಮಾಡಿದರೆ ಬ್ರಹ್ಮ ವರ್ಚಸ್ಸುಂಟಾಗುತ್ತದೆ ಮೊಸರಿನಿಂದ ಹೋಮಮಾಡಿದರೆ ಮಕ್ಕಳಾಗುತ್ತಾರೆ ಭತ್ತದ ಕಾಳುಗಳಿಂದ ಹೋಮಮಾಡಿದರೆ ಧಾನ್ಯ ಸಂಪತ್ತನ್ನು ಹೊಂದುವನು ಆಲದ ಸಮಿತ್ತಿನಿಂದ ಹೋಮಮಾಡಿದರೆ ನವಗ್ರಹಗಳಿಂದುಂಟಾದ ಪೀಡೆಗಳು ಪರಿ

ಧನಕಾಮಸ್ತಥಾ ಬಿಲ್ವೈಃ ಶ್ರೀಕಾಮಃ ಕಮಲೈಸ್ತಥಾ ।
ಆರೋಗ್ಯಕಾಮಃ ಕ್ಷೀರಾಕ್ತೈಃ ಕುರ್ಯಾದ್ದೂರ್ವಾಂಕುರೈಃ ಶುಭೈಃ॥ ೩೭ ॥

ದೇಶೋಪಸರ್ಗೇ ಸಂಪ್ರಾಪ್ತೇ ತದೇವ ಚ ವಿಧೀಯತೇ ।
ಗುಗ್ಗುಲೋರ್ಗುಲಿಕಾಭಿಸ್ತು ಕೃತ್ವಾ ಹೋಮಮತಂದ್ರಿತಃ ॥ ೩೮ ॥

ಸೌಭಾಗ್ಯಂ ಮಹದಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಪಾಯಸೇನ ತಥಾ ಹುತ್ವಾ ವಿದ್ಯಾಂ ಸಮಧಿಗಚ್ಛತಿ ।
ಯೇನಯೇನ ತು ಕಾಮೇನ ಲಕ್ಷಹೋಮಂ ಸಮಾಚರೇತ್ ॥ ೩೯ ॥

ತದೇವ ಕಾಮಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಕೃಚ್ಛ್ರೇಣ ಶುದ್ಧಿಮುತ್ಪಾದ್ಯ ಪ್ರಾಣಾಯಾಮಶತೇನ ಚ ॥ ೪೦ ॥

ಅಂತರ್ಜಲೇನ ವಾ ಜಪ್ತ್ವಾ ಸ್ನಾತೋ ನಿತ್ಯಮತಂದ್ರಿತಃ ।
ಪ್ರಾಣಾಯಾಮಾಂಸ್ತತಃ ಕೃತ್ವಾ ವಿಧಿನೈವ ಸ ಷೋಡಶ ॥ ೪೧ ॥

---

ಹಾರವಾಗುತ್ತವೆ ಬಿಲ್ವಪತ್ರೆಗಳಿಂದ ಹೋಮಮಾಡಿದರ ಧನಸಂಪನ್ನನಾಗುತ್ತಾನೆ ತಾವರೇಕಮಲಗಳಿಂದ ಹೋಮಮಾಡಿದವನು ಐಶ್ವರ್ಯವಂತನಾಗುತ್ತಾನೆ ಹುಲ್ಲು ಗರಿಕೆಗಳನ್ನು ಹಾಲಿನಲ್ಲದ್ದಿ ಹೋಮಮಾಡಿದವನು ಆರೋಗ್ಯಭಾಗ್ಯವನ್ನು ಹೊಂದು ವನು ದೇಶಕ್ಕೇನಾದರೂ ಉಪದ್ರವ ಸಂಭವಿಸಿದರೂ ಇದೇ ಹೋಮವನ್ನು ಮಾಡ ಬೇಕು ಧೂಪದ ಗುಳಿಗೆಗಳಿಂದ ಯಾರು ಭಕ್ತಿಯಿಂದ ಹೋಮಮಾಡುವರೋ ಅಂಥವನು ಮಹತ್ತಾದ ಸೌಭಾಗ್ಯ (ಅಷ್ಟೈಶ್ವರ್ಯ) ವನ್ನು ಹೊಂದುತ್ತಾನ ವಿದ್ಯಾರ್ಥಿಯಾದವನು ಪಾಯಸದಿಂದ ಹೋಮಮಾಡಿದರೆ ಮಹಾವಿದ್ವಾಂಸನಾಗು ತ್ತಾನೆ ಯಾವ ಯಾವ ಕೋರಿಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಒಂದು ಲಕ್ಷ ಗಾಯತ್ರೀ ಹೋಮವನ್ನು ಮಾಡಿದರೂ ಆಯಾಯ ಕೋರಿಕೆಯು ಖಂಡಿತವಾಗಿಯೂ ನೆರವೇರುವುದರಲ್ಲಿ ಸಂದೇಹವಿಲ್ಲ. ಈ ಲಕ್ಷ ಗಾಯತ್ರೀ ಹೋಮದ ವಿಧಿಯನ್ನು ಹೇಳುತ್ತೇನೆ ಕೇಳು —ಕೃಚ್ಛ್ರ (ದಾನ) ದಿಂದ ಶುದ್ಧನಾಗಿ ಒಂದು ನೂರು ಪ್ರಾಣಾ ಯಾಮವನ್ನು ಮಾಡಬೇಕು ಆಬಳಿಕ ನೀರಿನಲ್ಲಿ ಸ್ನಾನಮಾಡಿ ಹದಿನಾರು ಪ್ರಾಣಾ ಯಾಮಮಾಡಬೇಕು ಒಳ್ಳೇ ಸಮಿತ್ತುಗಳನ್ನು ತರಿಸಿ ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಜ್ವಾಲೆಯಲ್ಲಿ ಪೂರ್ವಾಹ್ಣ (ಬೆಳಿಗ್ಗೆ) ದಲ್ಲಿ ಹೋಮಮಾಡಬೇಕು ಭಿಕ್ಷಮಾಡಿ

ಪೂರ್ವಾಹ್ಣೇ ಜುಹುಯಾದ್ವಹ್ನೌ ಸುಸಮಿದ್ಧೇ ಯಥಾವಿಧಿ ।
ಭೈಕ್ಷ್ಯಯಾವಕಶಾಕಾಶೀ ಫಲಮೂಲಾಶನೋಽಥವಾ ॥ ೪೨ ॥

ಕ್ಷೀರಸಕ್ತುಘೃತಾಹಾರೀ ಭವೇದಥ ವಿಚಕ್ಷಣಃ ।
ಆಹಾರಾಣಾಂ ಯಥೋಕ್ತಾನಾಮೇಕಾಹಾರಂ ಸಮಾಶ್ರಯೇತ್ ॥ ೪೩ ॥

ಯಾವತ್ಸಮಾಪ್ತಿರ್ಭವತಿ ಲಕ್ಷಹೋಮಸ್ಯ ಪಾರ್ಥಿವ ।
ಲಕ್ಷಹೋಮಾವಸಾನೇ ತು ಬ್ರಾಹ್ಮಣಾನಾಂ ತು ದಕ್ಷಿಣಾ ॥ ೪೪ ॥

ದೇಯಾ ಭವತಿ ರಾಜೇಂದ್ರ ಗಾವೋ ವಸ್ತ್ರಾಣಿ ಕಾಂಚನಂ ।
ಸರ್ವೋತ್ಪಾತಸಮುತ್ಪತ್ತೌ ಬ್ರಾಹ್ಮಣೈರನುಪೂಜಿತಃ ॥ ೪೫ ॥

ಪಂಚಭಿರ್ದಶಭಿರ್ವಾಪಿ ಲಕ್ಷಹೋಮಂ ಸಮಾಚರೇತ್ ।
ಅಸಂಕೀರ್ಣೈಸ್ತಥಾ ಹಾರ್ಯೈರ್ನೃಪತಿಸ್ತತ್ಪ್ರಶಾಂತಯೇ ॥ ೪೬ ॥

---

ತಂದ ನವಣಕ್ಕಿಅನ್ನ, ಶಾಕಾದಿಗಳಿಂದಲಾಗಲೀ ಹಣ್ಣು, ಹಂಪಲು, ಗೆಡ್ಡೆ ಗೆಣಸುಗಳಿಂದಾಗಲೀ ಪ್ರಾಣಧಾರಣೆಮಾಡಿಕೊಂಡಿರಬೇಕು ಅಥವಾ ಹಾಲಿನಲ್ಲಿ ಕಲಸಿದ ಅಕ್ಕಿಹಿಟ್ಟು ಅಥವಾ ಗೋಧೀಹಿಟ್ಟನ್ನು ತಿಂದರೂ ಸರಿ ಆಗುತ್ತದು ತುಪ್ಪ, ಗೋಧೀ ಹಿಟ್ಟು ಕಲಸಿ ತಿಂದರೂ ಆಗುತ್ತದೆ ಈ ರೀತಿಯಾದ ಆಹಾರವನ್ನು ಒಂದೇ ಹೊತ್ತು ತಿಂದುಕೊಂಡಿರಬೇಕೇ ಹೊರತು ಮನಸ್ಸು ಬಂದಂತೆ ತಿನ್ನಬಾರದು ಲಕ್ಷಹೋಮವು ಪೂರ್ತಿಯಾಗುವ ತನಕ ಇದೇ ವಿಧವಾದ ಆಹಾರ ನಿಯಮದಿಂದಿರಬೇಕು ಲಕ್ಷ ಹೋಮವೆಲ್ಲಾ ಪೂರ್ತಿಯಾದ ಮೇಲೆ ಬ್ರಾಹ್ಮಣರಿಗೆ ಈ ಕೆಳಗೆ ಹೇಳಿದ ಕ್ರಮದಂತೆ ದಕ್ಷಿಣೆಗಳನ್ನು ಕೊಡಬೇಕು ಹಸುಗಳು, ಬಟ್ಟೆಗಳು ಚಿನ್ನದ ನಾಣ್ಯಗಳೂ ಈ ಮೂರು ವಿಧವಾದ ದಕ್ಷಿಣೆಗಳನ್ನು ಕೊಡಬೇಕು ದೇಶಕ್ಕೆ ಮಹತ್ತರವಾದ ಕೇಡು ಸಂಭವಿಸಿರುವಾಗ, ಐದು ಅಥವಾ ಹತ್ತು ಮಂದಿ (ಹೆಚ್ಚಾದರೂ ಆಗಬಹುದು) ಋತ್ವಿಕ್ಕುಗಳಿಂದ ಈ ಹೋಮದ ಕೆಲಸವನ್ನು ಮಾಡಿಸಬೇಕು ದೇಶದಲ್ಲಿ ಜನರು ಐಕಮತ್ಯವಿಲ್ಲದೆ, ಜಗಳಮಾಡುತ್ತಿರುವಾಗಲೂ ರಾಜನು ಈ ವಿಪತ್ಪರಿಹಾರವಾಗಿ ರಾಜ್ಯದ ಜನರು ಐಕಮತ್ಯದಿಂದಿರುವುದಕ್ಕಾಗಿ ಈ ಲಕ್ಷ ಗಾಯತ್ರೀ ಹೋಮವನ್ನು ಮಾಡಿಸಬೇಕು. ಈ ಲಕ್ಷ ಹೋಮದಿಂದ ಯಾವ ಉತ್ಪಾತವಾದರೂ ಶಾಂತವಾಗಿಯೇ

ನಾಸ್ತಿ ಲೋಕೇ ಸ ಉತ್ಪಾತೋ ಯೋ ಹ್ಯನೇನ ನ ಶ್ಯಾಮ್ಯತಿ ।
ಮಂಗಲಂ ಪರಮಂ ನಾಸ್ತಿ ಯತ್ತಸ್ಮಾದತಿರಿಚ್ಯತೇ ॥ ೪೭ ॥

ಕೋಟಿಹೋಮಂ ತು ಯೋ ರಾಜಾ ಕಾರಯೇತ್ಪೂರ್ವವದ್ದ್ವಿಜೈಃ ।
ನ ತಸ್ಯ ಶತ್ರವಃ ಸಂಖ್ಯೇ ಜಾತು ತಿಷ್ಠಂತಿ ಕರ್ಹಿಚಿತ್ ॥ ೪೮ ॥

ನ ಚ ತಸ್ಯ ಪರಂ ದೇಶೇ ನ ವ್ಯಾಧಿರ್ಜಾಯತೇ ತಥಾ ।
ಅತಿವೃಷ್ಟಿರನಾವೃಷ್ಟಿರ್ಮೂಷಕಾಃ ಶಲಭಾಃ ಶುಕಾಃ ॥ ೪೯ ॥

ರಾಕ್ಷಸಾಶ್ಚ ಪ್ರಶಾಮ್ಯಂತಿ ಸರ್ವಾಸ್ತತ್ರ ತಥೇತಯಃ ।
ರಸವಂತಿ ಚ ತೋಯಾನಿ ಸಸ್ಯಾನಿ ಸ್ವಾದುವಂತಿ ಚ ॥ ೫೦ ॥

ಜಾಯಂತೇ ತಸ್ಯ ದೇಶೇ ತು ಧರ್ಮಿಷ್ಠಶ್ಚ ಜನೋ ಭವೇತ್ ।
ಕೋಟಿಹೋಮೇ ತು ವರಯೇದ್ಬ್ರಾಹ್ಮಣಾನ್ವಿಂಶತಿರ್ನೃಪ ॥ ೫೧ ॥

---

ಆಗುತ್ತದ ಈ ಲಕ್ಷಹೋಮಕ್ಕಿಂತ ಮಂಗಳಕರ್ಮ ಮತ್ತೊಂದಿಲ್ಲವೇ ಇಲ್ಲ

೪೮-೫೧ ಯಾವ ಮಹಾರಾಜನು ಋತ್ವಿಕ್ಕುಗಳ ಮುಖಾಂತರವಾಗಿ ಕೋಟಿ ಗಾಯತ್ರೀ ಹೋಮಗಳನ್ನು ಮಾಡಿಸುವನೋ, ಅಂಥ ಮಹಾರಾಜನಿಗೆ ಯುದ್ಧ ಸಮಯದಲ್ಲಿ ಯಾವ ಶತ್ರುವೂ ಎದುರಾಗಿ ನಿಲ್ಲಲಾರನು ಮತ್ತು ಆ ಮಹಾರಾಜನು ಆ ಸಮರಾಂಗಣದಲ್ಲಿ ಮರಣಹೊಂದಲಾರನು. ಯಾವಾಗಲೂ ಆ ರಾಜನಿಗೆ ರೋಗವೇ ಬರುವುದಿಲ್ಲ ಮತ್ತು ಆತನ ರಾಜ್ಯದಲ್ಲಿ ಅತಿವೃಷ್ಟಿ, ಅನಾವೃಷ್ಟಿ, ಇಲಿ, ಶಲಭ, ಶುಕ, ರಾಕ್ಷಸ, ಇಮುಂತಾದ ಆರು ಈತಿಬಾಧೆಗಳೂ ತಲೆ ಹಾಕುವುದಿಲ್ಲ ಇವೆಲ್ಲಾ ನಾಶಹೊಂದುತ್ತವೆ ಆ ದೇಶದ ನೀರು ಬಹು ರುಚಿಯಾಗಿರುತ್ತದೆ ಸಸ್ಯ ಗಳು ಬಹು ಮಧುರವಾಗಿಯೂ ಹೇರಳವಾಗಿಯೂ ಬೆಳೆಯುತ್ತವೆ ಆತನ ದೇಶದ ಜನರೆಲ್ಲರೂ ಧರ್ಮಿಷ್ಠರಾಗಿಯೇ ಇರುವರೇ ಹೊರತು ಆ ಸ್ಥಳದಲ್ಲಿ ಅಧರ್ಮವು ತಲೆ ಹಾಕುವುದೇ ಇಲ್ಲ ಈ ಕೋಟಿ ಗಾಯತ್ರೀ ಹೋಮದಲ್ಲಿ ಇಪ್ಪತ್ತು ಜನ ಋತ್ವಿಕ್ಕು ಗಳನ್ನು, ಗೊತ್ತುಮಾಡಿಕೊಳ್ಳಬೇಕು. ನೂರು ಜನ ಸಾವಿರ ಮಂದಿಗಳನ್ನು ಗೊತ್ತು ಮಾಡಿದರೆ ಮತ್ತೂ ವಿಶೇಷವೇ ಸರಿ ಋತ್ವಿಕ್ಕುಗಳನ್ನೇ ನಿಯಮಿಸದೇ ರಾಜನಾಗಲೀ, ಬ್ರಾಹ್ಮಣನಾಗಲೀ, ವೈಶ್ಯನಾಗಲೀ ಯಾರೇ ಆದರೂ ಸ್ವಂತವಾಗಿ ಹೋಮಮಾಡಿದರ ಅವರ ಕೋರಿಕೆಗಳೆಲ್ಲವೂ ನೆರವೇರುವುವಲ್ಲದೆ ಅವನು ಹೇಳಿದಂತೆ ಲೋಕವೇ

**ಶತಂ ವಾಥ ಸಹಸ್ರಂ ವಾ ಯ ಇಚ್ಛೇದ್ಭೂತಿಮಾತ್ಮನಃ ।**
**ಕೋಟಿಹೋಮಂ ಸ್ವಯಂ ಯಸ್ತು ಕುರ್ಯಾದ್ಬ್ರಾಹ್ಮಣಸತ್ತಮಃ ॥**

**ಕ್ಷತ್ರಿಯೋವಾಥ ವಾ ವೈಶ್ಯಸ್ತಸ್ಯ ಪುಣ್ಯಫಲಂ ಮಹತ್ ।**
**ಯದ್ಯದಿಚ್ಛತಿ ಕಾಮಾನಾಂ ತತ್ತದಾಪ್ನೋತ್ಯಸಂಶಯಂ ॥ ೫೩ ॥**

**ಸಶರೀರೋಽಪಿ ಚೇದ್ಗಂತುಂ ದಿವಮಿಚ್ಛೇತ್ತದಾಪ್ನುಯಾತ್ ।**
**ಸಾವಿತ್ರೀ ಪರಮಾ ದೇವೀ ಸಾವಿತ್ರೀ ಪಾವನೀ ಪರಂ ॥ ೫೪ ॥**

**ಸರ್ವಕಾಮಪ್ರದಾ ದೇವೀ ಸಾವಿತ್ರೀ ಕಥಿತಾ ತಥಾ ।**
**ಅಭಿಚಾರೇಷು ತಾಂ ದೇವೀಂ ವಿಪರೀತಾಂ ಪ್ರಯೋಜಯೇತ್ ॥ ೫೫ ॥**

**ಕಾರ್ಯಾ ವ್ಯಾಹೃತಯಶ್ಚಾತ್ರ ವಿಪರೀತಾಕ್ಷರಸ್ತಥಾ ।**
**ವಿಪರೀತಾಕ್ಷರಂ ಕಾರ್ಯಂ ಶಿರಶ್ಚ ಮನುಜೇಶ್ವರ ॥ ೫೬ ॥**

---

ನಡೆಯುವುದು ಒಂದು ವೇಳೆ ಅವನು ಈ ಶರೀರ ಸಹಿತವಾಗಿಯೇ ಸ್ವರ್ಗಕ್ಕೇರ ಬೇಕೆಂದು ಬಯಸಿದರೆ ಹಾಗೂ ಆಗಲಡ್ಡಿ ಇಲ್ಲ. ಈ ಸಾವಿತ್ರೀಮಂತ್ರವು ಪರಮ ಪಾವನವು, ಈಮಹಾಮಂತ್ರವು ಸರ್ವೋತ್ತಮವಾದುದು ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕ ಶಕ್ತಿಯೂ ಈ ಗಾಯತ್ರೀ ಮಂತ್ರಕ್ಕಿದೆ

೫೫-೬೫ ಯಾರನ್ನಾದರೂ ಮಾಟಮಾಡಿ ಸಾಯಿಸಬೇಕೆಂದು ಉದ್ದೇಶ ವಿದ್ದರೆ ಈ ಗಾಯತ್ರಿಯನ್ನು ತಲೆ ಕೆಳಗಾಗಿ ಜಪಮಾಡಬೇಕು ವ್ಯಾಹೃತಿಗಳನ್ನೂ ತಲೆ ಕೆಳಗಾಗಿಯೇ ಉಚ್ಚರಿಸಬೇಕು ಹೋಮಕಾಲದಲ್ಲಿ ಸ್ವಾಹಾ ಎಂದು ಹೇಳುವ ಬದಲು ಫಟ್ ಎಂದು ಹೇಳಬೇಕು ಗಾಯತ್ರಿಯನ್ನು ಇಂತಹ ಸಂದರ್ಭಗಳಲ್ಲಿ ಧ್ಯಾನಮಾಡಬೇಕಾದರೆ ಉರಿಯುವ ಬೆಂಕಿಯಂತೆ ಮುಖವಿದೆಯೆಂದು ಭಾವಿಸ ಬೇಕು । ತನ್ನ ಶತ್ರುವಿನ ತಲೆಗೂದಲನ್ನೊಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಲ್ಲಿತ್ರಿಶೂಲವಂ ಪಿಡಿದು ಚುಚ್ಚುತ್ತಿರುವಂತೆಯೂ, ಕೋಪದಿಂದ ಹುಬ್ಬು ಗಂಟು ಹಾಕಿಕೊಂಡು ಭಯಂಕರ ಮುಖದಿಂದ ಶತ್ರುವನ್ನು ಸುಡುತ್ತಿರುವಂತೆಯೂ ಧ್ಯಾನ ಮಾಡಬೇಕು. ಶತ್ರುವನ್ನು ಉಚ್ಚಾಟನೆಮಾಡಿ ಓಡಿಸಬೇಕಾದರೆ ಸುಂಟರ ಗಾಳಿಯ ಆಕಾರದಂತೆ ಧ್ಯಾನಮಾಡಬೇಕು ಮತ್ತು ಆ ಶತ್ರುವನ್ನು ಹೊತ್ತುಕೊಂಡು ಆ ಗಾಳಿಯು ದೂರ ದೇಶಕ್ಕೋಡುತ್ತಿರುವಂತೆಯೂ ಭಾವಿಸಬೇಕು ಈ ಮಾಟ ಮಾಡುವ ಸಮಯದಲ್ಲಿ ವಿಷದಿಂದ ಬೆರೆಸಿದ ಕರೀ ಸಾಸುವೆಯನ್ನು ಬೆಂಕಿಯಲ್ಲಿ

ಆದೌ ಶಿರಃ ಪ್ರಯೋಕ್ತವ್ಯಂ ಪ್ರಣವಾಂತೇ ಚ ಯಾದವ ।
ಸ್ವಾಹಾಸ್ಥಾನೇ ಚ ಫಟ್ಕಾರಂ ಸಾಧ್ಯನಾಮಸಮನ್ವಿತಂ ॥ ೫೭ ॥

ಗಾಯತ್ರೀಂ ಚಿಂತಯೇತ್ತತ್ರ ದೀಪ್ತಾನಲಸಮಪ್ರಭಾಂ ।
ಘಾತಯಂತೀಂ ಚ ಶೂಲೇನ ಕೇಶೇಷ್ವಾಕೃಷ್ಯ ವೈರಿಣಂ ॥ ೫೮ ॥

ನಿರ್ದಹಂತೀಂ ಚ ತಂ ಕ್ರೋಧಾದ್ಭ್ರುಕುಟೀಭೀಷಣಾನನಾಂ ।
ಉಚ್ಚಾಟನೇ ಚ ತಾಂ ದೇವೀಂ ವಾಯುಭೂತಾಂ ವಿಚಿಂತಯೇತ್ ॥ ೫೯ ॥

ವಹಮಾನಾಂ ತಥಾ ಸಾಧ್ಯಂ ತಸ್ಮಾದ್ದೇಶಾತ್ಸುದೂರತಃ ।
ಅಭಿಚಾರೇ ಚ ಹೋತವ್ಯಾ ರಾಜಿಕಾ ವಿಷಮಿಶ್ರಿತಾಃ ॥ ೬೦ ॥

ಸ್ವರಕ್ತಮಿಶ್ರಂ ಹೋತವ್ಯಂ ಕಟುತೈಲಮಥಾಪಿ ವಾ ।
ತತ್ರಾಪಿ ಚ ವಿಷಂ ದೇಯಂ ಹೋಮಕಾಲೇ ಚ ಯತ್ನತಃ ॥ ೬೧ ॥

---

ಸುಡಬೇಕು ಅಥವಾ ತನ್ನ ದೇಹರಕ್ತದಲ್ಲಿ ಕಲಸಿದ ಕಹಿ ಎಣ್ಣೆಯು (ಕಟುಕ ರೋಹಿಣೀ ಎಣ್ಣೆಯು) ನ್ನು ಹೋಮಮಾಡಬೇಕು ಅದಕ್ಕೂ ಸ್ವಲ್ಪ ವಿಷವನ್ನು ಬೆರಸಬೇಕು ಈರೀತಿ ಜಪ, ಧ್ಯಾನ, ಹೋಮಮಾಡುವ ಕಾಲದಲ್ಲೆಲ್ಲಾ ಬಹು ಭಯಂಕರವಾದ ಕ್ರೋಧವನ್ನು ಶತ್ರುವಿನ ಮೇಲೆ ತೋರಿಸುತ್ತಾ ಇರಬೇಕೇ ಹೊರತು ಸೌಮ್ಯ ಭಾವದಿಂದಿರಲೇಕೂಡದು ಹಾಗೇನಾದರೂ ಕೋಪಮಾಡದೆ ಇದ್ದು ಬಿಟ್ಟರೆ ತಾನೇ ನಾಶವಾಗಿ ಹೋಗುತ್ತಾನೆ. ಬುದ್ಧಿವಂತರಾದವರು ಈ ವಿಪರೀತ ಪ್ರಯೋಗ ವನ್ನು ನಿರಪರಾಧಿಗಳ ಮೇಲಾಗಲೀ, ಸ್ವಲ್ಪ ತಪ್ಪು ಮಾಡಿದವರ ಮೇಲಾ ಗಲೀ, ಉಪಯೋಗಿಸಬಾರದು ಆದರ ದೇವ ಬ್ರಾಹ್ಮಣರ ಮೇಲೆ ನಿಷ್ಕಾರಣವಾಗಿ ದ್ರೋಹವನ್ನೆಣಿಸಿ ಅವರ ಜೀವನಕ್ಕೆ ಕಲ್ಲುಹಾಕಿಮಹಾಪರಾಧ ಮಾಡಿದ ನೀಚನನ್ನು ಅವನು ಎಷ್ಟೇ ಬಲಿಷ್ಠನಾದ ಉನ್ನತಾಧಿಕಾರಿಯೇ ಆಗಿರಲಿ ಅಂಥವನನ್ನು ಮಾಟಮಾಡಿ ಸಾಯಿಸಿದರೂ ಏನೂ ದೋಷ ಉಂಟಾಗುವುದಿಲ್ಲ ಧರ್ಮವನ್ನೇ ಆಚರಿಸುತ್ತಿರುವ ಮನುಷ್ಯನ ಮೇಲೂ ಸ್ವಲ್ಪಾಪ ರಾಧಮಾಡಿದವರ ಮೇಲೂ ಅಭಿಚಾರ (ಮಾಟ) ವನ್ನು ಮಾಡಬಾರದು ಬಹು ಜನರಿಗೆ ಅನ್ಯಾಯ (ಕಂಟಕ) ವನ್ನು ಮಾಡಿ ಸರ್ವದಾ ಕೆಟ್ಟ ಬುದ್ಧಿಯಿಂದಲೇ ಕೂಡಿದ ಪಾಪಿಷ್ಠನನ್ನು ಅವನು ತಪ್ಪುಗಾರನೆಂದು ತಿಳಿದು ಈ ವಿಧವಾದ ಮಾಟ

ಮಧ್ಯೇ ಜಹ್ಯಾದ್ಯದಿ ಕ್ರೋಧಂ ಧ್ರುವಂ ಸರ್ವೇತ್ರ ಏವ ತು ।
ಅನಾಗಸಿ ನ ಕರ್ತವ್ಯಮಭಿಚಾರಸ್ತತೋ ಬುಧೈಃ ।
ಅಲ್ಪಾಗಸಿ ನ ಕರ್ತವ್ಯಮಭಿಚಾರಂ ತಥೈವ ತು ॥ ೬೨ ॥

ಮಹಾಪರಾಧಂ ಬಲಿನಂ ದೇವಬ್ರಾಹ್ಮಣಕಂಟಕಂ ।
ಅಭಿಚಾರೇಣ ಯೋ ಹನ್ಯಾನ್ನ ಸ ದೋಷೇಣ ಲಿಪ್ಯತೇ ॥ ೬೩ ॥

ಧರ್ಮಪ್ರಧಾನೇ ತು ನರೇ ಅಲ್ಪಾಗಸಿ ತಥೈವ ತು ।
ಅಭಿಚಾರಂ ನ ಕುರ್ವೀತ ಬಹೂಪಾಯಂ ವಿಚಕ್ಷಣಃ ॥ ೬೪ ॥

ಬಹೂನಾಂ ಕಂಟಕಂ ಯಂ ತು ಪಾಪಾತ್ಮಾನಂ ಸುದುರ್ಮತಿಂ ।
ಹನ್ಯಾತ್ಪ್ರಾಪ್ತಾಪರಾಧಂ ತು ತಸ್ಯ ಪುಣ್ಯಫಲಂ ಭವೇತ್ ॥ ೬೫ ॥

ಯೇ ಭಕ್ತಾಃ ಪುಂಡರೀಕಾಕ್ಷಂ ದೇವದೇವಂ ಜನಾರ್ದನಂ ।
ನ ತಾನಭಿಚರೇಜ್ಜ್ಞಾತು ತತ್ರ ತದ್ವಿಫಲಂ ಭವೇತ್ ॥ ೬೬ ॥

---

ಮಾಡಿಕೊಂಡು ಬಿಟ್ಟರೆ ಅಂತಹ ಪಾಪಿಯನ್ನು ಕೊಂದವನಿಗೆ ವಿಶೇಷ ಪುಣ್ಯವೇ ಲಭಿಸುತ್ತದೆ.

೬೬-೬೭ ಯಾವ ವಿಷ್ಣುಭಕ್ತರು ಸರ್ವದಾ ದೇವದೇವೋತ್ತಮನಾದ ಪುಂಡರೀಕಾಕ್ಷನನ್ನೇ ಸ್ಮರಿಸುತ್ತಿರುವರೋ, ಅಂತಹ ಭಾಗವತೋತ್ತಮರ ಮೇಲೆ ಎಂತಹ ಮಾಟಮಾಡಿದರೂ ಕೆಂದುವುದಿಲ್ಲ. ಮಾಟಮಾಡಿದವನನ್ನೇ ಆ ಮಾಟವು ಕೊಂದು ಬಿಡುತ್ತದೆ ಕೇಶವ ಭಕ್ತರಾದವರು ಮಾಟಕಾಟಕಾಯಗಳಿಂದ ಎಂದಿಗೂ ಸಾಯುವುದಿಲ್ಲ ಆದ್ದರಿಂದ ಅಂತಹ ಸಾಧುಗಳ ಮೇಲೆ ಕೈಮಾಡುವುದಕ್ಕೆ ಹೋಗಬಾರದು ಈ ಗಾಯತ್ರೀಮಾತೆಯು ಧಾತ್ರೀ, ವಿಧಾತ್ರೀ, ಸಾವಿತ್ರೀ, ಅಘವಿನಾಶಿನೀ, ಎಂಬ ಅನಂತನಾಮಗಳಿಂದ ಮೆರೆಯುತ್ತಿರುವಳು ಇಂತಹ ಮಾತೆಯನ್ನು ಪ್ರತಿದಿನವೂ ಪರಿಶುದ್ಧ ಮನಸ್ಸಿನಿಂದ ಜಪಿಸುತ್ತಿರಬೇಕು ಹಿಂದೆಯೇ ಹೇಳಿದಂತೆ ಪ್ರಣವ ಪೂರ್ವಕವಾಗಿ ಸಪ್ತವ್ಯಾಹೃತಿ ಮಂತ್ರಗಳೊಡನೆ ಪ್ರಾಣಾಯಾಮವನ್ನು ಮಾಡಿ ಸಂಕಲ್ಪಮಾಡಿದ ಬಳಿಕ ಗಾಯತ್ರೀ ಧ್ಯಾನಪೂರ್ವಕವಾಗಿ ಜಪಮಾಡಬೇಕು ಈ ಗಾಯತ್ರೀ ಮಂತ್ರಕ್ಕೆ ವಿಶ್ವಾಮಿತ್ರರೇ ಋಷಿಗಳು, ಸೂರ್ಯನೇ ದೇವತ ಗಾಯತ್ರಿಯೇ ಛಂದಸ್ಸು ಮತ್ತು ಈ ಗಾಯತ್ರಿಯು ಇಪ್ಪತ್ತನಾಲ್ಕು ಅಕ್ಷರಗಳಿಂದ

ಸ ಹಿ ಕೇಶವಭಕ್ತಾನಾಮಭಿಚಾರೇಣ ಕರ್ಹಿಚಿತ್ ।
ವಿನಾಶಮಭಿಪದ್ಯೇತ ತಸ್ಮಾತ್ತನ್ನ ಸಮಾಚರೇತ್ ॥ ೬೭ ॥

ಸೇಯಂ ಧಾತ್ರೀ ವಿಧಾತ್ರೀ ಚ ಸಾವಿತ್ರ್ಯಘವಿನಾಶಿನೀ ।
ಪ್ರಾಣಾಯಾಮೇನ ಜಪ್ಯೇನ ತಥೈವಾಂತರ್ಜಲೇನ ಚ ॥ ೬೮ ॥

ಸವ್ಯಾಹೃತೀಕಪ್ರಣವಾ ಜಪ್ತವ್ಯಾ ಶಿರಸಾ ಸಹ ।
ಪ್ರಣವೇನ ತಥಾಽಭ್ಯಸ್ತಾ ವಾಚ್ಯಾ ವ್ಯಾಹೃತಯಃ ಪೃಥಕ್ ॥ ೬೯ ॥

ದೈವತಂ ಸವಿತಾ ತ್ವಸ್ಯಾ ಗಾಯತ್ರೀ ಛಂದ ಏವ ಚ ।
ವಿಶ್ವಾಮಿತ್ರ ಋಷಿಶ್ಚೈವ ಪ್ರೋಚ್ಯತೇ ವಸುಧಾಧಿಪ ॥ ೭೦ ॥

ಕರ್ಮೇಂದ್ರಿಯಾಣಿ ಪಂಚೈವ ಪಂಚ ಬುದ್ಧೀಂದ್ರಿಯಾಣಿ ಚ ।
ಪಂಚೇಂದ್ರಿಯಾರ್ಥಾನ್ಮಹತಾಂ ಭೂತಾನಾಂ ಚೈವ ಪಂಚಕಂ ॥ ೭೧ ॥

ಮನೋ ಬುದ್ಧಿಸ್ತಥೈವಾತ್ಮಾ ಅವ್ಯಕ್ತಂ ಚ ಯದುತ್ತಮಂ ।
ಚತುರ್ವಿಂಶತ್ಯಥೈತಾನಿ ಗಾಯತ್ರ್ಯಾ ಅಕ್ಷರಾಣಿ ತು ॥ ೭೨ ॥

ಪ್ರಣವಂ ಪುರುಷಂ ವಿದ್ಧಿ ಸರ್ವಗಂ ಪಂಚವಿಂಶಕಂ ।
ಸಪ್ತಲೋಕಾನಿ ಯಾನೀಹ ಮಹಾವ್ಯಾಹೃತಯಸ್ತಥಾ ॥ ೭೩ ॥

---

ಕೂಡಿದುದಾಗಿದೆ ಆ ಇಪ್ಪತ್ತನಾಲ್ಕು ಅಕ್ಷರಗಳಾವುವೆಂದರೆ —ಪಂಚ ಕರ್ಮೇಂದ್ರಿಯಗಳು (ವಾಕ್, ಹಸ್ತ, ಪಾದ, ಪಾಯು, ಉಪಸ್ಥ) ಐದು ಜ್ಞಾನೇಂದ್ರಿಯಗಳು ಕಿವಿ, ಚರ್ಮ, ಕಣ್ಣು, ಮೂಗು, ಬಾಯಿ) ಐದು ಭೂತಗಳು (ಪೃಥಿವಿ, ನೀರು, ಬೆಂಕಿ, ಗಾಳಿ, ಆಕಾಶ) ಮತ್ತು ಮನಸ್ಸು ಬುದ್ಧಿ, ಆತ್ಮಾ, ಅವ್ಯಕ್ತ ಎಂಬ ಇಪ್ಪತ್ತನಾಲ್ಕು ತತ್ವಗಳೇ ಇಪ್ಪತ್ನಾಲ್ಕು ಅಕ್ಷರಗಳೆಂದು ತಿಳಿಯಬೇಕು

೭೩-೭೮ ಈ ಗಾಯತ್ರೀ ಮಂತ್ರಕ್ಕೆ ಪ್ರಣವವೆಂಬುದೇ ಪುರುಷನು, ಇಪ್ಪತ್ತನಾಲ್ಕು ತತ್ವಗಳಿಂದೊಡಗೂಡಿದ ಈ ಪುರುಷನು ಸರ್ವ ವ್ಯಾಪಿಯಾಗಿ ಇಪ್ಪತ್ತೈದನೇ ಪುರುಷ ತತ್ವದಿಂದ ಕೂಡಿ ಸಾಕಾರನಾಗಿರುವನೆಂದು ತಿಳಿ ಭೂರಾದಿ ಮಹಾವ್ಯಾಹೃತಿಗಳೇ ಭೂರಾದಿ ಸಪ್ತಲೋಕಗಳೆಂದು ತಿಳಿ ಶಿರಸ್ಸೆಂಬುದೇ ಸಹಸ್ರಾರ ಚಕ್ರ ವಾಸಿಯಾದ ಪರಬ್ರಹ್ಮ (ಪರಮೇಶ್ವರ) ನೆಂದು ತಿಳಿದುಕೋ ಈ ವಿಧ ಸ್ವರೂಪ

ಶಿರಸಶ್ಚ ತಥಾ ವಾಚ್ಯಃ ಪುರುಷಃ ಪರಮೇಶ್ವರಃ ।
ಏವಂವಿಧಾ ಸಾ ಸಾವಿತ್ರೀ ಜಪ್ತವ್ಯಾ ಸತತಂ ಬುಧೈಃ ॥ ೭೪ ॥

ಹೋತವ್ಯಾ ಚ ತಥಾ ಶಕ್ತ್ಯಾ ಸರ್ವಕಾಮಸಮೃದ್ಧಿದಾ ।
ಗಾಯತ್ರೀಮಾತ್ರಶರಣೋ ವರಂ ವಿಪ್ರಃ ಸುಯಂತ್ರಿತಃ ॥ ೭೫ ॥

ನಾಯಂತ್ರಿತಶ್ಚತುರ್ವೇದೀ ಸರ್ವಾಶೀ ಸರ್ವವಿಕ್ರಯೀ ।
ಗಾಯತ್ರೀಂ ಜಪತೇ ಯಸ್ತು ಕಲ್ಯಮುತ್ಥಾಯ ವೈ ದ್ವಿಜಃ ॥ ೭೬ ॥

ಲಿಪ್ಯತೇ ನ ಸ ಪಾಪೇಭ್ಯಃ ಪದ್ಮಪತ್ರಮಿವಾಂಭಸಾ ।
ಕಾಮಕಾಮೋ ಲಭೇತ್ಕಾಮಂ ಗತಿಕಾಮಸ್ತು ಸದ್ಗತಿಂ ।
ಅಕಾಮಸ್ತದವಾಪ್ನೋತಿ ಯದ್ವಿಷ್ಣೋಃ ಪರಮಂ ಪದಂ ॥ ೭೭ ॥

ವುಳ್ಳ ಗಾಯತ್ರೀಮಂತ್ರವನ್ನು ಪ್ರತಿದಿನವೂ ಬ್ರಾಹ್ಮಣರು ತಪ್ಪದೆ ಜಪಮಾಡುತ್ತ ಬಂದರೆ ಮತ್ತು ಹೋಮವನ್ನೂ ಸಹ ಮಾಡುವುದಾದರೆ ಅಂಥವನು ಸಕಲ ಇಷ್ಟಾರ್ಥ ಸಿದ್ಧಿಯನ್ನೂ ಹೊಂದುವರು ಯಾವನು ಚತುರ್ವೇದಗಳನ್ನೂ ಓದಿದ ಇದ್ದಾಗ್ಯೂ ಸಿಕ್ಕಿದ ಕಡ ತಿಂಡಿ ತಿನ್ನುತ್ತಿದ್ದರೂ, ಸಿಕ್ಕಾಬಟ್ಟೆ ವ್ಯಾಪಾರ ಮಾಡುತ್ತಿದ್ದಾಗ್ಯೂ ಗಾಯತ್ರೀ ಮಂತ್ರವನ್ನು ಮಾತ್ರ ತಪ್ಪದೆ ಬೆಳಿಗ್ಗೆದ್ದು ಸ್ನಾನಮಾಡಿ ಜಪಮಾಡುತ್ತ ಬರುವನೋ ।ಅಂಥವನನ್ನು ಕಮಲದಳವನ್ನು ನೀರು ಹೇಗ ಅಂಟುವುದಿಲ್ಲವೋ ಅಂತೆಯೇ ಯಾವ ವಿಧವಾದ ಪಾಪವೂ ಅಂಟುವುದಿಲ್ಲ ಏನಾದರೂ ಆಸೆಯಿಂದ ಗಾಯತ್ರೀ ಜಪಮಾಡಿದರೆ ಆ ಆಸೆಯು ನೆರವೇರುವುದು. ಸದ್ಗತಿಬೇಕೆಂದರೆ ಅದೂ ಸಿಕ್ಕುವುದು. ನಮ್ಮಪ್ಪಾ ! ನನಗೇನೂ ಇಷ್ಟಾರ್ಥಬೇಡ ನಿನ್ನ ಪಾದಪದ್ಮಗಳಲ್ಲಿ ಜಾಗ ವನ್ನು ಕೊಡೋ ಎಂದು ಮಾಡಿದರೆ ಅಂತಹ ಪರಮಪುಣ್ಯಶಾಲಿಗೆ ಖಂಡಿತವಾಗಿ ವಿಷ್ಣುಲೋಕ ವಾಸವೇ ಸಿಗುವುದು. ಅಯ್ಯಾ ವಜ್ರರಾಜ ! ಈ ರೀತಿ ಪ್ರಭಾವ ವುಳ್ಳ ಪರಮಪವಿತ್ರವಾದ ಗಾಯತ್ರೀಮಂತ್ರ ಮಹಾತ್ಮೆಯನ್ನು ನಿನಗೆ ಹೇಳಿದ್ದೇನೆ

ಏವಂ ಪ್ರಥಾವಾ ವರದಾ ಪವಿತ್ರಾ
ಗಾಯತ್ರ್ಯಥೋಕ್ತಾ ತವ ರಾಜಸಿಂಹ ।
ಜಪಂತಿ ಯೇ ತಾಂ ಪರಮಂ ಪ್ರಯಾಂತಿ
ಸ್ಥಾನಂ ಪರಸ್ಯಾಃಪ್ರತಿಮಸ್ಯ ಪುಂಸಃ ॥ ೭೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಗಾಯತ್ರೀಮಾಹಾತ್ಮ್ಯವರ್ಣನಂನಾಮ
ಪಂಚಾಷ ಷಷ್ಟ್ಯಧಿಕಶತತಮೋಽಧ್ಯಾಯಃ.

---

ಇದನ್ನಾರು ಜಪವಮಾಡುತ್ತಲಿರುವರೋ ಅವರು ಪರಮಾತ್ಮನ ಪಾದಾರವಿಂದವನ್ನೇ ಸೇರುತ್ತಾರೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಗಾಯತ್ರೀ ಮಹಾತ್ಮೆ ವರ್ಣನೆಯೆಂಬ
ಒಂದುನೂರ ಅರವತ್ತೈದನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಷಟ್ ಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಮಹಾವರ್ತಿಪ್ರದಾನಸ್ಯ ಯತ್ಫಲಂ ಭೃಗುನಂದನ ।
ತನ್ಮಮಾಚಕ್ಷ್ವ ತತ್ತ್ವೇನ ವಿಧಿ ಕಾಲಂ ತಥೈವ ಚ ॥ ೧ ॥

॥ ಮಾರ್ಕಂಡೇಯ ಉವಾಚ ॥

ಮಹಾವರ್ತಿಃ ಸದಾ ದೇಯಾ ಭೂಮಿಪಾಲ ಮಹಾಫಲಾ ।
ಕೃಷ್ಣಪಕ್ಷೇ ವಿಶೇಷೇಣ ತತ್ರಾಪಿ ಚ ವಿಶೇಷತಃ ॥ ೨ ॥

ಅಮಾವಾಸ್ಯಾ ಚ ನಿರ್ದಿಷ್ಟಾ ದ್ವಾದಶೀ ಚ ಮಹಾಪಲಾ ।
ಆಶ್ವಯುಜ್ಯಾಮತೀತಾಯಾಂ ಕೃಷ್ಣಪಕ್ಷಸ್ಯ ಯಾ ಭವೇತ್ ॥ ೩ ॥

### ನೂರ ಅರವತ್ತಾರನೆಯ ಅಧ್ಯಾಯವು

೧ ವಜ್ರಮಹಾರಾಜನು ಹೇಳುತ್ತಾನ —ಎಲೈ ಮಾರ್ಕಂಡೇಯನೇ! ಹತ್ತಿಯಿಂದ ಮಾಡಿದ ಮಂಗಳಾರತಿಯ ಬತ್ತಿಯನ್ನು ದಾನಮಾಡಿದರೆ (ಮತ್ತು ದೇವರ ಮುಂದ ಹಚ್ಚಿದರೆ) ಏನು ಫಲವಾಗುವುದು ಆ ಬತ್ತಿಯನ್ನು ಹತ್ತಿಸುವ ವಿಧಿಯೇನು! ಕಾಲವಾವುದು! ಈ ಸಂಗತಿಯನ್ನೆಲ್ಲಾ ದಯಮಾಡಿ ತಿಳಿಸು

೨-೧೦ ಮಾರ್ಕಂಡೇಯನು ಹೇಳುತ್ತಾನೆ —ದೇವರ ಮುಂದೆ ಯಾವಾಗಲೂ ಎರಡು ದೊಡ್ಡ ದೀಪಗಳನ್ನಿಡಬೇಕು ಆಶ್ವಯುಜ ಮಾಸ ಕಳೆದು ಕಾರ್ತಿಕ ಮಾಸ ಪ್ರಾಪ್ತವಾದಾಗ ಕೃಷ್ಣಪಕ್ಷ ದ್ವಾದಶೀ ಮತ್ತು ಅಮಾವಾಸ್ಯಾ ದಿವಸಗಳು (ಕೃತ್ತಿಕಾದೀಪ) ದೀಪಕ್ಕೆ ವಿಶೇಷ ದಿವಸವೆನಿಸಿವೆ ಆ ದಿವಸಗಳಲ್ಲಿ ಮಹಾಸ್ವಾಮಿಯು

ಅಮಾವಸ್ಯಾ ತದಾ ಪುಣ್ಯಾ ದ್ವಾದಶೀ ವಾ ವಿಶೇಷತಃ ।
ದೇವಸ್ಯ ದಕ್ಷಿಣೇ ಪಾರ್ಶ್ವೇ ದೇಯಾ ತೈಲತುಲಾ ನೃಪ ॥ ೪ ॥

ಫಲಾಷ್ಟಕಯುತಾಂ ರಾಜನ್ವರ್ತಿಂ ತತ್ರ ತು ದಾಪಯೇತ್ ।
ಮಹಾರಾಜನರಕ್ತೇನ ಸಮುಗ್ರೇಣ ತು ವಾಸಸಾ ॥ ೫ ॥

ವಾಮಪಾರ್ಶ್ವೇ ಚ ದೇವಸ್ಯ ದೇಯಾ ಘೃತತುಲಾ ನೃಪ ।
ಪಲಾಷ್ಟಕಯುತಾಂ ಶುಕ್ಲಾಂ ವರ್ತಿಂ ತತ್ರ ತು ದಾಪಯೇತ್ ॥ ೬ ॥

ವಾಸಸಾ ತು ಸಮಗ್ರೇಣ ಸೋಪವಾಸೋ ಜಿತೇಂದ್ರಿಯಃ ।
ಮಹಾವರ್ತಿದ್ವಯಮಿದಂ ಸಕೃದ್ದತ್ವಾ ಮಹೀಪತೇ ॥ ೭ ॥

ಸ್ವರ್ಲೋಕಂ ಸುಚಿರಂ ಭುಕ್ತ್ವಾ ಜಾಯತೇ ಭೂತಲೇ ಯದಾ ।
ತದಾ ಭವತಿ ಲಕ್ಷ್ಮೀವಾನ್ರೂಪಸೌಭಾಗ್ಯಸಂಶ್ರಿತಃ ॥ ೮ ॥

---

ಮುಂದೆ ಎರಡು ದೀಪ ಸ್ತಂಭಗಳನ್ನಿಟ್ಟು ಅದರಲ್ಲಿ ಒಂದು ಎಣ್ಣೆದೀಪ, ಮತ್ತೊಂದು ತುಪ್ಪದ್ದನ್ನು ಹತ್ತಿಸಬೇಕು. ಆ ದೀಪಕ್ಕೆ ಹಾಕುವ ಬತ್ತಿಗಳು ಎಂಟೆಂಟು ತೊಲ ಹತ್ತಿಯಿಂದ ಮಾಡಿ ದಪ್ಪವಾಗಿರಬೇಕು. ಅವು ಪ್ರಕಾಶಮಾನವಾಗಿ ಉರಿಯುತ್ತಿರುವಂತೆ, ಒಂದನ್ನು ದೇವರ ಬಲಗಡೆ ಮತ್ತೊಂದನ್ನು ದೇವರ ಎಡಗಡೆ ಇಡಬೇಕು. ಬಲಭಾಗದಲ್ಲಿ ಎಣ್ಣೆ ದೀಪವಿರಬೇಕು. ಎಡಭಾಗದಲ್ಲಿ ತುಪ್ಪದ ದೀಪವಿರಬೇಕು. ಈ ದೀಪಗಳನ್ನು ಹತ್ತಿಸುವ, (ದಾನ ಮಾಡುವ) ದಿವಸ ಉಪವಾಸವಿರಬೇಕು. ಈರೀತಿ ದೀಪವನ್ನು ಒಂದಾವರ್ತಿಯಾದರೂ ತನ್ನ ಜನ್ಮದಲ್ಲೊಂದು ದಿನವಾದರೂ, ಅರಾಪ್ತಿ ವೈಕುಂಠನಾರಾಯಣನ ಮುಂದೆ (ವೈಕುಂಠ ಚತುರ್ದಶೀ) ದೀಪವನ್ನು ಹಚ್ಚುವರೋ, ಮತ್ತು ದಾನಮಾಡುವರೋ ಅಂತಹ ಪುಣ್ಯಾತ್ಮರು ಸ್ವರ್ಗಲೋಕದಲ್ಲಿ ಬಹಳಕಾಲ ವಾಸಮಾಡಿ ಅಲ್ಲೇ ಅವರೂ ಇರುತ್ತಾರೆ. ಒಂದು ವೇಳೆ ಭೂಲೋಕದಲ್ಲಿ ಮತ್ತೊಂದು ಬಾರಿ ಹುಟ್ಟಬೇಕಾಗಿ ಬಂದರೆ ಅಷ್ಟೈಶ್ವರ್ಯವಂತರಾಗಿಯೂ ಮಹತ್ತರವಾದ ಸೌಂದರ್ಯ ಸೌಭಾಗ್ಯಗಳಿಂದ ಕೂಡಿದವರಾಗಿಯೂ ಹುಟ್ಟುತ್ತಾರೆ. ಮತ್ತು ಅಂತಹ ಮಹಾಪುರುಷನು ಆ ದೀಪವು ಪ್ರಕಾಶಿಸುವಂತೆ ತನ್ನ ರಾಜ್ಯ, ತನ್ನ ದೇಶ, ತನ್ನ ನಗರ, ತನ್ನ ವಂಶಗಳಲ್ಲಿ ಅತ್ಯುಜ್ವಲವಾದ (ದೀಪದಂತಹ) ಯಶಸ್ಸನ್ನು ಹೊಂದುತ್ತಾನೆ. ಮತ್ತು ಯುದ್ಧದಲ್ಲೂ, ಕಲಹಗಳಲ್ಲೂ, ಜಯಶೀಲನಾಗುತ್ತಾನೆ. ಸಜ್ಜನರ

ರಾಷ್ಟ್ರೇ ಚ ಜಾಯತೇ ಯಸ್ಮಿನ್ದೇಶೇ ಚ ನಗರೇಽಥವಾ ।
ಕುಲೇ ಚ ರಾಜಶಾರ್ದೂಲ ತತ್ರ ಸ್ಯಾದ್ದೀಪವತ್ಪ್ರಭಾ ॥ ೯ ॥

ಅತ್ಯುಜ್ಜ್ವಲಶ್ಚ ಭವತಿ ಯುದ್ಧೇಷು ಕಲಹೇಷು ಚ ।
ಖ್ಯಾತಿಂ ಯಾತಿ ತಥಾ ಲೋಕೇ ಸಜ್ಜನಾನಾಂ ಚ ಸದ್ಗುಣೈಃ ॥ ೧೦ ॥

ಏಕಾಮಪ್ಯಥ ಯೋ ದದ್ಯಾದಭೀಷ್ಟಮನಯೋರ್ದ್ವಯೋಃ ।
ಮಾನುಷ್ಯೇ ಸರ್ವಮಾಪ್ನೋತಿ ತದುಕ್ತಂ ತೇ ಮಯಾಽನಘ ॥ ೧೧ ॥

ಸ್ವರ್ಗೇ ತಥಾಽರ್ಧಮಾಪ್ನೋತಿ ಭಾಗಂ ಕಾಲಂ ಚ ಯಾದವ ।
ಸಾಮಾನ್ಯಸ್ಯ ತು ದೀಪಸ್ಯ ರಾಜನ್ದಾನೇ ಮಹತ್ಫಲಂ ॥ ೧೨ ॥

ಕಿಂ ಪುನರ್ಮಹತೋ ಯಸ್ಯ ಫಲಸ್ಯಾಂತೋ ನ ವಿದ್ಯತೇ ।
ದೀಪದಾನಂ ಪರಂ ಪುಣ್ಯಮನ್ಯದೇವೇಷ್ವಪಿ ಧ್ರುವಂ ॥ ೧೩ ॥

---

ಸದ್ಗುಣಗಳೆಲ್ಲಾ ಅವನಲ್ಲಿ ಮೂರ್ತಿಭವಿಸಿ ಅವರ ದೆಶೆಯಿಂದ ಅವನು ಲೋಕಕೀರ್ತಿಯನ್ನು ಹೊಂದುತ್ತಾನೆ

೧೧-೨೦ ಈರೀತಿ ನಾನು ಎರಡು ಬತ್ತಿಗಳನ್ನು ಹಚ್ಚಬೇಕೆಂದು ಹೇಳಿದನಷ್ಟೆ! ಒಂದು ವೇಳೆ ಈ ಎರಡನ್ನೂ ಹಚ್ಚದೆ ಇದ್ದಾಗ್ಯೂ ಒಂದೇ ಬತ್ತಿಯನ್ನಾದರೂ ಹಚ್ಚಬಹುದು. ಹಾಗೆ ಮಾಡಿದಾಗ್ಯೂ ಮನುಷ್ಯಲೋಕದಲ್ಲಿ ಬೇಕಾದ ಭೋಗ ಭಾಗ್ಯಗಳನ್ನು ಹೊಂದಬಹುದು ಮತ್ತು ಆ ಪುಣ್ಯಾತ್ಮನು ಮೇಲೆ ಹೇಳಿದ ಪುಣ್ಯದಲ್ಲಿ ಅರ್ಧಭಾಗವನ್ನು ಪಡೆಯುವನು ಇದು ಸಾಮಾನ್ಯವಾದ ದೀಪ ದಾನದ ವಿಷಯವಾಯಿತು ಇನ್ನು ಮಹಾವರ್ತಿ ದಾನದ ಫಲವೇನೆಂದು ಹೇಳಲಿ? ಆ ಪುಣ್ಯದ ಫಲಕ್ಕೆ ತುದಿ ಮೊದಲೇ ಇಲ್ಲ ಈ ದೀಪ ದಾನವನ್ನು ಯಾವ ದೇವಸ್ಥಾನದಲ್ಲಾದರೂ ಮಾಡಿದಾಗ್ಯೂ ಮಹಾಪುಣ್ಯವುಂಟೆಂದು ಹೇಳಿದ ಮೇಲೆ ದೇವದೇವೋತ್ತಮನಾದ ಅನಂತನ ಮುಂದೆ ಹಚ್ಚಿದರೆ ಹೇಳುವುದೇನಿದೆ? ಬೆಟ್ಟದ ತುದಿಯಲ್ಲೂ, ನದಿಗಳ ಮರಳು ರಾಶಿಯ ಮೇಲೂ, ನಾಲ್ಕು ದಾರಿ ಕೂಡಿದ ಚೌಕಗಳಲ್ಲೂ ಬ್ರಾಹ್ಮಣರ ಮನೆಗಳಲ್ಲೂ, ಮರಗಳ ಬುಡಗಳಲ್ಲಿಯೂ, ಹಸುಗಳನ್ನು ಕಟ್ಟುವ ಜಾಗಗಳಲ್ಲಿಯೂ, ಭಯಂಕರವಾದ ಅರಣ್ಯಗಳಲ್ಲಿಯೂ ಈ ದೀಪವನ್ನು ಹಚ್ಚಿದರೆ ಮಹತ್ಫಲವೇ ಉಂಟಾಗುತ್ತದೆ ದೀಪವು ಉರಿಯುತ್ತಿರುವಾಗ ಎಷ್ಟು ಬಾರಿ ರೆಪ್ಪೆ ಹೊಡೆಯುವನೋ, ಅಷ್ಟು ವರ್ಷಗಳ ಕಾಲ ದೇವಲೋಕದಲ್ಲಿ ಸೌಖ್ಯವನ್ನನುಭವಿಸುತ್ತಾನೆ.

ದೇವತಾಯತನೇ ಚಾಸಂ ತಥಾಹಮಪಿ ಮೂಷಿಕಾ ।
ಪ್ರದೀಪವರ್ತಿಹರಣೇ ಕೃತಬುದ್ಧಿರ್ವರಾನನಾ ॥ ೨೩ ॥

ಗೃಹೀತಾ ಚ ಮಯಾ ವರ್ತಿರ್ವೃಷದಂಶೋ ರುರಾವ ಚ ।
ನಷ್ಟಾ ಚಾಹಂ ತದಾ ತಸ್ಯ ಮಾರ್ಜಾರಸ್ಯ ಭಯಾತ್ತದಾ ॥ ೨೪ ॥

ವರ್ತಿಪ್ರಾಂತೇನ ನಶ್ಯಂತ್ಯಾ ದೀಪಕಃ ಪ್ರೇರಿತೋ ಮಯಾ ।
ಜಜ್ವಾಲ ಪೂರ್ವವದ್ದೀಪ್ತ್ಯಾ ತಸ್ಮಿನ್ನಾಯತನೇ ಪುನಃ ॥ ೨೫ ॥

ಮೃತಾ ಚಾಹಂ ತದಾ ಜಾತಾ ವಿದರ್ಭರಾಜಕನ್ಯಕಾ ।
ಜಾತಿಸ್ಮರಾಮಹೀಪಸ್ಯ ಮಹಿಷೀ ಚಾರುಧರ್ಮಿಣಃ ॥ ೨೬ ॥

ಏಷ ಪ್ರಭಾವೋ ದೀಪಸ್ಯ ಕಾರ್ತಿಕೇ ಮಾಸಿ ಶೋಭನಾಃ ।
ದತ್ತಾಶ್ಚಾಯತನೇ ವಿಷ್ಣೋರ್ಯಸ್ಯೇಯಂ ವ್ಯುಷ್ಟಿರುತ್ತಮಾ ॥ ೨೭ ॥

---

ಹೊಂದಿದವರೆಲ್ಲರೂ ಉತ್ತಮ ಲೋಕಗಳನ್ನು ಹೊಂದುವರು ಆದಕ್ಕೆ ದೇವಿಕಾ ತೀರ್ಥವೆಂದು ಪರಮಶುಭಕರವಾದ ಹೆಸರು ಆ ನದೀತೀರ್ಥದಲ್ಲಿ ಒಂದೇ ಬಾರಿ ಸ್ನಾನಮಾಡಿದಾಗ್ಯೂ ಗಣಗಳಿಗೆ ಯಜಮಾನನಾಗುತ್ತಾನೆ. ಆ ತೀರ್ಥಕ್ಕೆ ನೃಸಿಂಹ ತೀರ್ಥವೆಂಬ ಹೆಸರಿದ ಆ ಹೆಸರೇಕೆ ಬಂದಿತೆಂದರೆ ಮಹಾವಿಷ್ಣುವು ನೃಸಿಂಹಾವತಾರ ಮಾಡಿದಾಗ ಆ ಶರೀರದಿಂದ ಇಲ್ಲಿ ಸ್ನಾನಮಾಡಿದನು ಆದ್ದರಿಂದಲೇ ಅದಕ್ಕೆ ಇಷ್ಟು ಮಹಿಮೆ --

ಪೂರ್ವದಲ್ಲಿ ಸೌವೀರರಾಜನ ಬಳಿಯಲ್ಲಿ ಮೈತ್ರೇಯನೆಂಬ ಬ್ರಾಹ್ಮಣ ಪುರೋಹಿತನಿದ್ದನು ಆ ಮೈತ್ರೇಯನು ಈ ನೃಸಿಂಹತೀರ್ಥದ ಸಮೀಪದಲ್ಲಿ ಒಂದು ವಿಷ್ಣು ದೇವಸ್ಥಾನವನ್ನು ಕಟ್ಟಿಸಿದನು. ಮತ್ತು ತಾನೂ ಸಹ ಅಲ್ಲಿಯೇ ವಾಸಮಾಡಿಕೊಂಡು ಇರುತ್ತಾ ಪ್ರತಿ ದಿನವೂ ಆ ಸ್ವಾಮಿಯನ್ನು ಪುಷ್ಪ, ಧೂಪ, ದೀಪಾದಿಗಳಿಂದ ಸೇವಿಸುತ್ತಲಿದ್ದನು ಮತ್ತು ಆ ಗುಡಿಯಲ್ಲಿ ಪ್ರತಿ ದಿವಸವೂ ದೀಪಮಾಲೆಗಳನ್ನು ಜ್ವಲನಗೊಳಿಸುತ್ತಲಿದ್ದನು ಒಂದಾನೊಂದು ಕಾರ್ತಿಕಮಾಸದಲ್ಲಿ ಒಂದು ರಾತ್ರಿ ಆ ಗುಡಿಯಲ್ಲಿ ತುಂಬಾ ದೀಪಗಳನ್ನು ಹತ್ತಿಸಿದ್ದರು. ದೇವರಸೇವೆ ಯೆಲ್ಲಾ ಮುಗಿದ ಮೇಲೆ ಜನರೆಲ್ಲರೂ ರಾತ್ರಿ ಮನೆಗಳಿಗೆ ಹೊರಟು ಹೋದರು ಒಳಗುಡಿಯಲ್ಲಿ ದೀಪದ ಹಣತೆಗಳಲ್ಲಿ ದೀಪಗಳು ಉರಿಯು

ತಥಾ ನಿತ್ಯೋಜ್ಜ್ವಲೋ ಲೋಕೇ ನಾಕಭ್ರಷ್ಟೋಽಭಿ ಜಾಯತೇ ।
ಸಮೀಪೇ ತು ಯಥಾ ಲೋಕೇ ಚಕ್ಷೂಂಷಿ ಫಲವಂತಿ ಹಿ ॥ ೨೧ ॥

ತಥಾ ದೀಪಸ್ಯ ದಾತಾರೋ ಭವಂತಿ ಸಫಲೇಕ್ಷಣಾಃ ।
ಯಥೋರ್ಧ್ವಗತಿಮುನಾನಿತ್ಯಂ ರಾಜನ್ದೀಪ ಶಿಖಾ ಶುಭಾ ॥ ೨೨ ॥

ದೀಪದಾನಸ್ತಥೈವೋರ್ಧ್ವಗತಿರ್ಭವತಿ ಶೋಭನಾ ।
ತಸ್ಮಾತ್ಸರ್ವಪ್ರಯತ್ನೇನ ದೀಪಾ ದೇಯಾ ನರೇಶ್ವರ ॥ ೨೩ ॥

ಆಶ್ವಯುಜ್ಯಾಮತೀತಾಯಾಂ ಯಾವದ್ರಾಜೇಂದ್ರ ಕಾರ್ತಿಕಾ ।
ತಾವದ್ದೀಪಪ್ರದಸ್ಯೋಕ್ತಂ ಫಲಂ ರಾಜನ್ವಿಶೇಷತಃ ॥ ೨೪ ॥

ತಾವತ್ಕಾಲಂ ಪ್ರಯಚ್ಛಂತಿ ಯೇ ತು ದೀಪಂ ಸದಾ ನಿಶಿ ।
ತುಂಗೇ ದೇಶೇ ಮಹತ್ತೇಷಾಂ ಬಹುಃ ಪುಣ್ಯಫಲಂ ಭವೇತ್ ॥ ೨೫ ॥

ಯಸ್ಯಾಂಧಕಾರೇ ಗಹನೇ ಪ್ರಾಕಾಶ್ಯಂ ತೇನ ಜಾಯತೇ ।
ಪ್ರಾಕಾಶ್ಯೇ ಯದುಶಾರ್ದೂಲ ತೇನ ಯಾಂತಿ ಹಿ ತತ್ಸುಖಂ ॥ ೨೬ ॥

೨೧-೨೬ ಕಣ್ಣುಗಳುಳ್ಳವನು ತನ್ನ ಸಮೀಪದಲ್ಲಿರುವ ವಸ್ತುಗಳನ್ನೆಲ್ಲಾ ಹೇಗೆ ನೋಡಬಲ್ಲನೋ ಆರೀತಿ ದೀಪವನ್ನು ದೇವರ ಮುಂದೆ ಹಚ್ಚಿದವರು ಸಕಲ ಪುಣ್ಯ ಫಲವಾದ ವಿವಿಧಭೋಗಗಳನ್ನೂ ಅನುಭವಿಸುವರು. ದೀಪ ಉರಿಯುವಾಗ ಅದು ಹೇಗೆ ಮೇಲುಭಾಗಕ್ಕೆ ಹೋಗುವುದೋ ಅದರಂತೆ ದೀಪ ದಾನಮಾಡಿದವನೂ ಸಹ ಮೇಲಿನ (ಊರ್ಧ್ವ) ಲೋಕಗಳಿಗೇ ಹೋಗುತ್ತಾನೆಂಬ ಮಾತು ಖಂಡಿತವಾದುದು ಆದುದರಿಂದಲೈ ರಾಜನೇ! ಏನೇ ಪ್ರಯತ್ನವನ್ನು ಮಾಡಿಯಾದರೂ ದೀಪ ದಾನಮಾಡತಕ್ಕದ್ದು ಬಹು ವಿಶೇಷವಾದುದಯ್ಯ! ಮತ್ತು ಹೇಳುವೆನು ಕೇಳು --ವಜ್ರಮಹಾರಾಜ! ಆಶ್ವಯುಜಮಾಸ ಕಳೆದುಹೋದ ಬಳಿಕ, ಬರುವ ಕಾರ್ತಿಕಮಾಸದಲ್ಲಿ ಒಂದು ತಿಂಗಳ ಕಾಲವೂ ಯಾರು ದೀಪವನ್ನು ಪ್ರತಿ ರಾತ್ರಿಯೂ, ದೇವರ ಮುಂದೆ ಬೆಳಗಿಸುವರೋ ಮತ್ತು ದಾನಮಾಡುವರೋ ಅವರು ಬಹು ಶ್ರೇಷ್ಠವಾದ ಪುಣ್ಯವನ್ನು ಹೊಂದುವರಲ್ಲದ ಆ ದೀಪಗಳು ಅಂಥ ಪುಣ್ಯಾತ್ಮರಿಗೆ ಬಹಳ ಕತ್ತಲೆಯಲ್ಲೂ ಎದುರಿಗ ಹಚ್ಚಿದಂತೆ ಬೆಳಕು ಕಾಣಿಸುತ್ತದ ಯಾವಾಗ ಗಾಢಾಂಧಕಾರದಲ್ಲೂ ಬೆಳಕು ತೋರಿ ಬಂದ ಮೇಲೆ ಅವನ ಪುಣ್ಯಕ್ಕೆ ಎಣೆ ಎಲ್ಲುಂಟು ? ಮತ್ತು

ಶ್ರವಣೇ ದೀಪಕಂ ದತ್ವಾ ನದೀದ್ವಿತಯಸಂಗಮೇ ।
ತೇಜಸ್ವೀ ಚ ಯಶಸ್ವೀ ಚ ರೂಪವಾನಭಿಜಾಯತೇ ॥ ೨೭ ॥

ದೀಪಾ ನದೀಷು ದಾತವ್ಯಾಃ ಕಾರ್ತಿಕ್ಯಾಂ ಚ ವಿಶೇಷತಃ ।
ಅಶ್ವಯುಕ್ಕೃಷ್ಣಪಕ್ಷಸ್ಯ ಯಾ ತು ಪಂಚದಶೀ ಭವೇತ್ ॥ ೨೮ ॥

ಬಿಲ್ವದ್ವಾರೇಷು ದಾತವ್ಯಾಸ್ತಥಾ ದೀಪಾ ಯಥಾವಿಧಿ ।
ಅನ್ಯತ್ರಾಪಿ ತದಾ ದೀಪ್ತೈರ್ಮಹತ್ಪುಣ್ಯಫಲಂ ಲಭೇತ್ ॥ ೨೯ ॥

ಶ್ರವಣದ್ವಾದಶೀಯೋಗೇ ಕೃಷ್ಣಪಕ್ಷೇ ತಥೈವ ಚ ।
ಘೃತೇನ ದೀಪಾ ದಾತವ್ಯಾಸ್ತೈಲೈರ್ವಾ ಯದುನಂದನ ॥ ೩೦ ॥

ವಸಾಮಜ್ಜಾದಿಭಿರ್ದೇಯಾ ನ ತು ದೀಪಾಃ ಕಥಂಚನ ।
ದತ್ವಾ ದೀಪಂ ನ ಕರ್ತವ್ಯಂ ತೇನ ಕರ್ಮ ವಿಜಾನತಾ ॥ ೩೧ ॥

ಕೇಳಯ್ಯಾ! ಎರಡು ಹೊಳೆ ಕೂಡುವ ಸಂಗಮ ಸ್ಥಳದಲ್ಲಿ ಯಾರಾದರೆ ಶ್ರವಣ ದ್ವಾದಶೀದಿವಸ ದೀಪವನ್ನು ಹಚ್ಚುವರೋ ಅಂತಹ ಮಹನೀಯರು ತೇಜಸ್ವಿಗಳಾಗಿಯೂ, ಯಶಸ್ವಿಗಳಾಗಿಯೂ, ರೂಪವಂತರಾಗಿಯೂ ಹುಟ್ಟುತ್ತಾರೆ ಕಾರ್ತಿಕ ಮಾಸದಲ್ಲಿ ನದೀತೀರಗಳಲ್ಲಿ ದೀಪಹಚ್ಚಿ ದಾನಮಾಡಬೇಕು ಅಶ್ವಯುಜ ಬಹುಳ ಅಮಾವಾಸ್ಯಾ ದಿವಸ ಬಿಲ್ವ (ಪತ್ರ) ವೃಕ್ಷದ ಬುಡದಲ್ಲಿ ದೀಪದಾನವು ವಿಶೇಷ ಫಲ ಪ್ರದವಾದುದು ಅಥವಾ ಆ ದಿವಸ ಬೇರೆ ಸ್ಥಳಗಳಲ್ಲಿ ಹಚ್ಚಿದಾಗ್ಯೂ ಫಲವುಂಟು. ಶ್ರವಣ ದ್ವಾದಶೀಯೋಗವಿರುವ ಕೃಷ್ಣಪಕ್ಷದ ಯಾವ ತಿಥಿಯಲ್ಲಿಯೇ ಆಗಲೀ ತುಪ್ಪದ ದೀಪವನ್ನಾಗಲೀ ಎಣ್ಣೇ ದೀಪವನ್ನಾಗಲೀ ಹತ್ತಿಸಿ ದಾನಮಾಡಬೇಕು. ವಸಾಮಜ್ಜಾದಿ (ಕೊಬ್ಬು) ಗಳಿಂದ ಯಾವಾಗಲೂ ದೀಪವನ್ನು ಹಚ್ಚಬಾರದು. ಈಚೀಚಿಗೆ ಅಂಗಡಿಗಳಲ್ಲಿ( ಪ್ರಾಣಿಗಳ ಕೊಬ್ಬನ್ನು )ತುಪ್ಪವೆಂದು ಅಥವಾ ತುಪ್ಪದೂಡನೆ ಬೆರಸಿ ವರ್ತಕರು ಮಾರಲಾರಂಭಿಸಿದ್ದಾರೆ ಜನರು ಅದನ್ನು ಕೊಂಡುಕೊಂಡು ಮೋಸಹೋಗಬಾರದು ಹಳ್ಳಿತುಪ್ಪ, ಅರೆಗಾಸಿದ ಧಾರಾವುರದ ತುಪ್ಪ, ಅಥವಾ ಒಳ್ಳೇ ಬೆಣ್ಣೇಕಾಸಿದ ತುಪ್ಪವೇ ಶ್ರೇಷ್ಠವೇ ಹೊರ್ತು ಬೇರೆ ಯಾವುದನ್ನೂ ತುಪ್ಪ

ನಿರ್ವಾಪಣಂ ಚ ದೀಪಸ್ಯ ಹಿಂಸನಂ ಚ ವಿಗರ್ಹಿತಂ ।
ಯಃ ಕುರ್ಯಾತ್ತೇನ ಕರ್ಮಾಣಿ ಸ್ಯಾದಸೌ ಪುಷ್ಪಿತೇಕ್ಷಣಃ ॥ ೩೨ ॥

ದೀಪಹರ್ತಾ ಭವೇದಂಧಃ ಕಾಣೋ ನಿರ್ವಾಪಕೋ ಭವೇತ್ ।
ದೀಪದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ॥ ೩೩ ॥

ದೀಪದಾನಂ ತು ಕರ್ತವ್ಯಂ ವಿಪ್ರವೇಶ್ಮಸು ಪಂಡಿತೈಃ ।
ದ್ವಿಜವೇಶ್ಮನಿ ಯೋ ದದ್ಯಾತ್ಕಾರ್ತಿಕೇ ಮಾಸಿ ದೀಪಕಂ ॥ ೩೪ ॥

ಅಗ್ನಿಷ್ಟೋಮಫಲಂ ತಸ್ಯ ಪ್ರವದಂತಿ ಮನೀಷಿಣಃ ।
ಪ್ರಾಣಿಜಾಂ ನೀಲರಕ್ತಾಂ ಚ ದೀಪೇ ವರ್ತಿಂ ವಿವರ್ಜಯೇತ್ ॥ ೩೫ ॥

ವಿಶೇಷೇಣ ಪ್ರದಾತವ್ಯಾ ಪದ್ಮಸೂತ್ರಭವಾ ನೃಪ ।
ಪದ್ಮಸೂತ್ರೋದ್ಭವಾಂ ವರ್ತಿಂ ಗಂಧತೈಲೇನ ದೀಪಕೇ ॥ ೩೬ ॥

---

ವೆಂದು ಭಾವಿಸಿ ಹಚ್ಚಲೂಬಾರದು ದಾನಮಾಡಲೂ ಬಾರದು ಉರಿಯುತ್ತಿರುವ ದೀಪವನ್ನು ಯಾರೂ ಯಾವಾಗಲೂ ಆರಿಸಬಾರದು ಮತ್ತು ಹಿಂಸಿಸಬಾರದು ಹಾಗೇನಾದರೂ ಮಾಡಿದರೆ, ಮುಂದಿನ ಜನ್ಮಕ್ಕೆ ಕಣ್ಣುಕಾಣದ್ಕುರುಡನಾಗಬೇಕಾಗುತ್ತದೆ. ಅಥವಾ ಕಣ್ಣಿನಲ್ಲಿ ಹೂಬೀಳುತ್ತದ ಮುಖ್ಯವಾಗಿ ಏನೆಂದರ, ದೀಪದಾನಕ್ಕಿಂತ ವಿಶೇಷವಾದ ಮತ್ತೊಂದು ದಾನವಿಲ್ಲವೇ ಇಲ್ಲ ಈ ದೀಪ ದಾನವನ್ನು ಕಾರ್ತಿಕಮಾಸದಲ್ಲಿ ಬ್ರಾಹ್ಮಣರ ಮನೆಗಳಲ್ಲಿ ದೀಪ ಹಚ್ಚಿ ದೀಪ ದಾನಮಾಡಬೇಕು ಹಾಗೆ ದಾನಮಾಡಿದರೆ ಅಗ್ನಿಷ್ಟೋಮ ಯಾಗಮಾಡಿದ ಫಲವೇ ಬರುವುದು. ಪ್ರಾಣಿಗಳ ಕೊಬ್ಬು, ನೀಲಿ, ಬಣ್ಣದ ಮತ್ತು ಕೆಂಪು ಬಣ್ಣದ ಎಣ್ಣೆಗಳನ್ನು ದೀಪಕ್ಕೆ ಉಪಯೋಗಿಸಬಾರದು ತಾವರೇದಂಟಿನ ನಾರಿನಲ್ಲೂ ಧಾರದ ಬತ್ತಿಮಾಡಿ ಅಂತಹ ಪದ್ಮಸೂತ್ರವನ್ನು ಹೊಸೆದು ಕಂಬದಲ್ಲಿ ಗಂಧವೆಣ್ಣೆಹಾಕಿ ಅದರಲ್ಲಿಟ್ಟು ದಾನಮಾಡಿ (ಹಚ್ಚಿ) ದರೆ ಆರೋಗ್ಯಶಾಲಿಯೂ, ಸೌಭಾಗ್ಯಶಾಲಿಯೂ ಆಗುತ್ತಾನೆ ಕರ್ಪೂರ ದೀಪವನ್ನು ದೇವರ ಮುಂದೆ ಹತ್ತಿಸಿದವನು ಅಶ್ವಮೇಧಯಾಗಮಾಡಿದ ಫಲವನ್ನು ಹೊಂದುತ್ತಾನೆ ಮತ್ತು ತನ್ನ ವಂಶದ ಪಿತೃಗಳನ್ನೆಲ್ಲಾ ಉದ್ಧರಿಸುತ್ತಾನೆ ಎಲ್ಲೈ

ವಿರೋಗಃ ಸುಭಗಶ್ಚೈವ ದತ್ವಾ ಭವತಿ ಮಾನವಃ ।
ದಾತವ್ಯಂ ದೇವದೇವಸ್ಯ ಕರ್ಪೂರೇಣ ಚ ದೀಪಕಂ ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೩೭ ॥

ಏತನ್ಮಯೋಕ್ತಂ ತವ ದೀಪದಾನೇ
ಫಲಂ ಸಮಗ್ರಂ ಯದುವಂಶಚಂದ್ರ ।
ಶ್ರುತ್ವಾ ಯಥಾವತ್ಸತತಂ ತು ದೇಯಾ
ದೀಪಾಸ್ತ್ವಯಾ ವಿಪ್ರಸುರಾಲಯೇಷು ॥ ೩೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ದೀಪದಾನಪ್ರಶಂಸಾ
ನಾಮ ಷಟ್ಷಷ್ಟ್ಯಧಿಕಶತತಮೋಽಧ್ಯಾಯಃ.

---

ವಜ್ರಮಹೀಪಾಲನೇ ! ಈ ರೀತಿ ಇದುವರಿಗೆ ನಾನು ನಿನಗೆ ದೀಪದಾನದ ಫಲವನ್ನು ಸಂಪೂರ್ಣವಾಗಿ ವಿವರವಾಗಿ ಹೇಳಿದ್ದೇನೆ ಇದನ್ನು ನೀನು ಕೇಳಿ ಇದರಂತೆ ದೇವ ಬ್ರಾಹ್ಮಣಗೃಹಗಳಲ್ಲಿ ದೀಪಗಳನ್ನು ಸರ್ವಕಾಲದಲ್ಲೂ ದಾನಮಾಡುತ್ತಾ ಬಾರಯ್ಯಾ ! ನಿನಗೆ ಒಳ್ಳೆಯದಾಗುವುದೆಂದು ಮಾರ್ಕಂಡೇಯರು ವಜ್ರರಾಜನಿಗೆ ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ದೀಪದಾನಪ್ರಶಂಸೆಯೆಂಬ ಹೆಸರಿನ
ಒಂದುನೂರ ಅರವತ್ತಾರನೆಯ ಅಧ್ಯಾಯವು
ಮುಗಿದದು



॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ
ದೀಪದಾನಾಲ್ಲಲಿತಿಕಾ ಯದವಾಪ ಪುರಾ ನೃಪ ॥ ೧ ॥

ಆಸೀಚ್ಚಿತ್ರರಥೋ ನಾಮ ವಿದರ್ಭೇಷು ಮಹೀಪತಿಃ ।
ತಸ್ಯ ಪುತ್ರಶತಂ ರಾಜ್ಞೋ ಜಜ್ಞೇ ಪಂಚದಶೋತ್ತರಂ ॥ ೨ ॥

ಏಕೈವ ಕನ್ಯಾ ತಸ್ಯಾಸೀಲ್ಲಲಿತಾ ನಾಮ ನಾಮತಃ ।
ಸರ್ವಲಕ್ಷಣಸಂಪೂರ್ಣಾ ರೂಪೇಣಾಪ್ರತಿಮಾ ಭುವಿ ॥ ೩ ॥

### ನೂರ ಅರವತ್ತೇಳನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಎಲೈ ಮಹಾರಾಜನೇ! ಈ ದೀಪದಾನದ ವಿಷಯದಲ್ಲಿ ಹಿಂದಿನ ಕಾಲದಲ್ಲಿ ಲಲಿತೆಯೆಂಬುವಳು ಎಂತಹ ಫಲವನ್ನು ಹೊಂದಿದಳೆಂಬ ವಿಚಾರದಲ್ಲಿ ಒಂದು ಹಳೆಯ ಕಥೆಯಿದೆ ಅದನ್ನು ಹೇಳುವೆನು ಕೇಳು

೨ ವಿದರ್ಭದೇಶದಲ್ಲಿ ಚಿತ್ರರಥನೆಂಬ ಧೊರೆಯಿದ್ದನು ಆ ರಾಜನಿಗೆ ಒಂದು ನೂರು ಹದಿನೈದು ಜನ ಗಂಡು ಮಕ್ಕಳಿದ್ದರು.

೩ ಆ ರಾಜನಿಗೆ ಲಲಿತೆಯೆಂಬ ಒಬ್ಬಳೇ ಮಗಳಿದ್ದಳು ಅವಳು ಸರ್ವಲಕ್ಷಣ ಪರಿಪೂರ್ಣಳಾಗಿಯೂ ಭೂಲೋಕದಲ್ಲೇ ಇಲ್ಲದ ಮಹಾ ಸೌಂದರ್ಯದಿಂದಲೂ ಕೂಡಿ ಪ್ರಕಾಶಿಸುತ್ತಲಿದ್ದಳು

ತಾಂ ತದೌ ಕಾಶಿರಾಜಾಯ ಸ ಪಿತಾ ಚಾರಧರ್ಮಿಣೇ ।
ಶತಾನಿ ತಸ್ಯ ಭಾರ್ಯಾಣಾಂ ತ್ರೀಣ್ಯಾಸಂಶ್ಚಾತ್ರ ಧರ್ಮಿಣಃ ॥ ೪ ॥

ತಾಸಾಂ ಮಧ್ಯೇಽಗ್ರಮಹಿಷೀ ಲಲಿತಾಽಸ್ಯ ತದಾಽಭವತ್ ।
ವಿಷ್ಣೋರಾಯತನೇ ತಸ್ಯಾಃ ಸಹಸ್ರಂ ರಾಜಸತ್ತಮ ॥ ೫ ॥

ಪ್ರದೀಪಾನಾಂ ಪ್ರಜ್ವಲತಿ ದಿವಾರಾತ್ರ್ಯಮರಿಂದಮ ।
ತಾಮಿಸ್ರಮಾಶ್ವಯುಕ್ಪಕ್ಷಂ ಶುಕ್ಲಪಕ್ಷಂ ಚ ಕಾರ್ತಿಕಾತ್ ॥ ೬ ॥

ತಸ್ಯಾಃ ಪ್ರಜ್ವಲಿತಂ ದೀಪಮುಚ್ಚಸ್ಥಾನಕೃತಂ ತಥಾ ।
ತಸ್ಮಿನ್ಕಾಲೇ ತಥಾ ನಿತ್ಯಂ ಬ್ರಾಹ್ಮಣಾವಸಥೇಷು ಸಾ ॥ ೭ ॥

ನಿತ್ಯಂ ಭವತಿ ಸಾಯಾಹ್ನೇ ದೀಪಪ್ರೇಕ್ಷಣತತ್ಪರಾ ।
ಚತುಷ್ಪಥೇಷು ರಥ್ಯಾಸು ದೇವತಾಯತನೇಷು ಚ ॥ ೮ ॥

ಚೈತ್ಯವೃಕ್ಷೇಷು ಗೋಷ್ಠೇಷು ಪರ್ವತಾನಾಂ ಚ ಮೂರ್ಧಸು ।
ಪುಲಿನೇಷು ನದೀನಾಂ ಚ ಕೂಪಮೂಲೇಷು ಯಾದವ ॥ ೯ ॥

---

೪-೧೦ "ದೀಸದಾನಮಾಡಿದ ಲಲಿತೆಯ ಕಥೆ" ಮಹಾರಾಜನು ತನ್ನ ಏಕಮಾತ್ರ ಪುತ್ರಿಯಾದ ಲಲಿತೆಯನ್ನು ಧಾರ್ಮಿಕನಾದ ಕಾಶೀರಾಜನಿಗೆ ಮದುವೆ ಮಾಡಿಕೊಟ್ಟನು ಆ ಕಾಶೀರಾಜನಿಗೆ ಮುನ್ನೂರು ಜನ ಹೆಂಡತಿಯರಿದ್ದರು ಈ ಲಲಿತೆಯು ಅವರೆಲ್ಲರಿಗೂ ಅಗ್ರಮಹಿಷಿಯಾಗಿಯೂ ಪಟ್ಟ ಮಹಿಷಿಯಾಗಿಯೂ ಇದ್ದಳು ಈ ಲಲಿತೆಯು ಪ್ರತಿ ಸಿತ್ಯವೂ ಮಾಡುತ್ತಿದ್ದ ಕೆಲಸವೇನೆಂದರೆ -- ವಿಷ್ಣುದೇವಸ್ಥಾನಗಳಲ್ಲಿ ಪ್ರತಿ ದಿವಸವೂ ಅಹೋರಾತ್ರಿಯೆನ್ನದೆ ಒಂದೊಂದು ಸಾವಿರ ದೀಪಗಳನ್ನು ಹತ್ತಿಸುವುದು ಮತ್ತು ಆಶ್ವಯುಜಮಾಸದ ಬಹುಳ ಪಾಡ್ಯಮಿ ಮೊದಲುಗೊಂಡು ಕಾರ್ತಿಕಮಾಸ ಮುಗಿಯುವವರಿಗೂ ಊರಿನಲ್ಲಿ ಎತ್ತರವಾದ ಪ್ರದೇಶಗಳಲ್ಲೆಲ್ಲಾ ಕೃತ್ತಿಕಾ ದೀಪಗಳನ್ನು ಹತ್ತಿಸಿ ಬೆಳಗಿಸುವುದು ಮತ್ತು ಈ ದಿವಸಗಳಲ್ಲಿ ಪ್ರತಿ ದಿನ ಸಾಯಂಕಾಲವೂ ಬ್ರಾಹ್ಮಣರ ಮನೆಗಳಲ್ಲಿ ದೀಪಗಳನ್ನಿಡಿಸಿ ಬೆಳಗಿಸುವುದು ನಾಲ್ಕು ದಾರಿ ಕೂಡಿದ ಸ್ಥಳ (ಸರ್ಕಲ್) ಗಳಲ್ಲೂ ದೇವಸ್ಥಾನಗಳಲ್ಲೂ ನಂದನವನದಲ್ಲಿರುವ ದೊಡ್ಡ ದೊಡ್ಡ ಮರಗಳ ಮೇಲೂ ಬೆಟ್ಟಗಳ ತುದಿಗಳಲ್ಲೂ ಹೊಳೆಯ ಮರಳುಗಳ ಮೇಲೂ ಭಾವೀಕಟ್ಟೆಗಳ ಮೇಲೂ, ದೀಪಗಳ

ತಸ್ಮಿನ್ನೃಪತಿ ಸಾ ಕಾಲೇ ದೀಪದಾನಪರಾಯಣಾ ।
ತಾಂ ಸಪತ್ನ್ಯೋಽಥ ಸಂಗಮ್ಯ ಪಪ್ರಚ್ಛುರಿದಮಾದೃತಾಃ ॥ ೧೦ ॥

॥ ಸಪತ್ನ್ಯ ಊಚುಃ ॥

ಸರ್ವಾನ್ ಧರ್ಮಾನ್ಪರಿತ್ಯಜ್ಯ ಲಲಿತೇ ತ್ವಂ ಸದೈವ ತು ।
ವಿಷ್ಣೋರಾಯತನೇ ಸುಭ್ರೂರ್ದೀಪದಾನಪರಾಯಣಾ ॥ ೧೧ ॥

ತದೇತತ್ಕಥಯಾಸ್ಮಾಕಂ ಲಲಿತೇ ಕೌತುಕಂ ಪರಂ ।
ಮನ್ಯಾಮಹೇ ತ್ವಯಾಽವಶ್ಯಂ ದೀಪದಾನಫಲಂ ಶ್ರುತಂ ॥ ೧೨ ॥

॥ ಲಲಿತಿಕೋವಾಚ ॥

ನಾಹಂ ಮತ್ಸರಿಣೀ ಭದ್ರಾ ನ ಚ ರಾಗಾದಿದೂಷಿತಾ ।
ಏಕಪತ್ನ್ಯಾಶ್ರಯಾ ಯಾತಾ ಭವತ್ಯೋ ಮಮ ಮಾನದಾಃ ॥ ೧೩ ॥

ಅಪ್ಯಥಗ್ಧರ್ಮಚರಣಾಃ ಶೃಣ್ವಂತು ಗದಿತಂ ಮಮ ।
ಮಯ್ಯೈತದ್ದೀಪದಾನಸ್ಯ ಯಥಾ ವೈ ಭುಜ್ಯತೇ ಫಲಂ ॥ ೧೪ ॥

---

ನ್ನಿಡಿಸಿ ಬೆಳಗಿಸುವುದು, ಇದೇ ಲಲಿತೆಯ ನಿತ್ಯ ಕೃತ್ಯವಾಗಿತ್ತು. ಇವಳ ವಿಚಿತ್ರ ವರ್ತನೆಯನ್ನು ನೋಡಿ ಅವಳ ಸವತಿಯರೆಲ್ಲರೂ ಗುಂಪು ಕೂಡಿಕೊಂಡು ಅವಳನ್ನು ಕೇಳಿದುದೇನೆಂದರೆ —

೧೧-೧೨. ಸವತಿಯರು ಹೇಳುತ್ತಾರೆ —ಎಲೌ ಲಲಿತಾದೇವಿಯೇ! ನೀನು ಇತರ ಸಕಲ ಧರ್ಮಗಳನ್ನೂ ಬಿಟ್ಟು ಪ್ರತಿ ದಿವಸವೂ ವಿಷ್ಣುದೇವಾಲಯವೇ ಮುಂತಾದ ಪರಮಪಾವನ ಪ್ರದೇಶಗಳಲ್ಲಿ ದೀಪವನ್ನು ಬೆಳಗಿಸುತ್ತಿರುವ ಕಾರಣ ವೇನು! ಇದನ್ನು ನೋಡಿ ನಮಗೆಲ್ಲರಿಗೂ ಪರಮಾಶ್ಚರ್ಯವಾಗಿದೆ ಈ ದೀಪ ಜ್ವಾಲನ (ದಾನ) ದಿಂದ ಏನು ಫಲವೆಂಬುದನ್ನು ನಿನ್ನಿಂದಲೇ ಕೇಳಿ ತಿಳಿದುಕೊಳ್ಳ ಬೇಕೆಂದು ತುಂಬಾ ಆಶೆಯಾಗಿದೆ ಎಂದು ಪ್ರಶ್ನಿಸಲು.

೧೩-೧೪. ಲಲಿತೆಯು ಹೇಳುತ್ತಾಳೆ —ಅಮ್ಮ! ನೀವೆಲ್ಲರೂ ಕೇಳಿರಿ. ನನಗೆ ಮತ್ಸರ (ಹೊಟ್ಟೆಕಿಚ್ಚು) ವೆಂದರೇನೆಂಬುದೇ ತಿಳಿಯದು ನನಗೆ ಯಾರ ಮೇಲೂ ರಾಗದ್ವೇಷಾದಿಗಳೂ ಸಹ ಇಲ್ಲ ನೀವೆಲ್ಲರೂ ನನಗೆ ಆಪ್ತರು ನನಗೆ ದೀಪ ದಾನ ವಿನಹ ಬೇರೆ ಧರ್ಮವೇ ತಿಳಿಯದು ನನಗೆ ಈ ದೀಪಜ್ವಾಲನೆಯಿಂದ

ಹರಸ್ಯ ದಯಿತಾ ಭಾರ್ಯಾ ಶೈಲರಾಜಸುತಾ ವರಾ ।
ಉಮಾದೇವೀತಿ ಮದ್ರೇಷು ದೇವಿಕಾ ಯಾ ಸರಿದ್ವರಾ　　॥ ೧೫ ॥

ನರಾಣಾಮನುಕಂಪಾರ್ಥಂ ಬ್ರಾಹ್ಮಣೈರವತಾರಿತಾ ।
ತೀರಯೋರುಭಯೋಸ್ತಸ್ಯಾಃ ಕ್ಷೇತ್ರಂ ಕ್ರೋಶಚತುಷ್ಟಯಂ　　॥ ೧೬ ॥

ತಸ್ಮಿಂಸ್ತೀರ್ಥೇ ತು ಪಾನೀಯಂ ಸರ್ವತೀರ್ಥಪ್ರಕಲ್ಪಿತಂ ।
ತಸ್ಮಿಂಸ್ತೀರ್ಥೇ ಮೃತಾ ಮರ್ತ್ಯಾಃ ಪ್ರಾಪ್ನುವಂತಿ ಶುಭಾಂ ಗತಿಂ　　॥ ೧೭ ॥

ಶ್ರುತಾಭಿಲಷಿತಾ ದೃಷ್ಟ್ವಾ ದೇವಿಕಾ ಪಾಪನಾಶಿನೀ ।
ತಸ್ಯಾಂ ಸ್ನಾತ್ವಾ ಸಕೃನ್ಮರ್ತ್ಯೋ ಗಾಣಾಪತ್ಯಮವಾಪ್ನುಯಾತ್　　॥ ೧೮ ॥

ತಸ್ಯಾಸ್ತೀರ್ಥಂ ನೃಸಿಂಹಾಖ್ಯಂ ಸರ್ವಕಲ್ಮಷನಾಶನಂ ।
ನೃಸಿಂಹವಪುಷಾ ಸ್ನಾನಂ ಕೃತಂ ಯತ್ರ ಪುರಾ ಶುಭಾ　　॥ ೧೯ ॥

ಸೌವೀರರಾಜಸ್ಯ ಪುರಾ ಮೈತ್ರೇಯೋಽಭೂತ್ಪುರೋಹಿತಃ ।
ತಸ್ಮಿಂಸ್ತೀರ್ಥೇ ತದಾ ತೇನ ವಿಷ್ಣೋರಾಯತನಂ ಕೃತಂ　　॥ ೨೦ ॥

ಅಹನ್ಯಹನಿ ಶುಶ್ರೂಷಾಂ ಪುಷ್ಪಧೂಪಾದಿಲೇಪನೈಃ ।
ದೀಪದಾನಾದಿಭಿಶ್ಚೈವ ಚಕ್ರೇ ತತ್ರ ಸ ವೈ ದ್ವಿಜಃ　　॥ ೨೧ ॥

ಕಾರ್ತಿಕೇ ದೀಪಕಾಸ್ತತ್ರ ಪ್ರದತ್ತಾಸ್ತೇನ ಚೈಕದಾ ।
ಆಸೀನ್ನಿರ್ವಾಣಭೂಯಿಷ್ಠೋ ದೇವಸ್ಯ ಪುರತೋ ನಿಶಿ　　॥ ೨೨ ॥

---

ಎಂತಹ ಪ್ರಯೋಜನವುಂಟಾಯಿತೆಂಬ ವಿಚಾರವನ್ನು ನಿಮ್ಮೊಡನೆ ಹೇಳುವೆನು ಕೇಳಿರಿ ಹಿಮವಂತನ ಮಗಳಾದ ಉಮಾದೇವಿಯು ಈಶ್ವರನ ಪ್ರಾಣಕಾಂತೆ ಆ ಉಮಾದೇವಿಯು ಮದ್ರದೇಶದಲ್ಲಿ ನದೀರೂಪದಿಂದ ಪ್ರವಹಿಸುತ್ತಲಿರುವಳು ಲೋಕೋಪಕಾರಕ್ಕಾಗಿ ಆ ನದಿಯು ಬ್ರಾಹ್ಮಣ ಶ್ರೇಣಿಗಳ ಮಧ್ಯದಲ್ಲಿ ಹರಿದು ಹೋಗುತ್ತಲಿದೆ

೧೬-೨೨　ಆ ಹೊಳೆಯ ಎರಡು ದಡಗಳಲ್ಲಿಯೂ ನಾಲ್ಕು ಗಾವುದ ದೂರದ ತನಕ ಎಷ್ಟೋ ಕ್ಷೇತ್ರಗಳಿವೆ ಅದರಲ್ಲೊಂದು ತೀರ್ಥವು ಸಕಲ ತೀರ್ಥ ಜಲಗಳನ್ನೂ ಒಳಗೊಂಡು ಬಹು ರುಚಿಕರವಾದ ನೀರಿನಿಂದ ಕೂಡಿದೆ ಆ ತೀರ್ಥದಲ್ಲಿ ಮರಣ

ದೇವತಾಯತನೇ ಚಾಸಂ ತಥಾಹಮಪಿ ಮೂಷಿಕಾ ।
ಪ್ರದೀಪವರ್ತಿಹರಣೇ ಕೃತಬುದ್ಧಿರ್ವರಾನನಾ ॥ ೨೩ ॥

ಗೃಹೀತಾ ಚ ಮಯಾ ವರ್ತಿರ್ವೃಷದಂಶೋ ರುರಾವ ಚ ।
ನಷ್ಟಾ ಚಾಹಂ ತದಾ ತಸ್ಯ ಮಾರ್ಜಾರಸ್ಯ ಭಯಾತ್ತದಾ ॥ ೨೪ ॥

ವರ್ತಿಪ್ರಾಂತೇನ ನಶ್ಯಂತ್ಯಾ ದೀಪಕಃ ಪ್ರೇರಿತೋ ಮಯಾ ।
ಜಜ್ವಾಲ ಪೂರ್ವವದ್ದೀಪ್ತ್ಯಾ ತಸ್ಮಿನ್ನಾಯತನೇ ಪುನಃ ॥ ೨೫ ॥

ಮೃತಾ ಚಾಹಂ ತದಾ ಜಾತಾ ವಿದರ್ಭರಾಜಕನ್ಯಕಾ ।
ಜಾತಿಸ್ಮರಾಮಹೀಪಸ್ಯ ಮಹಿಷೀ ಚಾರುಧರ್ಮಿಣಃ ॥ ೨೬ ॥

ಏಷ ಪ್ರಭಾವೋ ದೀಪಸ್ಯ ಕಾರ್ತಿಕೇ ಮಾಸಿ ಶೋಭನಾಃ ।
ದತ್ತಾಶ್ಚಾಯತನೇ ವಿಷ್ಣೋರ್ಯಸ್ಯೇಯಂ ವೃಷ್ಟಿರುತ್ತಮಾ ॥ ೨೭ ॥

---

ಹೊಂದಿದವರೆಲ್ಲರೂ ಉತ್ತಮ ಲೋಕಗಳನ್ನು ಹೊಂದುವರು ಆದಕ್ಕೆ ದೇವಿಕಾ ತೀರ್ಥವೆಂದು ಪರಮಶುಭಕರವಾದ ಹೆಸರು ಆ ನದೀತೀರ್ಥದಲ್ಲಿ ಒಂದೇ ಬಾರಿ ಸ್ನಾನಮಾಡಿದಾಗ್ಯೂ ಗಣಗಳಿಗೆ ಯಜಮಾನನಾಗುತ್ತಾನೆ. ಆ ತೀರ್ಥಕ್ಕೆ ನೃಸಿಂಹ ತೀರ್ಥವೆಂಬ ಹೆಸರಿದ ಆ ಹೆಸರೇಕೆ ಬಂದಿತೆಂದರೆ ಮಹಾವಿಷ್ಣುವು ನೃಸಿಂಹಾವತಾರ ಮಾಡಿದಾಗ ಆ ಶರೀರದಿಂದ ಇಲ್ಲಿ ಸ್ನಾನಮಾಡಿದನು ಆದ್ದರಿಂದಲೇ ಆದಕ್ಕೆ ಇಷ್ಟು ಮಹಿಮೆ --

ಪೂರ್ವದಲ್ಲಿ ಸೌವೀರರಾಜನ ಬಳಿಯಲ್ಲಿ ಮೈತ್ರೇಯನೆಂಬ ಬ್ರಾಹ್ಮಣ ಪುರೋಹಿತನಿದ್ದನು ಆ ಮೈತ್ರೇಯನು ಈ ನೃಸಿಂಹತೀರ್ಥದ ಸಮೀಪದಲ್ಲಿ ಒಂದು ವಿಷ್ಣು ದೇವಸ್ಥಾನವನ್ನು ಕಟ್ಟಿಸಿದನು. ಮತ್ತು ತಾನೂ ಸಹ ಅಲ್ಲಿಯೇ ವಾಸಮಾಡಿಕೊಂಡು ಇರುತ್ತಾ ಪ್ರತಿ ದಿನವೂ ಆ ಸ್ವಾಮಿಯನ್ನು ಪುಷ್ಪ, ಧೂಪ, ದೀಪಾದಿಗಳಿಂದ ಸೇವಿಸುತ್ತಲಿದ್ದನು ಮತ್ತು ಆ ಗುಡಿಯಲ್ಲಿ ಪ್ರತಿ ದಿವಸವೂ ದೀಪಮಾಲೆಗಳನ್ನು ಜ್ವಲನಗೊಳಿಸುತ್ತಲಿದ್ದನು. ಒಂದಾನೊಂದು ಕಾರ್ತಿಕಮಾಸದಲ್ಲಿ ಒಂದು ರಾತ್ರಿ ಆ ಗುಡಿಯಲ್ಲಿ ತುಂಬಾ ದೀಪಗಳನ್ನು ಹತ್ತಿಸಿದ್ದರು. ದೇವರಸೇವೆ ಯೆಲ್ಲಾ ಮುಗಿದ ಮೇಲೆ ಜನರೆಲ್ಲರೂ ರಾತ್ರಿ ಮನೆಗಳಿಗೆ ಹೊರಟು ಹೋದರು
ಒಳಗುಡಿಯಲ್ಲಿ ದೀಪದ ಹಣತೆಗಳಲ್ಲಿ ದೀಪಗಳು ಉರಿಯು

**ಯದಿ ವೋ ನಾಸ್ತಿ ಮಾತ್ಸರ್ಯಂ ದೀಪಾ ದೇಯಾಃ ಸದಾ ಶುಭಾಃ ।
ಅಸಂಕಲ್ಪಿತಮಪ್ಯೇತತ್ಪ್ರೇರಣಂ ಯತ್ಕೃತಂ ಮಯಾ ॥ ೨೮ ॥**

**ಕೇಶವಾಲಯದೀಪಸ್ಯ ತಸ್ಯೇದಂ ಭುಜ್ಯತೇ ಫಲಂ ।
ಏತಸ್ಮಾತ್ಕಾರಣಾದ್ದೀಪಾನಹಮೇತಾನಹರ್ನಿಶಂ ॥ ೨೯ ॥**

ತ್ತಿದ್ದುವು ಜನರಾರೂ ಇರಲಿಲ್ಲ ನಾನು ಆಗ ಆ ಗುಡಿಯಲ್ಲಿ ಇಲಿಯ ಬಿಲ ವಲ್ಲಿದ್ದು ದೇವಸ್ಥಾನದಲ್ಲಿ ಸಿಕ್ಕಿದ ಆಹಾರವನ್ನು ತಿನ್ನುತ್ತಿದ್ದೆನು ಜನರಾರೂ ಇಲ್ಲದೆ ದೀಪಗಳು ಉರಿಯುತ್ತಿದ್ದಾಗ ನಾನು ದೀಪದ ಬತ್ತಿಗಳನ್ನು ತಿನ್ನಬೇಕೆಂದಾಶಿಸಿ ಒಂದು ದೀಪದ ಬತ್ತಿಗೆ ಬಾಯಿ ಹಾಕಿದೆನು ಅಷ್ಟು ಹೊತ್ತಿಗೆ ಸರಿಯಾಗಿ ಅಲ್ಲೊಂದು ಬೆಕ್ಕು ಮಿಯಾವ್ ಎಂದು ಕೂಗಿತು ನನಗೆ ಬಹು ದಿಗಿಲಾಗಿ ಆ ಬೆಕ್ಕು ನನ್ನನ್ನಿಲ್ಲಿ ತಿಂದುಬಿಡುವುದೋ ಎಂಬ ಅಂಜಿಕೆಯಿಂದ ಆ ದೀಪದ ಹಣತೆಯೊಳಗಿದ್ದ ಎಣ್ಣೆ ಯೊಳಗೆ ಮುಳುಗಿಕೊಂಡೆನು. ಮತ್ತು ಕೂಡಲೇ ಸತ್ತುಹೋದೆನು ನಾನು ಬಾಯಿ ಹಾಕಿದ್ದ ಬತ್ತಿಯು ನನ್ನ ಮೃತದೇಹಕ್ಕೆ ವ್ಯಾಪಿಸಿ ಹತ್ತಿಕೊಂಡು ಭಗ್ಗನೆ ಬಹು ಪ್ರಕಾಶವಾಗಿ ಉರಿಯಿತು ಆ ಜನ್ಮವು ಕಳೆದು ಈಗ ನಾನು ಪೂರ್ವ ಜನ್ಮ ಸ್ಮರಣೆಯನ್ನು ಹೊಂದಿದವಳಾಗಿ ವಿದರ್ಭರಾಜನ ಮಗಳಾಗಿ ಹುಟ್ಟಿರುತ್ತೇನೆ ಮತ್ತು ನಿಮ್ಮ ಪತಿಯ ಸಹ ಧರ್ಮಿಣಿಯಾಗಿ ನಿಮ್ಮ ಮುಂದೆ ನಿಂತಿರುತ್ತೇನೆ ಕೇಳಿದಿರಾ! ನನ್ನ ಕಥೆಯನ್ನು, ಈ ಕಾರ್ತಿಕ ದೀಪದ ಮಹಿಮೆಯು ಇಷ್ಟು ಪ್ರಭಾವವುಳ್ಳದ್ದೆಂದು ತಿಳಿಯಿರಿ ನನ್ನ ದೇಹವು ದೀಪಕ್ಕೆ ಸಿಕ್ಕಿ ವಿಷ್ಣುಮಂದಿರದಲ್ಲಿ ನಷ್ಟವಾದುದರಿಂದಲೇ ಇಂತಹ ಜನ್ಮವು ನನಗೆ ಲಭಿಸಿರುವುದು

೨೮-೨೯ ಸೋದರಿಯರೇ! ಕೇಳಿರಿ ನಿಮಗೆ ನಿಜವಾಗಿ ಮಾತ್ಸರ್ಯವಿಲ್ಲದೆ ಇರುವುದಾದರೆ ನೀವೂ ಕೂಡ ದೀಪವನ್ನು ಹತ್ತಿಸಿರಿ ನಾನು ಜನ್ಮಾಂತರ ಸ್ಮರಣೆ ಯಿಂದ ಈ ಕೆಲಸವನ್ನು ಮಾಡುತ್ತಿರುವೆನಲ್ಲದೆ ನನಗೆ ಸುತರಾಂ ಈ ಕೆಲಸ ಮಾಡ ಬೇಕೆಂಬ ಸಂಕಲ್ಪವೇನೂ, ಇಲ್ಲವೇ ಇಲ್ಲ ಹಿಂದೆ ವಿಷ್ಣು ದೇವಾಲಯ ದೀಪದ ದರ್ಶನದಿಂದಲೂ ಅಲ್ಲಿಯ ಮೃತಿಯಿಂದಲೂ ನಾನೂ ಇಂತಹ ಉತ್ತಮ ಜನ್ಮದಲ್ಲಿ ಜನಿಸಿ ಮಹಾರಾಣಿಯಾಗಿ ಈ ಮಹಾಫಲವನ್ನನುಭವಿಸುತ್ತಿರುವೆನಲ್ಲವೆ ಆ ಪುಣ್ಯ ಕಾರ್ಯವನ್ನು ಸ್ಮರಿಸಿ ಈಗಲೂ ಅಹೋರಾತ್ರಿಗಳಲ್ಲಿ ದೇವಾರಾಮಾದಿಗಳಲ್ಲಿ ದೀಪ ವನ್ನು ಹತ್ತಿಸುತ್ತಿರುತ್ತೇನೆ ನನಗೆ ಈ ದೀಪದಾನದ ಮಹಿಮೆಯು ಜನ್ಮಾಂತರ ಸಂಸ್ಕಾರದಿಂದಲೇ ಬಂದುದಾಗಿದೆ

ಪ್ರಯಚ್ಛಾಮಿ ಹರೇರ್ಧಾಮ್ನಿ ಜ್ಞಾನಸ್ಯ ಚ ಹಿ ಯತ್ಫಲಂ ।
॥ ಮಾರ್ಕಂಡೇಯ ಉವಾಚ ॥
ಏವಮುಕ್ತಾಃ ಸಪತ್ನ್ಯಸ್ತಾ ದೀಪದಾನಪರಾಯಣಾಃ ॥ ೩೦ ॥

ಬಭೂವುರ್ದೇವದೇವಸ್ಯ ಕೇಶವಸ್ಯ ಸದಾ ಗೃಹೇ ।
ತತಃ ಕಾಲೇನ ಮಹತಾ ತೇನ ರಾಜ್ಞಾ ಮಹಾತ್ಮನಾ ।
ವಿಷ್ಣುಲೋಕಮನುಪ್ರಾಪ್ತಾಃ ಪಂಚತ್ವಂ ಪ್ರಾಪ್ಯ ಮಾನದ ॥ ೩೧ ॥

ತಂ ಲೋಕಮಾಸಾದ್ಯ ನೃಪೇಣ ಸಾರ್ಧಂ
ಸಾ ರಾಜಪುತ್ರೀ ಕಮಲಾಭರೂಪಾ ।
ರೇಮೇ ಮಹೀಪಾಲ ಮುದಾ ಸಮೇತಾ
ದೀಪಪ್ರದಾನಾಜ್ಜ್ವಲನಾದ್ವಿಮುಕ್ತಾ ॥ ೩೨ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ದೀಪಮಾಹಾತ್ಮ್ಯೇ
ಲಲಿತಿಕೋಪಾಖ್ಯಾನಂ ನಾಮ ಸಪ್ತಷಷ್ಟ್ಯಧಿಕ
ಶತತಮೋಽಧ್ಯಾಯಃ.

೩೦-೩೨ ಮಾರ್ಕಂಡೇಯನು ಹೇಳುತ್ತಾನೆ -ಈರೀತಿ ತಮ್ಮ ಸವತಿಯಾದ ಲಲಿತೆಯು ಹೇಳಿದ ಮಾತನ್ನು ಕೇಳಿ ಉಳಿದ ರಾಜಮಹಿಷಿಯರೆಲ್ಲರೂ ತಾವೂ ಸಹ ಅಂದಿನಿಂದ ಕೇಶವ ದೇವಸ್ಥಾನಾದಿಗಳಲ್ಲಿ ದೀಪದಾನ (ಜ್ವಲನ) ಮಾಡಲಿಕ್ಕಾರಂಭಿಸಿದರು ಹೀಗೆ ಬಹುಕಾಲದವರೆವಿಗೆ ರಾಜನೊಡನೆ ಅವರೆಲ್ಲರೂ ಭೋಗಭಾಗ್ಯಗಳನ್ನನುಭವಿಸಿದವರಾಗಿ ಕಾಲಗತಿಯೊದಗಲು ತಮ್ಮ ಪತಿಯೊಡನ ಸಾಕ್ಷಾತ್ವೈಕುಂಠವಾಸವನ್ನೇ ಹೊಂದಿದರು

ಇಲ್ಲಿಗ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ದೀಪಮಾಹಾತ್ಮ್ಯೆಯಲ್ಲಿ ಲಲಿತೋಪಾಖ್ಯಾನ
ವೆಂಬ ಹೆಸರಿನ ಒಂದುನೂರ ಅರವತ್ತೇಳನೆಯ
ಅಧ್ಯಾಯವು ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ||ಅಷ್ಟ ಷಷ್ಟ್ಯಧಿಕಶತತಮೋಧ್ಯಾಯಃ||

॥ ವಜ್ರ ಉವಾಚ ॥

ಉಪವಾಸಾಸಮರ್ಥಾನಾಂ ಹೀನಾನಾಂ ದ್ರವಿಣೇನ ಚ ।
ಕರ್ಮಣಾ ಕೇನ ಧರ್ಮಜ್ಞ ತೋಷಮಾಯಾತಿ ಶಂಕರಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಸಂತಿಪುಷ್ಪಾಣ್ಯರಣ್ಯೇಷು ಮೂಲಾನಿ ಚ ಫಲಾನಿ ಚ ।
ಸ್ವಯಂ ಗ್ರಾಹ್ಯಾಣಿ ರಾಜೇಂದ್ರ ಯೈಸ್ತುಷ್ಯತಿ ಜನಾರ್ದನಃ ॥ ೨ ॥

ಚಂದ್ರಃ ಸಾಮಾನ್ಯದೀಪೋಽಯಂ ವಿಭವೈಃ ಕಿಂ ಪ್ರಯೋಜನಂ ।
ಯಥಾಲಭ್ಯೇನ ರಾಜೇಂದ್ರ ಯೈಸ್ತುಷ್ಯತಿ ಜನಾರ್ದನಃ ॥ ೩ ॥

## ನೂರ ಅರವತ್ತೆಂಟನೆಯ ಅಧ್ಯಾಯವು.
## ದೇವತಾರ್ಚನೆಯ ಮಹಿಮೆ

೧ ವಜ್ರಮಹಾರಾಜನು ಕೇಳುತ್ತಾನೆ —ಎಲೈ ಧರ್ಮಜ್ಞನಾದ ಮಾರ್ಕಂಡೇಯ ಋಷಿಯೇ! ಉಪವಾಸಮಾಡುವುದಕ್ಕೂ ಸಹ ಶಕ್ತಿಯಿಲ್ಲದೆ ಇರುವ ಬಡವರಾದ ಜನರು ಯಾವ ವಿಧವಾದ ಕರ್ಮವನ್ನು ಮಾಡಿದರೆ ಭಗವಂತನು ಸಂತೋಷಪಡುತ್ತಾನೋ ಅಂತಹ ಒಂದು ಕರ್ಮವನ್ನು ತಿಳಿಸಬೇಕು

೨ ಮಾರ್ಕಂಡೇಯ ಮಹರ್ಷಿಯು ಉತ್ತರಕೊಡುತ್ತಾನೆ —ಅರಣ್ಯದಲ್ಲಿ ಬೇಕಾದಷ್ಟು ಹೂವುಗಳೂ ಗೆಡ್ಡೆ, ಗೆಣಸುಗಳೂ ವಿವಿಧವಾದ ಹಣ್ಣುಹಂಪಲುಗಳೂ ತಾನೇ ತಾನಾಗಿ ದೊರೆಯುತ್ತವೆ ಇವುಗಳಿಂದ ಪರಮಾತ್ಮನನ್ನು ತೃಪ್ತಿಪಡಿಸಿದರೆ ಸ್ವಾಮಿಯು ಪ್ರಸನ್ನನಾಗುತ್ತಾನೆ

೩-೪. ಚಂದ್ರನು ಬೆಳದಿಂಗಳನ್ನು ಚೆಲ್ಲುತ್ತಾ ಎಲ್ಲೆಲ್ಲೂ ಬೆಳಗುತ್ತಲಿರುವಾಗ

ಫಲಮೂಲಾಶನೋಽರಣ್ಯೇ ಕುಸುಮೈರ್ಮಧುಸೂದನಂ ।
ಸಂಪೂಜ್ಯ ಸತತಂ ಕಾಮಾನಭೀಷ್ಟಾನ್ಪ್ರತಿಪದ್ಯತೇ ॥ ೪ ॥

ಅಕಾಮಸ್ತದವಾಪ್ನೋತಿ ಯದ್ವಿಷ್ಣೋಃ ಪರಮಂ ಪದಂ ।
ಅರಣ್ಯೇಷು ನರಃ ಕೃತ್ವಾ ದೇವದೇವಸ್ಯ ಚಾರ್ಚನಂ ॥ ೫ ॥

ಅತೀತಮುದ್ಧರೇದ್ರಾಜನ್ಫಲೇನ ಸ ಶತಂ ನೃಣಾಂ ।
ಭವಿಷ್ಯಾಣಾಂ ಶತಂ ಚೈವ ನರಾಣಾಂ ಯದುನಂದನ ॥ ೬ ॥

ನಗರೇಽಪಿ ವಸನ್ಯಸ್ತು ಭೈಕ್ಷ್ಯಾಶೀ ಸಸಂಶಿತವ್ರತಃ ।
ಅರಣ್ಯಾದಾಹೃತೈಃ ಪುಷ್ಪೈರ್ಮೂಲಪತ್ರಫಲಾಂಕುರೈಃ ॥ ೭ ॥

ಯಥೋಪಪನ್ನೈಃ ಸತತಮಭ್ಯರ್ಚಯತಿ ಕೇಶವಂ ।
ಸರ್ವಕಾಮಪ್ರದೋ ದೇವಸ್ತಸ್ಯ ಸ್ಯಾನ್ಮಧುಸೂದನಃ ॥ ೮ ॥

---

ಇವನಿಗಿಂತ ಬೇರೆ ವೈಭವದಿಂದ ಕೂಡಿದ ದೀನಗಳಿಂದೇನು ಪ್ರಯೋಜನ? ಎತ್ತ ರಿಂದಲಾದರೂ ಭಗವಂತನು, ತಾನಾಗಿ ದೊರಕುವ ಪದಾರ್ಥಗಳಿಂದಲೇ ತೃಪ್ತಿ ಹೊಂದುತ್ತಾನೆ. ಭಕ್ತನಾದವನು ಹಣ್ಣು, ಗೆಡ್ಡೆ, ಗೆಣಸುಗಳನ್ನು ತಿಂದುಕೊಂಡು, ಕಾಡಿನಲ್ಲಿ ಸಿಕ್ಕುವ ಹೂಗಳನ್ನು ತಂದು ಪರಮಾತ್ಮನಿಗೆ ಭಕ್ತಿಯಿಂದ ಸಮರ್ಪಿಸಿದ ಮಾತ್ರಕ್ಕೇ ಆ ಮಧುಸೂದನನು ಮನಸ್ಸಿನಲ್ಲಿರುವ ಇಷ್ಟಾರ್ಥಗಳನ್ನೆಲ್ಲಾ ನೆರ ವೇರಿಸುತ್ತಾನ

ಯಾವ ಫಲವೂ ಬೇಡವೆಂದು ನಿಷ್ಕಾಮದಿಂದ ಪೂಜೆಮಾಡಿದರೆ ಅಂಥವನು ವಿಷ್ಣುವಿನ ಪರಮಪದವನ್ನೇ ಹೊಂದುತ್ತಾನೆ ಕಾಡಿನಲ್ಲೇ ವಾಸಮಾಡುತ್ತಾ ಕಾಡಿ ನಲ್ಲೇ ಸಿಕ್ಕುವ ಹೂಹಣ್ಣುಗಳಿಂದ ಯಾವನು ಪರಮಪುರುಷನನ್ನು ಪರಮಭಕ್ತಿ ಯಿಂದ ಪೂಜಿಸುವನೋ ಆ ಪುರುಷನು ತನ್ನ ಹಿಂದಿನ ನೂರು ತಲೆಯ ಮತ್ತು ಮುಂದಿನ ನೂರು ತಲೆಯ (ಅತೀತಾನಾಗತ ಪಿತೃ) ಜನರನ್ನು ಉದ್ಧರಿಸುತ್ತಾನೆ

ನಗರಗಳಲ್ಲೇ ವಾಸಮಾಡುತ್ತಿದ್ದಾಗ್ಯೂ ಭಿಕ್ಷೆಯಿಂದಲೇ ಜೀವಿಸುತ್ತಿದ್ದಾಗ್ಯೂ ಯಾವನು ಪ್ರತಿದಿನವೂ ಹೊರಗಿನಿಂದ (ಕಾಡು) ಹೂ ತುಲಸಿಗಳನ್ನು ತಂದು ದೇವರ ಪೂಜೆಮಾಡಿ ಹಣ್ಣು ಹಂಪಲುಗಳನ್ನು ನಿವೇದನಮಾಡುತ್ತಲಿರುವನೋ ಅಂಥವನ ವಿಷಯದಲ್ಲಿ ಭಗವಂತನು ತಾನಾಗಿಯೇ ಪ್ರಸನ್ನನಾಗಿ ಅವನ ಮನಸ್ಸಿನಲ್ಲಿರುವ

ತಸ್ಯಾಪ್ಯಕಾಮುಕಾಮುಸ್ಯ ಪರಂ ಸ್ಥಾನಂ ಪ್ರಕೀರ್ತಿತಂ ।
ಯತ್ರ ಗತ್ವಾ ನ ಶೋಚಂತಿ ತದ್ವಿಷ್ಣೋಃ ಪರಮಂ ಪದಂ ॥ ೯ ॥

ಸ್ವಯಮಾಹೃತ್ಯ ಪುಷ್ಪಾದ್ಯೈರ್ಭೈಕ್ಷ್ಯಾಶೀ ಕೇಶವಾರ್ಚನಂ ।
ಕೃತಂ ಯೇನ ಸ ರಾಜೇಂದ್ರ ವಂಶಾನುದ್ಧರತೇ ಶತಂ ॥ ೧೦ ॥

ವಂಶಾನತೀತಾನ್ಸ್ವಂಚಾಶಕ್ತ್ಯಾವತಶ್ಚಾಪ್ಯನಾಗತಾನ್ ।
ಉದ್ಧರೇದಾತ್ಮನೋ ರಾಜನ್ನಾತ್ರ ಕಾರ್ಯಾ ವಿಚಾರಣಾ ॥ ೧೧ ॥

ಗೃಹಸ್ಥೋಽಪಿ ನರೋ ರಾಜನ್ಸ್ವಧರ್ಮಾಗತಧನಾಗಮಃ ।
ಅರಣ್ಯಾದಾಹೃತೈಃ ಪುಷ್ಪೈರ್ಯಃ ಕುರ್ಯಾತ್ಕೇಶವಾರ್ಚನಂ ॥ ೧೨ ॥

ಏತದೇವ ಸಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಧರ್ಮಾರ್ಜಿತಧನಃ ಕ್ರೀತ್ವಾ ಯಃ ಕುರ್ವನ್ಕೇಶವಾರ್ಚನಂ ॥ ೧೩ ॥

ಸ್ವಯಮುಪ್ತೈಶ್ಚ ಕುಸುಮೈರ್ಯಃ ಕುರ್ಯಾತ್ಕೇಶವಾರ್ಚನಂ ।
ಉದ್ಧರಿಷ್ಯತ್ಯಸಂದೇಹಂ ಸಪ್ತಪೂರ್ವಾಪರಾನ್ನರಾನ್ ॥ ೧೪ ॥

---

ಬಯಕೆಗಳನ್ನೆಲ್ಲಾ ತಾನೇ ತಿಳಿದುಕೊಂಡು ಅವನ ಇಷ್ಟಾರ್ಥಗಳನ್ನೆಲ್ಲಾ ಈಡೇರಿಸುವನು.

೯-೧೪. ಮನಸ್ಸಿನಲ್ಲೇನೂ ಆಸೆಯೇ ಇಲ್ಲದೆ ದೇವದೇವೋತ್ತಮನಾದ ಮಹಾ ವಿಷ್ಣುವನ್ನು ಪ್ರತಿದಿನವೂ ಪೂಜಿಸುವ ಮನುಷ್ಯನು ದುಃಖದ ಹೆಸರೇ ಇಲ್ಲದ ಪರಮಪವಿತ್ರನಾದ ಪರಮಪುರುಷನ ಪಾದಾರವಿಂದವನ್ನು ನೋಡುವನು. ತಾನೇ ಹೊರಗಿನಿಂದ ಹೂಗಳನ್ನು ತಂದು ಪೂಜಿಸುವ ಭಿಕ್ಷುಕನೂ ಕೂಡ ಪರಮಪುರುಷನ ದಯೆಗೆ ಪಾತ್ರನಾಗಿ ನೂರು ಕುಲಗಳನ್ನು ಉದ್ಧರಿಸುವನು. ಯಾವ ಗೃಹಸ್ಥನೇ ಆಗಲಿ ಧರ್ಮದಿಂದ ಸಂಪಾದಿಸಿದ ಹಣದಿಂದ ಪೂಜಾದ್ರವ್ಯಗಳನ್ನು ಕೊಂಡು ತಂದು, ಕಾಡಿನಲ್ಲಿ ಸಿಕ್ಕುವ ಹೂತುಲಸಿಗಳಿಂದಲೇ ದೇವರನ್ನು ಪೂಜಿಸುತ್ತಾ ಬಂದರೆ ಸಂದೇಹವಿಲ್ಲದೆ ಸ್ವರ್ಗದಲ್ಲಿ ವಾಸಮಾಡುತ್ತಾನೆ. ಅಥವಾ ತನ್ನ ಮನೆಯ ಅಂಗಳದಲ್ಲೋ ಹಿತ್ತಿಲಿನಲ್ಲೋ ಹೂಗಿಡಗಳನ್ನು ಸಾಕಿ ಬೆಳೆಸಿ ಅದರಲ್ಲಿ ಬಿಟ್ಟ ಹೂಗಳಿಂದಲೇ ದೇವರನ್ನು ಪೂಜಿಸುವವನು ಹಿಂದಿನ ಏಳು ತಲೆ, ಮುಂದಿನ ಏಳು ತಲೆಯ ತನ್ನ ವಂಶಸ್ಥರನ್ನು ಉದ್ಧಾರಮಾಡುವವನು. ಅಥವಾ ಹೇಗಾದರೂ ಯಾವ ರೀತಿಯಿಂದಲಾದರೂ

**ಯಥಾಕಥಂಚಿದಾಹೃತ್ಯ ಕಥಂಚಿತ್ಪೂಜಯೇದ್ಧರಿಂ ।**
**ನಾಕಪೃಷ್ಠಮವಾಪ್ನೋತಿ ನ ಮೇಽತ್ರಾಸ್ತಿ ವಿಚಾರಣಾ** ॥ ೧೫ ॥

**ಮಾನುಷ್ಯೇ ಚ ಪರಾಂ ರಾಜಂಚ್ಛ್ರಿಯಮಾಪ್ನೋತ್ಯಸಂಶಯಂ ।**
**ವನಾದಾಹೃತ್ಯ ಕುಸುಮೈಃ ಕರ್ತವ್ಯಂ ದೇವತಾರ್ಚನಂ** ॥ ೧೬ ॥

**ಪತ್ರಂ ಪುಷ್ಪಂ ಫಲಂ ತೋಯಂ ದೂರ್ವಾಂಕುರಮಥಾಪಿ ವಾ ।**
**ನಿವೇದಯಿತ್ವಾ ಕೃಷ್ಣಾಯ ಭೋಕ್ತಾ ನಾಕಮವಾಪ್ನುಯಾತ್ ।**
**ಅಕ್ಷವೈಸ್ತೂಪವಾಸಾನಾಂ ತಥಾ ಧನವಿವರ್ಜಿತೈಃ** ॥ ೧೭ ॥

**ವನಾದಾಹೃತ್ಯ ಕುಸುಮೈಃ ಕರ್ತವ್ಯಂ ದೇವತಾರ್ಚನಂ ।**
**ಅರಣ್ಯಾದಾಹೃತೈಃ ಪುಷ್ಪೈಃ ಸಂಪೂಜ್ಯ ಮಧುಸೂದನಂ** ॥ ೧೮ ॥

**ಪೂರ್ವಜನ್ಮನಿ ಸಂಪ್ರಾಪ್ತಂ ರಾಜ್ಯಂ ಶೃಣು ನರಾಧಿಪ ।**
**ನೃಗೋ ಯಯಾತಿರ್ನಹುಷೋ ವಿಷ್ವಗಶ್ವಃ ಕರಂಧಮಃ** ॥ ೧೯ ॥

ರೂವನ್ನು ಸಂಪಾದಿಸಿ ದೇವತಾರ್ಚನೆಯನ್ನು ಮಾಡುವ ಮನುಷ್ಯನು ಸದ್ಗತಿಯನ್ನು ಹೊಂದಿಯೇ ಹೊಂದುವುದರಲ್ಲಿ ಸಂದೇಹವಿಲ್ಲ

೧೬-೧೯ ಬಡತನದಲ್ಲಿದ್ದವನು ಕಾಡಿನಿಂದ ಹೂಗಳನ್ನು ತಂದು ದೇವತಾರ್ಚನೆಮಾಡುತ್ತ ಒಂದರೆ ಈ ಮನುಷ್ಯ ಜನ್ಮದಲ್ಲೇ ತನ್ನ ಬಡತನವನ್ನು ಕಳೆದುಕೊಂಡು ಐಶ್ವರ್ಯವಂತನಾಗುತ್ತಾನೆ ಇದು ನಿಶ್ಚಯ ಹೂವೋ, ಪತ್ರೆಯೋ, ನೀರೋ, ಹಣ್ಣೋ, ಹುಲ್ಲುಗರಿಕೆಯೋ ಏನೋ ಒಂದಾದರೂ ಸರಿ ಅವುಗಳನ್ನು ಯಾರು ಕೃಷ್ಣಾರ್ಪಣವೆಂದು ಹೇಳಿ ದೇವರ ಪಾದಕ್ಕೆ ಸಮರ್ಪಿಸಿ, ದೇವರು ಕೊಟ್ಟುದನ್ನು ಊಟಮಾಡಿಕೊಂಡಿರುವರೋ ಅಂಥವರು ಸ್ವರ್ಗಲೋಕ ಸುಖವನ್ನು ಅನುಭವಿಸಿಯೇ ಅನುಭವಿಸುವರು ಕೈಯಲ್ಲಿ ದುಡ್ಡೂ ಇಲ್ಲದೆ ಉಪವಾಸವನ್ನೂ ಮಾಡಲಾರದ ಜನರುಗಳು ಹೇಗಾದರೂ ಕಾಡಿನಿಂದಾದರೂ ಹೂತುಲಸಿಗಳನ್ನು ತಂದು ದೇವರ ಪೂಜೆಮಾಡುತ್ತಿದ್ದರೆ ಅಂಥವರೆಲ್ಲರೂ ಜನ್ಮಾಂತರಗಳಲ್ಲಿ ರಾಜರಾಗಿಯೇ ಹುಟ್ಟುತ್ತಾರೆ ಈರೀತಿ ದೇವತಾರ್ಚನೆಯಿಂದಲೇ ರಾಜ ಪದವಿಯನ್ನು ಹೊಂದಿದ ಭಾಗವತೋತ್ತಮರ ಹೆಸರುಗಳನ್ನು ಹೇಳುತ್ತೇನೆ ಕೇಳು.

ದಿಲೀಪೋ ಯುವನಾಶ್ವಶ್ಚ ಋತುಪರ್ಣೋ ಭಗೀರಥಃ ।
ಸೋಮಕಃ ಸಹದೇವಶ್ಚ ಮಹಾಶಾಲೋ ಮಹಾಹನುಃ ॥ ೨೦ ॥

ರೇವತಃ ಕಾಲಕಾಖ್ಯಶ್ಚ ಕೃತವೀರ್ಯೋ ಗುಣಾಕರಃ ।
ದೇವರಾತಃ ಕಕುತ್ಸ್ಥಶ್ಚ ವಿನೀತೋ ವಿಕ್ರಮೋ ರಘುಃ ॥ ೨೧ ॥

ಮಹೋತ್ಸಾಹೋ ವೀತಭಯೋ ನಿರಮಿತ್ರಃ ಪ್ರಭಾಕರಃ ।
ಕಪೋತರೋಮಾ ಪರ್ಜನ್ಯಶ್ಚಂದ್ರಸೇನಃ ಪರಾಂತಕಃ ॥ ೨೨ ॥

ಭೀಮಸೇನೋ ದೃಢರಥಃ ಕುಶನಾಭಃ ಪ್ರಭದ್ರಕಃ ।
ಏತೇ ಚಾನ್ಯೇ ಚ ಬಹವಃ ಪೂರ್ವಜನ್ಮನಿ ಕೇಶವಂ ॥ ೨೩ ॥

ಪೂಜಯಿತ್ವಾ ಕ್ಷಿತಾವಸ್ಯಾಂ ಪ್ರಾಪ್ತಾ ರಾಜ್ಯಮಕಂಟಕಂ ।
ಯಕ್ಷತ್ವಮಥ ದೇವತ್ವಂ ಗಂಧರ್ವತ್ವಂ ತಥೈವ ಚ ॥ ೨೪ ॥

---

೨೦-೨೪ ಹಿಂದಿನ ಜನ್ಮಗಳಲ್ಲಿ ಹೂಗಳಿಂದ ದೇವತಾರ್ಚನೆಮಾಡಿ ಮುಂದಿನ ಜನ್ಮದಲ್ಲಿ ರಾಜರಾಗಿ ಹುಟ್ಟಿದವರ ಹೆಸರುಗಳನ್ನು ಈಗ ಇಲ್ಲಿ ಬರೆಯುತ್ತೇವೆ — ಸ್ವಗ. ಯಯಾತಿ, ನಹುಷ, ವಿಷ್ವಗಶ್ವ, ಕರಂಧಮ, ದಿಲೀಪ, ಯುವನಾಶ್ವ, ಋತುಪರ್ಣ, ಭಗೀರಥ, ಸೋಮಕ, ಸಹದೇವ, ಮಹಾಶಾಲ, ಮಹಾಹನು ರೇವತ, ಕಾಲಕ, ಕೃತವೀರ್ಯ, ಗುಣಾಕರ, ದೇವರಾತ, ಕಕುತ್ಸ್ಥ, ವಿನೀತ, ವಿಕ್ರಮ, ರಘು, ಮಹೋತ್ಸಾಹ, ವೀತಭಯ, ನಿರಮಿತ್ರ ಪ್ರಭಾಕರ, ಕಪೋತರೋಮ, ಪರ್ಜನ್ಯ, ಚಂದ್ರಸೇನ, ಪರಾಂತಕ, ಭೀಮಸೇನ, ದೃಢರಥ, ಕುಶನಾಭ, ಪ್ರಭದ್ರಕ, ಇತ್ಯಾದಿಯಾಗಿ ಇನ್ನೂ ಬಹು ಜನರು ಪೂರ್ವ ಜನ್ಮದಲ್ಲಿ ಕೇಶವನನ್ನು ಅರ್ಚಿಸಿದುದ ರಿಂದಲೇ ಈ ಭೂಮಿಯಲ್ಲಿ ಮಹಾರಾಜರುಗಳಾಗಿ ಹುಟ್ಟಿ ನಿಷ್ಕಂಟಕವಾದ ರಾಜ್ಯ ಪದವಿಯನ್ನೈದಿದರು ಮತ್ತು ಇವರು ಪರಲೋಕದಲ್ಲೂ ಸಹ ಉತ್ತಮವಾದ ಯಕ್ಷತ್ವ, ದೇವತ್ವ, ಗಂಧರ್ವತ್ವ, ವಿದ್ಯಾಧರತ್ವಾದಿ ಪದವಿಗಳನ್ನು ಹೊಂದಿ ಭಗವಂತನ ಪಾದಾರವಿಂದಗಳಲ್ಲೈಕ್ಯರಾದರು. ಇಂಥವರು ಎಣಿಸಲಾಗದಂತೆ ಬಹು ಮಂದಿ ಇರುವರು ಇವರುಗಳ ಹೆಸರುಗಳನ್ನೆಲ್ಲಾ ನಿನಗೆ ವಿಸ್ತಾರವಾಗಿ ತಿಳಿಸುವುದಕ್ಕೆ ನನ್ನಿಂದ ಸಾಧ್ಯವಿಲ್ಲವಯ್ಯ, ವಜ್ರರಾಜ ! ಮುಖ್ಯವಾದ ತಾತ್ಪರ್ಯವೇನೆಂದರೆ — ಮನುಷ್ಯಜನ್ಮದಲ್ಲಿ ಹುಟ್ಟಿದವನು ಹೂಗಳಿಂದ ದೇವರನ್ನು ಪೂಜಿಸಿ ತನ್ನ ಜನ್ಮವನ್ನು

ವಿದ್ಯಾಧರತ್ವಂ ನಾಗತ್ವಂ ಯೇ ಗತಾ ಮನುಜೋತ್ತಮ ।
ಬಹುತ್ವಾತ್ತೇ ಕಥಂ ಶಕ್ಯಾ ಮಯಾ ವಕ್ತುಂ ತದಾನಘ ॥ ೨೫ ॥

ತಸ್ಮಾದ್ಯತ್ನಃ ಸದಾ ಕಾರ್ಯಃ ಪುರುಷೈಃ ಕುಸುಮಾರ್ಚನೇ ॥ ೨೭ ॥

ಅರಣ್ಯಜಾತೈಃ ಕುಸುಮೈಃ ಸದೈವ
ಸಂಪೂಜಯಿತ್ವಾ ಸ್ವಯಮಾಹೃತೈಸ್ತು ।
ಸರ್ವೇಶ್ವರತ್ವಂ ಫಲಮಾಪ್ನುವಂತಿ
ರಾಜೇಂದ್ರ ತದ್ವರ್ಣಯಿತುಂ ನ ಶಕ್ಯಂ ॥ ೨೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪುಷ್ಪಾಪಹರಣಫಲವರ್ಣನಂ ನಾಮಾ
ಷ್ಟಷಷ್ಟ್ಯಧಿಕ ಶತತಮೋಽಧ್ಯಾಯಃ.

---

ಸಫಲಮಾಡಿಕೊಳ್ಳಬೇಕಲ್ಲದೆ ಜನ್ಮವನ್ನು ವ್ಯರ್ಥಮಾಡಿಕೊಳ್ಳಬಾರದು ಎಲೈ ವಜ್ರರಾಜೇಂದ್ರನೇ! ಕಾಡಿನಲ್ಲಿ ಬೆಳೆದ ಶಾಸ್ತ್ರೀಯವಾದ ಪಂಮಳಪುಷ್ಪಗಳಿಂದ ಅದಾರು ಬಗವಂತನನ್ನು ಅಷ್ಟೋತ್ತರ ಸಹಸ್ರನಾಮಾವಳಿಗಳನ್ನು ಹೇಳಿಕೊಂಡು ಪೂಜಿಸುವರೋ ಅವರು ಸರ್ವೇಶ್ವರರಾಗಿ (ಭೂಪತಿಗಳಾಗಿ) ಹುಟ್ಟುತ್ತಾರ ನನ್ನಿಂದ ಆ ಮಹಿಮೆಯನ್ನು ವರ್ಣಿಸುವುದಕ್ಕೆ ಸಾಧ್ಯವೇ ಇಲ್ಲ

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಹೂಕುಯ್ದು ತಂದು ಪೂಜೆಮಾಡುವುದರ
ಫಲವೆಂಬ ಹೆಸರಿನ ನೂರ ಅರವತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥
**ಅಟವ್ಯೋ ದಾರುಣಾ ಬ್ರಹ್ಮನ್ಸಿಂಹವ್ಯಾಘ್ರನಿಷೇವಿತಾಃ ।**
**ತಸ್ಕರಾಚರಿತಾ ಘೋರಾಃ ಸರೀಸೃಪವಿಮಿಶ್ರಿತಾಃ ॥ ೧ ॥**

**ನಿತ್ಯೋತ್ಥಿತಸ್ಯ ಚಾಧ್ವಾನಂ ದಾಹಕ್ಷಯಕರಂ ಪರಂ ।**
**ಅತಃ ಸ್ವಲ್ಪತರಂ ಕರ್ಮ ಬ್ರೂಹಿ ಮೇ ಕೇಶವಾರ್ಚನೇ ॥ ೨ ॥**

### ನೂರ ಅರವತ್ತೊಂಭತ್ತನೆಯ ಅಧ್ಯಾಯವು.

೧-೨ ವಜ್ರಮಹಾರಾಜನು ಹೇಳುತ್ತಾನೆ —ಸ್ವಾಮಿ ! ಮಾರ್ಕಂಡೇಯರೇ ! ಕಾಡುಗಳೆಂದರೆ ಬಹಳ ಹೆದರಿಕೆಯನ್ನುಂಟುಮಾಡುವ ಸ್ಥಳಗಳು ಅದರಲ್ಲಂತೂ ಸಿಂಹ, ಹುಲಿ ಮುಂತಾದ ದುಷ್ಟ ಮೃಗಗಳಿಗೆ ಕಾಡುಗಳೇ ವಾಸಸ್ಥಾನ ಮತ್ತು ಅಲ್ಲಿ ಮಾರ್ಗಸ್ಥರನ್ನು ಕಳ್ಳರು, ಕಾದು ಹಿಂಸೆಮಾಡುತ್ತಾರೆ. ಅವರನ್ನು ಸುಲಿಗೆಮಾಡುತ್ತಾರೆ ಭಯಂಕರ ಸರ್ಪಗಳು ಅಲ್ಲಿ ಹಾಡುಹಗಲಿನಲ್ಲೇ ಓಡಾಡುತ್ತಿರುತ್ತವೆ ಪ್ರತಿದಿನವೂ ಬೆಳಗ್ಗೆ ಎದ್ದು ಬಹು ದೂರ ನಡೆದು ಕಾಡಿಗೆ ಹೋಗಿ ಹೂಗಳನ್ನು ತರುವುದೂ ಕಷ್ಟ ಆದ್ದರಿಂದ ಈ ವನಪುಷ್ಪಾಪಚಯ ಕರ್ಮವು ಬಹು ಕಷ್ಟವೆಂದು ನನಗೆ ಕಾಣುತ್ತಿದೆ ಆದ್ದರಿಂದ ಭಗವಂತನನ್ನು ಮೆಚ್ಚಿಸಿ ಧನ್ಯನಾಗಬೇಕಾದರೆ ಇನ್ನೇನಾದರೊಂದು ಸುಲಭೋಪಾಯವನ್ನು ತಿಳಿಸಿ, ಸ್ವಾಮಿ !

॥ ಮಾರ್ಕಂಡೇಯ ಉವಾಚ ॥

**ಅತಃ ಸ್ವಲ್ಪತರಂ ರಾಜನ್ ದೇವವೇಶ್ಮಾನುಲೇಪನಂ ।**
**ಮಹಾಫಲಂ ವಿನಿರ್ದಿಷ್ಟಂ ಬ್ರಾಹ್ಮಣೈರ್ವೇದಪಾರಗೈಃ ॥ ೩ ॥**

**ಸಂಮಾರ್ಜನಂ ತು ಯಃ ಕುರ್ಯಾತ್ಪುರುಷಃ ಕೇಶವಾಲಯೇ ।**
**ರಜಸ್ತಮೋಭ್ಯಾಂ ನಿರ್ಮುಕ್ತಃ ಸ ಭವೇನ್ನಾತ್ರ ಸಂಶಯಃ ॥ ೪ ॥**

**ಪಾಂಸೂನಾಂ ಯಾವತಾಂ ರಾಜನ್ಕುರ್ಯಾತ್ಸಂಮಾರ್ಜನಂ ನರಃ ।**
**ತಾವಂತ್ಯಬ್ದಾನಿ ಸ ಸುಖೀ ನಾಕಮಾಸಾದ್ಯ ಮೋದತೇ ॥ ೫ ॥**

**ಅಭ್ಯುಕ್ಷಯಂ ತು ಯಃ ಕುರ್ಯಾತ್ಪಾನೀಯೇನ ಸುರಾಲಯೇ ।**
**ಸ ಶಾಂತಪಾಪೋ ಭವತಿ ನಾತ್ರ ಕಾರ್ಯಾ ವಿಚಾರಣಾ ॥ ೬ ॥**

**ಕೃತ್ವೋಪಲೇಪನಂ ವಿಷ್ಣೋರ್ನರಸ್ತ್ವಾಯತನೇ ಸದಾ ।**
**ಗೋಮಯೇನ ಶುಭಾಂಲ್ಲೋಕಾನಯತ್ನಾದೇವ ಗಚ್ಛತಿ ॥ ೭ ॥**

೩-೪ ಮಾರ್ಕಂಡೇಯನು ಹೇಳುತ್ತಾನ --ಅಯ್ಯಾ, ರಾಜನೇ ಕೇಳು ಪ್ರತಿದಿವಸವೂ ವಿಷ್ಣುದೇವಾಲಯಗಳಿಗೆ ಹೋಗಿ ಅಲ್ಲಿರುವ ಕಸವನ್ನು ಗುಡಿಸುತ್ತಾ ಬಂದರೆ ಮತ್ತು ಆ ಸ್ಥಳವನ್ನು ಸಾರಿಸುತ್ತಾ ಬಂದರೆ ಬಹಳ ಪುಣ್ಯ ಬರುವುದೆಂದು ವೇದವನ್ನು ತಿಳಿದ ಬ್ರಾಹ್ಮಣರು ಹೇಳುವರು, ಯಾವ ಮನುಷ್ಯನು ಪ್ರತಿದಿನವೂ ವಿಷ್ಣುದೇವಾಲಯದ ಕಸವನ್ನು ಗುಡಿಸುವನೋ ಅವನು ರಜೋಗುಣ ತಮೋಗುಣಗಳನ್ನು ಕಳೆದುಕೊಂಡು ಸಾತ್ವಿಕನಾಗುವುದರಲ್ಲಿ ಸಂದೇಹವಿಲ್ಲ

೫ ಕಸ ಗುಡಿಸಿದಾಗ ಎಷ್ಟು ಧೂಳುಗಳಿರುವುವೋ ಅಷ್ಟು ವರ್ಷಕಾಲ ಆ ಧೂಳನ್ನು ಗುಡಿಸಿದವನು ಸ್ವರ್ಗಲೋಕದಲ್ಲಿ ಸುಖಪಡುತ್ತಾನೆ

೬. ಯಾವ ಮನುಷ್ಯನು ದೇವಸ್ಥಾನದಲ್ಲಿ ಒಳ್ಳೇ ನೀರನ್ನು ಚಿಮುಕಿಸಿ ಶುದ್ಧಿಮಾಡುವನೋ ಅವನ ಸಕಲ ಪಾಪಗಳೂ ಆಕ್ಷಣ ದೂರವಾಗುವ ವಿಷಯದಲ್ಲಿ ಏನೇನೂ ಸಂಶಯವಿಲ್ಲ

೭ ಯಾರು ದೇವಸ್ಥಾನವನ್ನು ಸಗಣಿಯಿಂದ ಪ್ರತಿದಿನವೂ ಸಾರಿಸುವರೋ ಅವರು ಪರಮಮಂಗಳಕರಗಳಾದ ದೇವಲೋಕಗಳನ್ನು ಯಾವ ಪ್ರಯತ್ನವೂ ಇಲ್ಲದೆ ಪ್ರವೇಶಿಸುತ್ತಾರೆ.

**ಹಸ್ತಪ್ರಮಾಣಂ ಭೂಭಾಗಮುಪಲಿಪ್ಯ ನರಾಧಿಪ ।**
**ದೇವರಾಮಾಶತಂ ನಾಕೇ ಲಭೇತ ಸತತಂ ನರಃ ॥ ೮ ॥**

**ತತೋಽನುಸಾರೇಣ ಫಲಂ ವಿಸ್ತೃತಾಯಾಂ ಕ್ಷಿತೌ ಸ್ಮೃತಂ**
**ನಿತ್ಯಾಸಮರ್ಥಸ್ತು ತಥಾ ದೇವವೇಶ್ಮೋಪಲೇಪನೇ ॥ ೯ ॥**

**ತ್ರಿಃ ಪಕ್ಷಸ್ಯ ತು ಕುರ್ವೀತ ದೇವವೇಶ್ಮೋಪಲೇಪನಂ ।**
**ಪಂಚಮೀಂ ದಶಮೀಂ ಚೈವ ತಥಾ ಪಂಚದಶೀಂ ನೃಪ ॥ ೧೦ ॥**

**ತ್ರಿಃ ಪಕ್ಷಸ್ಯ ಸದಾ ಕೃತ್ವಾ ದೇವವೇಶ್ಮೋಪಲೇಪನಂ ।**
**ಸಂವತ್ಸರಾತ್ತದಾಪ್ನೋತಿ ಯತ್ಫಲಂ ತನ್ನಿಬೋಧಮೇ ॥ ೧೧ ॥**

**ಜನ್ಮಾಂತರಮಥಾಸಾದ್ಯ ಗೃಹಂ ಪ್ರಾಪ್ನೋತ್ಯನುತ್ತಮಂ ।**
**ಸರ್ವೋಪಭೋಗ ಸಂಯುಕ್ತಂ ಗೃಹಪ್ರಾಸಾದಸಂಕುಲಂ ॥ ೧೨ ॥**

---

೮ ಯಾವ ಮನುಷ್ಯನು ಅಂಗೈ ಅಗಲದಷ್ಟು ಭೂಮಿಯನ್ನಾದರೂ ಗುಡಿಗಳಲ್ಲಿ ಸಾರಿಸಿದರೆ ಸಾಕು ಅಂತಹ ಪುಣ್ಯವಂತನು ಸ್ವರ್ಗದಲ್ಲಿ ಒಂದು ನೂರು ಜನ ಅಪ್ಸರಸ್ತ್ರೀಯರನ್ನು ಹೊಂದುತ್ತಾನೆ

೯-೧೧ ಅಂಗೈ ಅಗಲದ ನೆಲವನ್ನು ಸಾರಿಸಿದರೇ ಇಂತಹ ಫಲವು ಸಿಕ್ಕಿದ ಮೇಲೆ ವಿಸ್ತಾರವಾದ ಭೂಪ್ರದೇಶವನ್ನು ಸಾರಿಸಿದರೆ ಅದಕ್ಕೆ ತಕ್ಕಷ್ಟು ಮಹಾಪುಣ್ಯ ಫಲವೇ ದೊರಕುವುದು ಪ್ರತಿದಿನವೂ ದೇವಸ್ಥಾನಕ್ಕೆ ಹೋಗಿ ಗುಡಿಸಿ ಸಾರಿಸುವುದಕ್ಕೆ ಶಕ್ತಿಯಿಲ್ಲದೇ ಹೋದರೆ ಪ್ರತಿ ಪಕ್ಷದಲ್ಲೂ ಮೂರು ದಿವಸ ಮಾತ್ರ ಸಾರಿಸಿದರೆ ಸಾಕು ಆಗ್ಯೆ ತಿಂಗಳಿಗೆ ಆರು ದಿವಸ ಮಾಡಿದಂತಾಯಿತು ಅದಾವ ದಿನಗಳೆನ್ನುವಿಯೋ ? ಕೇಳು ಪ್ರತಿ ಪಕ್ಷದಲ್ಲೂ ಪಂಚಮೀ, ದ್ವಾದಶಿ, ಪೂರ್ಣಿಮಾ ಅಮಾವಾಸ್ಯಾ ದಿವಸಗಳಲ್ಲಿ, ಈರೀತಿ ಸಾರಿಸಿದರೆ, ವರ್ಷವೂ ಮಾಡಿದ ಫಲವುಂಟಾಗುವುದು ಆ ಫಲವನ್ನು ಹೇಳುವೆನು

೧೨-೧೬ ದೇವಾಲಯೋಪಲೇಪನ (ಸಾರಣೆ) ಕಾರ್ಯವಂ ಮಾಡುತ್ತಲಿದ್ದ ಮಾನವನು ಮೃತನಾದ ಬಳಿಕ ಮತ್ತೊಂದು ಜನ್ಮದಲ್ಲಿ ಹುಟ್ಟಿದಾಗ ಈ ಕೆಳಗೆ ವಿವರಿಸಿದ ಮೇರೆ ಭೋಗಪಡುತ್ತಾನೆ ಸಕಲ ಸುಖಭೋಗದಿಂದೊಡಗೂಡಿದ ದಿವ್ಯ ಪ್ರಾಸಾದಸಹಿತವಾದ ಮಂದಿರವು ಅವನ ವಾಸಕ್ಕೆ ಸಿದ್ಧವಾಗುವುದು ಆ ಮನೆಯು

ವೃಕ್ಷೋದ್ಯಾನಲತಾಗುಲ್ಮತೋಯವಾಪೀವಿಭೂಷಿತಂ ।
ಗೋಭಿಶ್ಚ ಧನಧಾನ್ಯಾಢ್ಯಂ ಸರ್ವೋಪಕರಣೈರ್ಯುತಂ ॥ ೧೩ ॥

ಪ್ರಿಯಂವದಾಭಿರ್ಹೃದ್ಯಾಭಿಃ ಸ್ವರೂಪಾಭಿಶ್ಚ ಪಾರ್ಥಿವ ।
ವೃತಂ ಚ ಬಹುಭಿಃ ಸ್ತ್ರೀಭಿಶ್ಚಾರುವಂಶಾಭಿರೇವ ಚ ॥ ೧೪ ॥

ಗಾರ್ಹಸ್ಥ್ಯಂ ಚ ದೃಢಂ ತತ್ರ ಸ ಚಾಪ್ನೋತಿ ಮಹೀತಲೇ ।
ನ ಚ ಪ್ರಚ್ಯವನಂ ತಸ್ಮಾಜ್ಜೀವನ್ನಾಪ್ನೋತಿ ಕರ್ಹಿಚಿತ್ ॥ ೧೫ ॥

ತಸ್ಯ ಯೇ ಬಾಂಧವಾಸ್ತತ್ರ ಸರ್ವೇ ತೇ ದೀರ್ಘಜೀವಿನಃ ।
ಭವಂತಿ ನ ಭವಂತ್ಯಸ್ಯ ಆಧಯೋ ವ್ಯಾಧಯಸ್ತಥಾ ॥ ೧೬ ॥

ನ ತಸ್ಯ ಮೃತನಿಷ್ಕ್ರಾಂತಿರ್ಗೃಹೇ ಭವತಿ ಕರ್ಹಿಚಿತ್ ।
ಯಾವಜ್ಜೀವತ್ಯಸೌ ತತ್ರ ಗೃಹೇ ಶ್ರೀಮಾನ್ಮುದಾ ಯುತಃ ॥ ೧೭ ॥

---

ಸುತ್ತಲೂ ವಿಸ್ತಾರವಾದ ಉದ್ಯಾನವನವಿರುವುದು. ಆ ಉದ್ಯಾನವನದಲ್ಲಿ ಒಳ್ಳೊಳ್ಳೆಯ ಹೂವಿನ ಮತ್ತು ಹಣ್ಣುಗಿಡಗಳೂ, ಒಳ್ಳೊಳ್ಳೆಯ ಹೂಬಳ್ಳಿಗಳೂ, ಸಿಹಿನೀರಿನ ಭಾವಿಗಳೂ ಇರುವುವು ಮತ್ತು ಆ ವಿಸ್ತಾರವಾದ ಭವನದಲ್ಲಿ ಗೋಶಾಲೆ, ಅಶ್ವಶಾಲೆ, ಧನಶಾಲೆ, ಧಾನ್ಯಶಾಲೆಗಳು, ಬೇರೆ ಬೇರೆ ಕಟ್ಟಲ್ಪಟ್ಟು ಅವು ಸರ್ವದಾ ಸಮೃದ್ಧಿಯಾಗಿರುವುವು ಮತ್ತು ಆ ಭವನ (ಬಂಗಲಾ) ದಲ್ಲಿ, ಪರಮಸೌಂದರ್ಯವತಿಯರೂ, ಪ್ರಿಯಭಾಷಿಣಿಯರೂ ಆದ ಬಹು ಜನ ಸ್ತ್ರೀಯರು ತುಂಬಿರುವರು ಇವರೆಲ್ಲರೂ ಉತ್ತಮಕುಲಪ್ರಸೂತರಾದ ಕುಲೀನಸ್ತ್ರೀಯರೇ ಆಗಿರುತ್ತಾರೆ ಮತ್ತು ಆ ಪುಣ್ಯಶಾಲಿಯಾದ ಭುವನಾಧಿಪತಿಯು ಗೃಹಸ್ಥನ ಧರ್ಮವನ್ನು ಪರಿಪಾಲಿಸುತ್ತಾ ಅಂತಹ ಸೌಧದಲ್ಲಿ ಸುಖಪಡುತ್ತಿರುವನು ಅವನಿಗೆ ಯಾವಾಗಲೂ ಅಲ್ಲಿಂದ ಚ್ಯುತಿಯೇ ಇಲ್ಲ. ಅವನಿಗೆ ಯಾವಾಗಲೂ ಕಷ್ಟವು ಪ್ರಾಪ್ತವಾಗುವುದೇ ಇಲ್ಲ ಮತ್ತು ಅವನ ಮನೆಯಲ್ಲಿ ತಾಯಿಯ ಕಡೆ ಬಳಗ ತಂದಯ ಕಡೆ ಬಳಗಗಳು ಯಥೇಚ್ಛವಾಗಿ ಸೇರಿ ಉಂಡುತಿಂದು ಲೋಲರಾಗಿ ನಿರಾತಂಕವಾಗಿ ಸುಖಪಡುತ್ತಲಿರುವರು. ಅವರೆಷ್ಟು ದಿನವಾದರೂ ಅಲ್ಲಿಯೇ ದೀರ್ಘಕಾಲ ಬದುಕಿರುವರೂ ಇನ್ನೂ ಅವನ ವೈಭವವನ್ನು ಹೇಳುತ್ತೇನೆ, ಕೇಳಯ್ಯ ವಜ್ರರಾಜ !

೧೭-೧೮ ಆ ದಿವ್ಯಭವನ ಸ್ವಾಮಿಯ ಮನೆಯಿಂದ ಯಾವಾಗಲೂ ಸತ್ತ

**ಚೌರಜಂ ನ ಭಯಂ ತಸ್ಯ ನ ಚ ವ್ಯಾಧಿಕೃತಂ ಭಯಂ ।**
**ವ್ಯಾಲಭೂಪಾಲಜಂ ನಾಪಿ ನ ಚ ತಸ್ಯ ಭಯಂ ಭವೇತ್ ॥ ೧೮ ॥**

**ಸ್ವರೂಪಃ ಸರ್ವಸಿದ್ಧಾರ್ಥೋ ದೀರ್ಘಾಯುರ್ವ್ಯಾಧಿವರ್ಜಿತಃ ।**
**ಆಜ್ಞಾವಿಧೇಯಭೃತ್ಯಶ್ಚ ಧ್ರುವಂ ಸ್ಯಾನ್ಮನುಜೇಶ್ವರ ॥ ೧೯ ॥**

**ಭುಂಜಾನೋ ಯಃ ಸದಾ ಕುರ್ಯಾತ್ತಸ್ಯೈತತ್ಕಥಿತಂ ಫಲಂ ।**
**ನಕ್ತಭೋಜೀ ತಥಾ ಕೃತ್ವಾ ದ್ವಿಗುಣಂ ಫಲಮಾಪ್ನುಯಾತ್ ॥ ೨೦ ॥**

**ಉಪೋಷಿತಸ್ತು ರಿಕ್ತಾಸ್ತು ಪೂರ್ಣಾಸು ತು ಹರೇರ್ಗೃಹೇ ।**
**ಕೃತ್ವೋಪಲೇಪನಂ ನಿತ್ಯಂ ಚಾನಂತ್ಯಂ ಫಲಮಶ್ನುತೇ ॥ ೨೧ ॥**

---

ಹೋಗಲು ಹೊರಗೆ ಬರುವುದೇ ಇಲ್ಲ (ಅಂದರೆ ಅಲ್ಲಿ ಯಾರೂ ಸಾಯುವುದಿಲ್ಲವೆಂದು ತಿಳಿಯಬೇಕು) ಈರೀತಿ ಆ ಪುಣ್ಯಾತ್ಮನು ಅಂತಹ ದಿವ್ಯಭೋಗೋಪೇತವಾದ ಪ್ರಾಸಾದದಲ್ಲಿ ಬಹುಕಾಲ ಐಶ್ವರ್ಯವಂತನಾಗಿಯೇ ಬದುಕಿರುವನು ಆ ಮನೆಯಲ್ಲಿ ಕಳ್ಳರ ಭಯವಿಲ್ಲ ಆ ಮನೆಗೆ ಯಾವ ರೋಗವೂ ಬರುವುದಿಲ್ಲ ಆ ಮನೆಯಲ್ಲಿ ಹಾವಿನ ಭಯವಿಲ್ಲ ರಾಜನ ಭಯವಿಲ್ಲ ಹೀಗೆ ಆ ಮನೆಯು ಸರ್ವಾಭೇದ್ಯ ವಾಗಿರುವುದು

೧೯-೨೨ ಹಿಂದೆ ಹೇಳಿದಂತೆ ಆ ಮಹಡಿಯ ಮನೆಯ ಒಡೆಯನು, ಬಹು ಸೌಂದರ್ಯವಂತನಾಗಿಯೂ ಸಕಲ ಭೋಗಗಳನ್ನನುಭವಿಸುವವನಾಗಿಯೂ ಯಾವ ರೋಗವೂ ಇಲ್ಲದ ಬಹುಕಾಲ ಬದುಕಿರುವವನಾಗಿಯೂ ಇದ್ದು ಸೇವಕರಿಂದ ಸೇವೆ ಯನ್ನು ಕೈಗೊಳ್ಳುತ್ತಿರುವನು ಆ ಗೃಹಸ್ಥನ ಆಳುಗಳೂ ಕೂಡ ಇವನಿಗೆ ವಿಧೇಯ ರಾಗಿಯೇ ಇದ್ದುಕೊಂಡು ಇವನ ಆಜ್ಞೆಯನ್ನೇ ನಿರೀಕ್ಷಿಸುತ್ತಿರುವರು. ಇದು ಸಾಮಾನ್ಯವಾಗಿ ದೇವಸ್ಥಾನವನ್ನು ಭಕ್ತಿಯಿಂದ ಸಾರಿಸುವವನ ,ಮಾತಾಯಿತು ಮತ್ತೇನು ವಿಶೇಷವೆಂದರೆ —ಸಂಜೆಯವರಿಗೂ ಉಪವಾಸವಿದ್ದು ಹಗಲೆಲ್ಲಾ ಗುಡಿ- ಸಾರಿಸಿ ದೇವರ ಧ್ಯಾನಮಾಡುತ್ತಾ ಇದ್ದು ರಾತ್ರಿ ಒಪ್ಪತ್ತು ಮಾತ್ರ ಊಟಮಾಡಿ ಕೊಂಡಿರುವ ಮಹಾತ್ಮನು ಮೇಲೆ ವಿವರಿಸಿದ ಫಲಭೋಗದಲ್ಲಿ ಎರಡು ಪಾಲು ಹೆಚ್ಚಾಗಿ ಫಲವನ್ನು ಹೊಂದುವನು ಏನೇನೂ ತಿನ್ನುವುದಕ್ಕೇ ಗತಿಯಿಲ್ಲದೆ ಬರಿ ಒಡವನಾದವನು ನಿತ್ಯೋಪವಾಸದಿಂದ ಶ್ರೀಕೃಷ್ಣದೇವರ ಗುಡಿಯಲ್ಲಿ ಪ್ರತಿನಿತ್ಯವೂ ಗುಡಿಸಿ ಸಾರಿಸಿ ರಂಗವಲ್ಲಿಗಳನ್ನಿಡುತ್ತ ಬಂದರೆ ಅವನಿಗೆ ಮೇಲಿನ ಫಲಕ್ಕಿಂತ ಸಾವಿ

ಉಪಲೇಪನಕೃದ್ಯಸ್ತು ಕೃಷ್ಣಸ್ಯಾಯತನೇ ಭವೇತ್ ।
ಪಾಪಸಂಮಾರ್ಜನಂ ತಸ್ಯ ಶೀಘ್ರಮೇವ ಭವಿಷ್ಯತಿ ॥ ೨೨ ॥

ನಿಷ್ಪಾದ್ಯಮೇತತ್ಸುಖದಂ ನರೇಂದ್ರ
ಆರಾಧನಂ ದೇವವರಸ್ಯ ವಿಷ್ಣೋಃ ।
ಪ್ರೋಕ್ತಂ ಮಯಾ ತೇ ಧನವರ್ಜಿತಾನಾಂ
ಧನಾನ್ವಿತಾನಾಂ ಸಫಲಂ ವಿಶೇಷಂ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಉಪಲೇಪನಫಲಪ್ರಶಂಸನೋನಾಮ್ನೈಕೋನ
ಸಪ್ತತ್ಯಧಿಕ ಶತತಮೋಽಧ್ಯಾಯಃ.

---

ರಾರು ಲಕ್ಷಪಾಲು ಅನಂತವಾದ ಫಲವು ಸಿಕ್ಕುವುದು ಈರೀತಿ ವಿಷ್ಣುದೇವಾಲಯ ದೋಳ್ ಸಮ್ಮಾರ್ಜನಮಾಡುವವನು ತನ್ನ ಸಕಲ ಪಾಪಗಳನ್ನೂ ಸಮ್ಮಾರ್ಜನ (ತೊಳೆದು) ಮಾಡಿಕೊಳ್ಳುವವನಾಗುವನು.

೨೩ ಎಲೈ ವಜ್ರನರಪತಿಯೆ ! ದೇವರನ್ನು ಸುಲಭವಾಗಿ ಮೆಚ್ಚಿಸಿ ಒಲಿಸಿ ಕೊಂಡು ಸುಖಪಡಬೇಕಾದ ಈ ಸುಲಭೋಪಾಯವನ್ನು ನಿನಗೆ ಹೇಳಿವೇನೆ ಈ ರೀತಿ ಹೇಳಿದ ವಿಚಾರವೆಲ್ಲವೂ ಬಡವರಾದ ಜನರು ಮಾಡುವ ಸಂಗತಿಯೆಂದು ತಿ. ಬಡವರಲ್ಲದ ಐಶ್ವರ್ಯವಂತರು ಇಂತಹ ಸಮ್ಮಾರ್ಜನೋಪಲೇಪನಾದಿ ಕಾರ್ಯಗಳನ್ನು ಭಕ್ತಿಯಿಂದೇನಾದರೂ ಮಾಡಿಬಿಟ್ಟರೆ, ಅವರಿಗೆ ಪ್ರಾಪ್ತವಾಗುವ ಫಲವೆಂತಹುದೆಂದು ಹೇಳಲು ನನಗೆ ಶಕ್ತಿಯಿಲ್ಲವಯ್ಯ ! ಮಹಾರಾಜ !

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ವಿಷ್ಣುದೇವಸ್ಥಾನವನ್ನು ಗುಡಿಸಿ
ಸಾರಿಸುವುದರ ಫಲವೆಂಬ ಹೆಸರಿನ ಒಂದುನೂರ
ಅರವತ್ತೊಂಭತ್ತನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಫಲಮಾಸಾದ್ಯ ಯದ್ಗೀತಂ ದೇವವೇಶ್ಮೋಪಲೇಪನೇ ॥ ೧ ॥

ಬಭೂವಶೂದ್ರಜಾತೀಯಃ ಕಶ್ಚಿದ್ಭಾಗ್ಯವಿವರ್ಜಿತಃ ।
ಕೃತವಾನ್ಸ ತು ವಾಣಿಜ್ಯಂ ಧನಶೇಷೇಣ ಕೇನಚಿತ್ ॥ ೨ ॥

ತಸ್ಮಿನ್ವಿಪನ್ನೇ ಸ ಕೃಷಿಂ ಚಕಾರ ನೃಪಸತ್ತಮ ।
ತಸ್ಯಾಮಪಿ ವಿಪನ್ನಾಯಾಂ ಚಕ್ರೇ ಸೇವಾಂ ಪುನಃಪುನಃ ॥ ೩ ॥

### ನೂರ ಎಪ್ಪತ್ತನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳುತ್ತಾನೆ —ಮಹಾರಾಜ! ಕೇಳು. ನಾನು ಮೇಲಿನ ಅಧ್ಯಾಯದಲ್ಲಿ ದೇವರ ಗುಡಿಯನ್ನು ಸಾರಿಸುವ ವಿಚಾರವಾಗಿ ಏನೇನು ಫಲವನ್ನು ಹೊಂದಬಹುದೆಂದು ಹೇಳಿದೆನೋ ಈ ವಿಚಾರದಲ್ಲಿ ಹಿಂದ ನಡೆದ ಒಂದು ಒಹು ಹಳಯ ಕಥೆಯನ್ನು ನನ್ನ ಹಿಂದಿನವರು ಹೇಳದ್ದನ್ನು ನಾನು ಕೇಳಿದ್ದೇನೆ ಅದನ್ನು ನಿನ್ನೊಡನೆ ಹೇಳುವೆನು.

### ಮಾಂಧಾತೃ ಚಕ್ರವರ್ತಿಯ ಕಥೆ

೨-೧೪. ಒಬ್ಬ ಬಡವನಾದ ಶೂದ್ರನಿದ್ದನು. ಅವನು ಸ್ವಲ್ಪ ಹಣದ ಬಂಡವಾಳದಿಂದ ವ್ಯಾಪಾರಮಾಡುತ್ತಿದ್ದನು ಆ ವ್ಯಾಪಾರದಲ್ಲಿ ಅವನಿಗೆ ನಷ್ಟ ಸಂಭವಿಸಲು ವ್ಯವಸಾಯದ ಕೆಲಸಕ್ಕೆ ಆರಂಭಮಾಡಿದನು. ಅಲ್ಲೂ ಕೂಡ ನಷ್ಟವೇ ಸಂಭವಿಸುತ್ತ ಬಂತು ಬಿಡದ ಕೃಷಿಯನ್ನು ಮಾಡುತ್ತ ಬಂದಾಗ್ಯೂ ಅವನಿಗೆ ಯಾವ

ತತೋಽಪ್ಯನಾಸಾದ್ಯ ಫಲಂ ಸಿದ್ಧಿಂ ತೀರಮುಪಾಶ್ರಿತಃ ।
ಗಂಗಾಯಾಃ ಸಪ್ತಮೋ ಭಾಗಃ ಸಿಂಧುರ್ನರನರೋತ್ತಮ ॥ ೪ ॥

ಶೀತಲಾಮಲಪಾನೀಯಃ ಸ್ವರ್ಗಲೋಕಪ್ರದಾಯಕಃ ।
ಯತ್ರ ಸ್ನಾತ್ವಾ ಗತಿಂ ಯಾಂತಿ ಬ್ರಾಹ್ಮಣಾಶ್ಚ ತಪಸ್ವಿನಃ ॥ ೫ ॥

ತಸ್ಯ ತೀರೇ ವರಾಹಾರ್ಚಾ ಪುರಾಣರ್ಷಿವಿನಿರ್ಮಿತಾ ।
ತಾಂ ಸಮಾಸಾದ್ಯ ಶೂದ್ರಸ್ತು ನಿತ್ಯಂ ಭೈಕ್ಷ್ಯಪರಾಯಣಃ ॥ ೬ ॥

ನಿತ್ಯೋಪಲೇಪನಪರಸ್ತದರ್ಚಾದೇವವೇಶ್ಮನಿ ।
ಉವಾಸ ಭಾರ್ಯಯಾ ಸಾರ್ಧಂ ತತ್ರ ನಿತ್ಯಾನುರಕ್ತಯಾ ॥ ೭ ॥

ಏತಸ್ಮಿನ್ನೇವ ಕಾಲೇ ತು ವರಾಹಾರ್ಚಾದಿದೃಕ್ಷಯಾ ।
ಸೌವೀರರಾಜಃ ಸಂಪ್ರಾಪ್ತಸ್ತಂ ದೇಶಂ ಚಿತ್ರವಾಹನಃ ॥ ೮ ॥

---

ಫಲವೂ ಉಂಟಾಗಲಿಲ್ಲ ಆಗ ಅವನಿಗೆ ಬಹಳ ದುಃಖವೂ ಬೇಸರವೂ ಉಂಟಾಗಿ ಸಿಂಧೂನದಿಯ ತೀರಕ್ಕೆ ಪ್ರಯಾಣಮಾಡಿದನು ಈ ಸಿಂಧೂನದಿಯೂ ಸಹ ಗಂಗಾ ನದಿಗೆ ಸಮನಾದ ಮಹಾನದಿಯು ಈ ನದಿಯ ದಡದಲ್ಲಿ ಒಂದು ವರಾಹದೇವರ ದೇವಸ್ಥಾನವಿತ್ತು ಎಷ್ಟೋಜನ ಬ್ರಾಹ್ಮಣರು ಪ್ರತಿದಿನವೂ ಆ ನದಿಯಲ್ಲಿ ಸ್ನಾನ ಮಾಡಿಕೊಂಡು ಆ ವರಾಹದೇವರ ಗುಡಿಯಲ್ಲಿ ಕುಳಿತು ತಪಸ್ಸುಮಾಡುತ್ತಿದ್ದರು ಈ ದೇವಸ್ಥಾನವು ಬಹಳ ಹಿಂದೆ ಯಾರೋ ಒಬ್ಬರು ಮಹರ್ಷಿಗಳಿಂದ ಪ್ರತಿಷ್ಠೆಯಾದದ್ದು ಆ ಶೂದ್ರನೂ ಸಹ ಆ ನದೀತೀರಕ್ಕೆ ಬಂದು ಅಲ್ಲಿ ವಾಸಮಾಡುತ್ತಾ ಭಿಕ್ಷೆಮಾಡಿ ಕೊಂಡು ಹೊಟ್ಟೆ ಹೊರೆದುಕೊಳ್ಳುತ್ತಿದ್ದನು ಅವನೂ ಅವನ ಹೆಂಡತಿಯೂ ಸಹ ಇದೇ ರೀತಿ ಜೀವನಮಾಡಿಕೊಂಡಿದ್ದರು ಅವರಿಗೆ ಅಲ್ಲಿ ಬೇರೆ ಯಾವ ಕೆಲಸವೂ ಇಲ್ಲದೆ ಇದ್ದುದರಿಂದ ಪ್ರತಿದಿವಸವೂ ಬೆಳಗಾಗುತ್ತಲೂ ಏಳುವುದು, ಆ ಹೊಳೆಯಲ್ಲಿ ಸ್ನಾನಮಾಡುವುದು, ಆ ದೇವರ ಗುಡಿಯನ್ನು ಗುಡಿಸುವುದು, ಚೊಕ್ಕಟವಾಗಿ ಸಾರಿಸುವುದು, ಈರೀತಿ ಕಾಲಕಳೆಯುತ್ತಾ ದೇವರ ಬಳಿ ಸೇವೆಮಾಡಿಕೊಂಡಿದ್ದು ಬಿಟ್ಟರು ಹೀಗೇ ಇರಲು ಒಂದಾನೊಂದು ದಿವಸ ಸೌವೀರದೇಶದ ದೊರೆಯಾದ ಚಿತ್ರವಾಹನರಾಜನು ತನ್ನ ಪತ್ನಿಯೊಡನೆ ಆ ದೇವಸ್ಥಾನಕ್ಕೆ ದೇವರ ದರ್ಶನಕ್ಕಾಗಿ ಬಂದನು ಆ ರಾಜನು ಸಿಂಧೂನದಿಯಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ವರಾಹ ದೇವರನ್ನು ಬಹಳ ಭಕ್ತಿಯಿಂದ ಸೇವೆಮಾಡಿ ಹೊರಟುಹೋದನು ಈರೀತಿ ಆ

ಸಿಂಧೌ ಸ್ಥಾನಂ ಸಮಾಸಾದ್ಯ ಪೂಜಯಿತ್ವಾ ಜಗತ್ಪತಿಂ ।
ಸಭಾರ್ಯಯಾ ಮಹೀಪಾಲಃ ಪ್ರಾಯಾದ್ರಾಜನ್ಯಥಾಗತಃ ॥ ೯ ॥

ಶ್ರಿಯಂ ತಸ್ಯ ತು ತಾಂ ದೃಷ್ಟ್ವಾ ಸ ಶೂದ್ರೋ ಭಾರ್ಯಯಾ ಸಹ ।
ಭೂಪಾಲತ್ವಸ್ಪೃಹಾಂ ಕೃತ್ವಾ ಕಾಲಾತ್ಕಾಲವಶಂಗತಃ ॥ ೧೦ ॥

ವನಾತ್ಕಾಷ್ಠಾನ್ಯುಪಾಹೃತ್ಯ ಕೃತ್ವಾ ಭರ್ತುಸ್ತತಶ್ಚಿತಿಂ ।
ಅನ್ವಾರುರೋಹ ತಂ ಭಾರ್ಯಾ ಶೂದ್ರಂ ಪಂಚತ್ವಮಾಗತಂ ॥ ೧೧ ॥

ಸ ಶೂದ್ರೋ ಭಾರ್ಯಯಾ ಸಾರ್ಧಂ ನಾಕಪೃಷ್ಠಮಿತೋ ಗತಃ ।
ಸತತಂ ಧರ್ಮಶೀಲಸ್ತು ದೇವವೇಶ್ಮೋಪಲೇಪನಾತ್ ॥ ೧೨ ॥

ಏತಸ್ಮಿನ್ನೇವ ಕಾಲೇ ತು ಯುವನಾಶ್ವೋ ಮಹೀಪತಿಃ ।
ವಿಷ್ಣುಂ ಸಂಪೂಜಯಾಮಾಸ ಪುತ್ರೀಯೇಣ ವ್ರತೇನ ತು ॥ ೧೩ ॥

---

ರಾಜನು ಮಹಾವೈಭವದೊಡನೆ ಸಪತ್ನೀಕನಾಗಿ ಆ ದೇವಸ್ಥಾನಕ್ಕೆ ಬಂದು ಉದಾರ ದ್ರವ್ಯ ವ್ಯಯದಿಂದ ದೇವರಸೇವೆಮಾಡಿದ್ದುದನ್ನು ನೋಡಿ, ಆ ಶೂದ್ರನು ಅವನ ರಾಜಸಂಪತ್ತನ್ನು ನೋಡಿ, ಅಯ್ಯೋ ! ಮನುಷ್ಯನಾಗಿ ಹುಟ್ಟಿದ ಮೇಲೆ ಈರೀತಿ ರಾಜನಾಗಿ ಹುಟ್ಟದ ಇದ್ದರೆ ಏನು ಫಲ ? ನಾನೂ ಸಹ ಹೀಗೇ ರಾಜನಾಗಿ ಹುಟ್ಟಬಾರದೆ ? ಎಂದು ರಾಜತ್ವದಲ್ಲಿ ಬಹಳ ಆಶೆ ಇಟ್ಟುಕೊಂಡು ಅಲ್ಲಿ ಬಹುಕಾಲ ಕಳೆಯುತ್ತಿದ್ದು ಒಂದು ದಿನ ಆ ನದೀತೀರದಲ್ಲೇ ಪ್ರಾಣವನ್ನು ಬಿಟ್ಟುಬಿಟ್ಟನು. ಗಂಡನು ಸತ್ತು ಹೋದುದಕ್ಕೆ ಆ ಶೂದ್ರನ ಹಂಡತಿಯು ದುಃಖಿಸುತ್ತಾ ಕಾಡಿನಿಂದ ಸೌದೆಯನ್ನು ತಂದು ಕೂಡಿಹಾಕಿ ಚಿತಿಯನ್ನು ನಿರ್ಮಿಸಿ ಆ ಚಿತಿಯ ಮೇಲೆ ಗಂಡನ ಶವವನ್ನಿರಿಸಿ ಬಂಕಿಹತ್ತಿಸಿ, ತಾನೂ ಅವರ ಜತಯಲ್ಲಿಯೇ ಗಂಡನೊಡನೆ ಮಲಗಿಕೊಂಡು ಸಹಗಮನಮಾಡಿ ಅವನ ಜತೆಯಲ್ಲಿಯೇ ಸ್ವರ್ಗಕ್ಕೆ ಹೊರಟುಹೋದಳು ಆ ಶೂದ್ರನು ಧರ್ಮಬುದ್ಧಿಯಿಂದ ಪ್ರತಿದಿನವೂ ಹಂಡತಿಯೊಡನೆ ದೇವಸ್ಥಾನವನ್ನು ಗುಡಿಸಿ ಸಾರಿಸಿ ಸ್ವಚ್ಛಮಾಡುತ್ತಿದ್ದುದರ ಫಲವಾಗಿ ಪರಲೋಕದಲ್ಲಿ ಅವರಿಬ್ಬರಿಗೂ ಒಳ್ಳೇ ದಿವ್ಯವಾದ ಭೋಗವೇ ಪ್ರಾಪ್ತವಾಯಿತು.

ಹೀಗಿರಲಾಗಿ ಯುವನಾಶ್ವನೆಂಬ ಮಹಾರಾಜನು ತನಗೆ ಮಕ್ಕಳೇ ಇಲ್ಲದುದರಿಂದ ಮಕ್ಕಳಾಗಬೇಕೆಂಬ ಉದ್ದೇಶದಿಂದ ಪುತ್ರಕಾಮೇಷ್ಟಿಯೆಂಬ ವ್ರತವನ್ನು ಮಾಡಿ

ರಾಜ್ಞಸ್ತಸ್ಯ ವ್ರತಸ್ಯಾಂತೇ ಸ್ವಪ್ನೇ ಪ್ರಾಹ ಜನಾರ್ದನಃ ।
ಭಾರ್ಗವಂ ಚ್ಯವನಂ ಗಚ್ಛ ತತಃ ಪುತ್ರಮವಾಪ್ಸ್ಯಸಿ ॥ ೧೪ ॥

ಯುವನಾಶ್ವಸ್ತಥೋಕ್ತಸ್ತು ಸ್ವಪ್ನೇ ದೇವೇನ ಚಕ್ರಿಣಾ ।
ಪ್ರಾತಃ ಪದ್ಭ್ಯಾಂ ಯಯೌ ತಸ್ಯ ಚ್ಯವನಸ್ಯಾಶ್ರಮಂ ಶುಭಂ ॥ ೧೫ ॥

ಸಂಪೂಜಯಿತ್ವಾ ಚ್ಯವನಂ ಚ್ಯವನೇನ ಚ ಪೂಜಿತಃ ।
ವ್ರತಸ್ವಪ್ನಾವುಭೌ ತಸ್ಯ ಜಗಾದ ನೃಪಸತ್ತಮಃ ॥ ೧೬ ॥

ಋಷಿಸಂಘಾನುಪಾದಾಯ ಚ್ಯವನೋಽಪಿ ಮಹಾತಪಾಃ ।
ಅವಿಜ್ಞಾತಂ ನರೇಂದ್ರೇಣ ಪುತ್ರೀಯಂ ಕೃತವಾನ್ ಜಲಂ ॥ ೧೭ ॥

ಕಲಶಸ್ಥಂ ಜಲಂ ತಚ್ಚ ಸ್ಥಾಪಯಾಮಾಸ ಭಾರ್ಗವಃ ।
ತತೋ ನಿಶೀಥೇ ಸಂಪ್ರಾಪ್ತೇ ತೃಷಾರ್ತಃ ಸ ಮಹೀಪತಿಃ ॥ ೧೮ ॥

---

ಮಹಾವಿಷ್ಣುವನ್ನು ಭಕ್ತಿಯಿಂದ ಪೂಜಿಸಿದನು ಈರೀತಿ ಆ ವ್ರತವು ಪೂರ್ತಿಯಾದ ಮೇಲೆ ರಾತ್ರಿ ಆ ರಾಜನ ಸ್ವಪ್ನದಲ್ಲಿ ದೇವರು ಪ್ರತ್ಯಕ್ಷನಾಗಿ ಬಂದು, ನೀನು ಭೃಗು ಋಷಿಯ ಮಗನಾದ ಚ್ಯವನ ಮಹರ್ಷಿಯ ಬಳಿಗೆ ಹೋಗು ಅಲ್ಲಿ ಅವನ ಅನುಗ್ರಹದಿಂದ ನಿನಗೆ ಮಗನಾಗುವನು, ಎಂದು ಅಪ್ಪಣೆಕೊಡಿಸಿದನು

೧೫-೩೨ ಈರೀತಿ ಕನಸಿನಲ್ಲಿ ದೇವರೇ ಬಂದು ಹೀಗೆ ಹೇಳಿದುದನ್ನು ಕೇಳಿ ಆ ಯುವನಾಶ್ವನು ಮಾರನೇದಿನ ಪ್ರಾತಃಕಾಲದಲ್ಲೆದ್ದು ಕಾಲುನಡಿಗೆಯಿಂದಲೇ ಹೊರಟು ಚ್ಯವನಋಷಿಗಳ ಆಶ್ರಮಕ್ಕೆ ಬಂದನು ಆಶ್ರಮದಲ್ಲಿ ಸುಖಾಸೀನರಾಗಿ ಕುಳಿತಿದ್ದ ಚ್ಯವನಋಷಿಗಳನ್ನು ಯುವನಾಶ್ವನು ಭಕ್ತಿಯಿಂದ ನಮಸ್ಕರಿಸಿ ಪೂಜೆ ಮಾಡಿದಾದ ಬಳಿಕ ತಾನು ಪುತ್ರಕಾಮವ್ರತವನ್ನು ಮಾಡಿದುದನ್ನೂ ವ್ರತಾಂತ್ಯದಲ್ಲಿ ಸ್ವಪ್ನವಾದುದನ್ನೂ ಋಷಿಗಳೊಡನೆ ಹೇಳಿದನು ಈ ಮಾತನ್ನು ಕೇಳಿ ಆ ಮಹಾತಪಸ್ವಿಗಳಾದ ಚ್ಯವನರು ತಮ್ಮ ಆಶ್ರಮಕ್ಕೆ ಋಷಿಗಳನ್ನೆಲ್ಲಾ ಕರೆಸಿ ಈ ಮಹಾರಾಜನಿಗೆ ಮಕ್ಕಳಾಗಲೆಂಬ ಉದ್ದೇಶದಿಂದ ಈ ರಾಜನಿಗೆ ತಿಳಿಯದಂತೆ ಆ ದಿನ ಸಾಯಂಕಾಲವೇ ಜಲಪೂರ್ಣಕಲಶವನ್ನಿಟ್ಟು ವಿಧಿವತ್ತಾಗಿ ಕಲಶಸ್ಥಾಪನಾ ಕರ್ಮವನ್ನು ನೆರವೇರಿಸಿದರು ಈ ಕಲಶದ ಜಲವನ್ನು ಮಂತ್ರಪೂತವನ್ನಾಗಿಮಾಡಿ ಮಹಾರಾಣಿಗೆ ಕೊಟ್ಟು ಕುಡಿಸಬೇಕೆಂದೂ ಇದರಿಂದ ಮಗನು ಹುಟ್ಟುವನೆಂದೂ ಋಷಿಗಳ ಮತ್ತು ಚ್ಯವನರ ಅಭಿಮತವಾಗಿದ್ದುದರಿಂದ ಈ ಕಲಶಸ್ಥಾಪನೆಯು ಋಷಿ

ಋಷಿಮಧ್ಯೇ ತದಾ ಸುಪ್ತಾನೃಷೀನ್ವಾಕ್ಯಮಥಾಽಬ್ರವೀತ್ ।
ತೃಷಾರ್ತೋಽಸ್ಮಿ ಭೃಶಂ ವಿಪ್ರಾಃ ಪಾನೀಯಂ ಮೇ ಪ್ರಯಚ್ಛತ ॥ ೧೯ ॥

ಋಷಿಸ್ತಸ್ಯ ನ ಶುಶ್ರಾವ ಕಶ್ಚಿದ್ವ್ಯಾಹೃತಮರ್ಥಚೋದಿತಃ ।
ತತಃ ಖಿನ್ನೋ ಮಹೀಪಾಲಃ ಕಲಶಸ್ಥಂ ಜಲಂ ಪಪೌ ॥ ೨೦ ॥

ಪೀತ್ವಾ ಸುಷ್ವಾಪ ಋಷಯಃ ಪ್ರಾತಃ ಸರ್ವೇ ಸಮುತ್ಥಿತಾಃ ।
ಅಪಶ್ಯಮಾನಾಃ ಕಲಶಂ ಪಪ್ರಚ್ಛುಸ್ತೇ ಪರಸ್ಪರಂ ॥ ೨೧ ॥

ಪುತ್ರೀಯಂ ಕಲಶಂ ರಾಜ್ಞಃ ಕೃತಂ ಯತ್ತದ್ಗತಂ ಕ್ವ ನು ।
ತದೋವಾಚ ಸ ರಾಜೇಂದ್ರಸ್ತಾನೃಷೀನ್ಸಂಶಿತವ್ರತಾನ್ ॥ ೨೨ ॥

ತೃಷಾರ್ತೇನ ಮಯಾ ಪೀತಃ ಕಲಶಸ್ತ್ವಪವಾಹಿತಃ ।
ತೇ ಹೋಚುಸ್ತಂ ನೃಪಶ್ರೇಷ್ಠ ಭಾವ್ಯಂ ಕರ್ಮ ಕೃತಂ ತ್ವಯಾ ॥ ೨೩ ॥

---

ಸಂಘದಿಂದ ಮಾಡಲ್ಪಟ್ಟಿತು ಈ ಸಂಗತಿಯೊಂದೂ ರಾಜನಿಗೆ ತಿಳಿಯದು. ಕಲಶ ಸ್ಥಾಪನೆಯನ್ನು ಮಾಡಿದಬಳಿಕ ಮಂತ್ರಪಾರಾಯಣಮಾಡಿ ಒಳಲಿದ್ದ ಋಷಿಗಳೆಲ್ಲರೂ ಮಲಗಿಬಿಟ್ಟರು ಎಲ್ಲರಿಗೂ ಒಳ್ಳೆಯ ನಿದ್ದೆ ಬಂದಿತು ರಾಜನೂ ಮಲಗಿಕೊಂಡನು. ಅರ್ಧರಾತ್ರಿಯಲ್ಲಿ ಈ ಯುವನಾಶ್ವರಾಜನಿಗೆ ತುಂಬಾ ಬಾಯಾರಿಕೆಯಾದುದರಿಂದ ಮೇಲಕ್ಕೆದ್ದು ಅಲ್ಲಿ ಮಲಗಿದ್ದ ಋಷಿಗಳನ್ನೆಲ್ಲಾ ನೀರುಬೇಕೆಂದು ಕೇಳಿದನು ಯಾರಿಗೂ ಎಚ್ಚರವಾಗಲಿಲ್ಲ ಇವನಿಗೆ ನೀರು ದೊರೆಯಲಿಲ್ಲ ಬಾಯಾರಿಕೆಯು ತಡೆಯಲಾರದಷ್ಟು ಹೆಚ್ಚಾಗಲು ಹಿಂದು ಮುಂದಿನ ಯೋಚನೆಯನ್ನೇ ಮಾಡದೆ ಈ ಯುವನಾಶ್ವನು ಕಲಶಪ್ರತಿಷ್ಠಾಪನೆಮಾಡಿಟ್ಟಿದ್ದ ಕಲಶವನ್ನೇ ತೆಗೆದುಕೊಂಡು ಅದರ ಲ್ಲಿದ್ದ ನೀರನ್ನೆಲ್ಲಾ ಗಟಗಟನೆ ಒಂದೇ ಬಾರಿಗೆ ಪಾನಮಾಡಿದವನಾಗಿ 'ಆ ಬಳಿಕ ಆ ಕಲಶವನ್ನೆಲ್ಲೋ ಬಚ್ಚಿಟ್ಟು ಮಲಗಿಕೊಂಡುಬಿಟ್ಟನು ಆಮೇಲೆ ಇವನಿಗೆ ಮೈಮೇಲೆ ಜ್ಞಾನಪಾನವಿಲ್ಲದಂತಹ ನಿದ್ದೆಯು ಬಂದುಬಿಟ್ಟಿತು, ಬೆಳಗಾಯಿತು ಋಷಿಗಳೆಲ್ಲರೂ ನಿದ್ರೆಯಿಂದೆಚ್ಚೆತ್ತರು. ಕಲಶವನ್ನು ಇಟ್ಟಿದ್ದ ಸ್ಥಳವನ್ನು ನೋಡಿದರು ಆ ಜಾಗವು ಬರಿದಾಗಿತ್ತು ಇದನ್ನು ನೋಡಿ ಋಷಿಗಳಿಗೆ ಬಲು ಗಾಬರಿಯಾಯಿತು ಕಲಶವೇ ನಾಯಿತೆಂದು ಒಬ್ಬರಿಗೊಬ್ಬರು ಪಿಸುಪಿಸುಮಾತನಾಡಿಕೊಂಡರು. ಎಲ್ಲಿ ? ಎಲ್ಲಿ ? ಮಂತ್ರಪೂತ ಜಲದಿಂದ ಮಿಶ್ರವಾದ ಕಲಶವೀಗೆಲ್ಲಿ ? ಒಯ್ದವರಾರು ? ಹೀಗೆ ಹೀಗೆ ಆಶ್ರಮದಲ್ಲಿ ಎಲ್ಲರೂ ಗಾಬರಿಯಾಗಿ ಗದ್ದಲಮಾಡತೊಡಗಿದರು ಈ ಮಾತ್ರ

**ಯುವನಾಶ್ವಸ್ತು ತಾಂ ವವ್ರೇ ಮಾಂಧಾತುರ್ಲಕ್ಷಣಾನ್ವಿತಾಂ ।**
**ಸ ರಾಜಾ ಪ್ರದದೌ ತಾಂ ತು ಮಾಂಧಾತುಶ್ಚಿತ್ರವಾಹನಃ ॥ ೩೩ ॥**

**ಏಕೈಕ ಭಾರ್ಯಾ ಸಾ ತಸ್ಯ ಬಭೂವಾತ್ಯಂತಸುಂದರೀ ।**
**ರೂಪಯೌವನಸಂಪನ್ನಾ ಪ್ರಾಣೇಭ್ಯೋಽಪಿ ಗರೀಯಸೀ ।**
**ಕೃತ್ವೋದ್ವಾಹಮಯೋಧ್ಯಾಯಾಮಭಿಷಿಚ್ಯ ಸ ತಂ ನೃಪಂ ॥ ೩೪ ॥**

**ಯುವನಾಶ್ವೋ ವನಂ ಪ್ರಾಯಾದ್ವನಾದಪಿ ತ್ರಿವಿಷ್ಟಪಂ ।**
**ರಾಜ್ಯಸ್ಥೋಽಪಿ ಸ ಮಾಂಧಾತಾ ತ್ರೈಲೋಕ್ಯಂ ಸಪ್ತಭಿರ್ದಿನೈಃ ॥ ೩೫ ॥**

---

ರಿಂದ ಈರೀತಿ ಯುವನಾಶ್ವನ ಕುಕ್ಷಿಜಾತನಾಗುವನ್ನು ಮುಖದ ಮುಂದೆ ಚೋಟು ಹಾಕಿ ಅನುಗ್ರಹಿಸಿ ಬಾಲ್ಯಕ್ಕೆ ತಂದನೆಂದು ತಿಳಿಯಬೇಕು ಭಗದಡಿಚ್ಛಾ ವಿಚಾರವಾಗಿ ಮತ್ತೊಮ್ಮೆ ಸಂದರ್ಭಾನುಸಾರವಾದ ಟೀಕೆಯನ್ನು ಬರೆಯಲಾಗುವುದು

ಆಬಳಿಕ ಇಂದ್ರನು ಯುವನಾಶ್ವನ ಹೊಕ್ಕಳನ್ನು ತನ್ನ ಕರಗಳಿಂದ ಸವರಿದನು. ಆ ಕೂಡಲೆ ಶಿಶುಜನನದಿಂದುಂಟಾದ ಬಾಧೆಯೂ ವ್ರಣವೂ ಪರಿಹಾರವಾಗಿ ಯುವನಾಶ್ವರಾಜನು ಕ್ಷೇಮವನ್ನು ಹೊಂದಿದನು ಆಗ ಶತಕ್ರತುವು ಮರೆಯಾಗಲು ಆ ಯುವನಾಶ್ವನು ತನ್ನ ಹೊಕ್ಕಳಲ್ಲಿ ಹುಟ್ಟಿದ ಮಗುವಿಗೆ ಮಾಂಧಾತನೆಂದು ಹೆಸರಿಟ್ಟನು (ಮಾಂ-ನನ್ನನ್ನು ಧಾಸ್ಯತಿ-ಪೋಷಿಸುತ್ತಾನೆ) ತನ್ನನ್ನು ಸಾವಿನಿಂದ ತಪ್ಪಿಸಿ ಬದುಕಿ ತಾನೂ ಬದುಕಿದುದರಿಂದ ಮಾಂಧಾತನೆಂದು ಹೆಸರು. ಈರೀತಿ ಹುಟ್ಟಿದ ಮಾಂಧಾತನು ಮುಂದೆ ತ್ರಿಲೋಕಗಳಲ್ಲಿಯೂ ಪ್ರಖ್ಯಾತನಾಗಿ ಚಕ್ರವರ್ತಿಯಾದನು ಆ ಮಗುವು (ಮಾಂಧಾತನು) ಹುಟ್ಟಿದೊಡನೆಯೇ ಶ್ರೀಮನ್ಮಹಾವಿಷ್ಣುವು ತನ್ನ ದೂಂದಂಶವನ್ನು ಆ ಮಗುವಿನಲ್ಲಿರಿಸಿದನು ಈರೀತಿ ಈ ಸಿಂಧೂತೀರದ ವರಾಹದೇವಸ್ಥಾನ ಸಮ್ಮಾರ್ಜಕ ಶೂದ್ರನು ಮಾಂಧಾತೃವಾಗಿ ಜನ್ಮಾಂತರವನ್ನು ಕಳೆದನಷ್ಟೆ?

ಇತ್ತಕಡೆ ಅವನೊಡನೆ ಸಹಗಮನಮಾಡಿದ ಆ ಶೂದ್ರಭಾರ್ಯೆಯು ತನ್ನ ಪಾತಿವ್ರತ್ಯ ಪ್ರಭಾವದಿಂದ ಭೀಮವೇಗನಾದ ಚಂದ್ರವಾಹನನೆಂಬ ಹೆಸರಿನ ಕಾಶೀರಾಜನ ಮಗಳಾಗಿ ಹುಟ್ಟಿ, ಪ್ರಭಾವತಿಯೆಂಬ ಹೆಸರಿನಿಂದ ಸಕಲ ಲೋಕ ಸುಂದರಳಾದಳು

೩೩-೩೫ ಆ ಲಕ್ಷಣವತಿಯಾದ ಕನ್ಯೆಯನ್ನು ಯುವನಾಶ್ವನು ತನ್ನ ಮಗನಾದ ಮಾಂಧಾತೃವಿಗೆ ಲಗ್ನಮಾಡಿಕೊಡಬೇಕೆಂದು ಕೇಳಿದನು ಅದೇ ಮೇರೆ

**ರಥೇನೈಕೇನ ವಶಗಂ ಚಕಾರ ಖಡ್ಗದರ್ಪಿತಃ ।**
**ಪಾತಾಲೇ ಗಗನೇ ಶೈಲೇ ಸಮುದ್ರೇ ಚ ಮಹಾತ್ಮನಃ** ॥ ೩೬ ॥

**ಆಸೀತ್ತಸ್ಯಾಪ್ರತಿಹತಾ ಗತಿಶ್ಚಕ್ರಸ್ಯ ಪಾರ್ಥಿವ ।**
**ಚಕ್ರವರ್ತೀ ಚ ಧರ್ಮಾತ್ಮಾ ವೈಷ್ಣವಶ್ಚ ತಥಾಽಭವತ್** ॥ ೩೭ ॥

**ಸಮಾಯುತಾನಾಂ ಬುಭುಜೇ ಸ ರಾಜ್ಯಂ ದಶ ಮಾನದ ।**
**ಬ್ರಹ್ಮಾಂಡಮಂಡಪಂ ಯಾವತ್ಸೂರ್ಯಸ್ತಪತಿ ರಶ್ಮಿಭಿಃ ।**
**ತಾವತ್ ಕ್ಷೇತ್ರಂ ಮಹೀಭರ್ತುರ್ಯೌವನಾಶ್ವಸ್ಯ ಕೀರ್ತ್ಯತೇ** ॥ ೩೮ ॥

---

ಕಾಶೀರಾಜನೂ ಸಹ ರಾಜಕುಮಾರಿಯನ್ನು ಮಾಂಧಾತೃವಿಗೆ ಮದುವೆಮಾಡಿ ಕೊಟ್ಟನು. ಆ ಮಾಂಧಾತೃವಿಗೆ ಇವಳೊಬ್ಬಳೇ ಹೆಂಡತಿ ಈಕೆಯು ತನ್ನ ರೂಪ ಯೌವನಸೌಭಾಗ್ಯಗಳಿಂದಲೂ, ಪಾತಿವ್ರತ್ಯ ಧರ್ಮದಿಂದಲೂ ತನ್ನ ಗಂಡನಿಗೆ ಪ್ರಾಣಕ್ಕಿಂತಲೂ ಹೆಚ್ಚಾಗಿದ್ದಳು ಈರೀತಿ ಯುವನಾಶ್ವ ಮಹಾರಾಜನು ತನ್ನ ಮಗನಿಗೆ ಲಗ್ನಮಾಡಿದ ಬಳಿಕ ಅಯೋಧ್ಯಾಪಟ್ಟಣದ ಸಿಂಹಾಸನದಲ್ಲಿ ತನ್ನ ಮಗನಾದ ಮಾಂಧಾತೃವನ್ನು ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿ ತಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ವನಕ್ಕೆ ಪ್ರಯಾಣಮಾಡಿ ಅಲ್ಲಿ ಬಹುಕಾಲ ಋಷಿಚರ್ಯೆಯಿಂದಿದ್ದವನಾಗಿ ಕೊನೆಗೆ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದನು. ತಂದೆಯಿಂದ ರಾಜ್ಯವನ್ನು ಪಡೆದ ಮಾಂಧಾತೃವು ತನ್ನ ರಾಜ್ಯದಲ್ಲೇ ಇದ್ದಾಗ್ಯೂ ಏಳೇ ದಿನಗಳಲ್ಲಿ ಮೂರು ಲೋಕಗಳನ್ನೂ ಒಂದೇ ರಥದಿಂದ ಜಯಿಸಿದವನಾಗಿ ತನ್ನ ಖಡ್ಗಬಲದಿಂದ ಸಕಲ ಲೋಕಕ್ಕೂ ಒಡೆಯನಾದನು ಪಾತಾಳಲೋಕದಲ್ಲೂ ಸ್ವರ್ಗಲೋಕದಲ್ಲೂ ಗಿರಿಸಾಗರ ಸಹಿತವಾದೀ ಭೂಲೋಕದಲ್ಲೂ ಸಹ ಆತನ ಆಜ್ಞೆಯು ತಡೆಬಿಡುವಿಲ್ಲದ ನಡೆಯುತ್ತಿತ್ತು. ಇಂತಹ ಈ ಮಾಂಧಾತೃ ಮಹಾಚಕ್ರವರ್ತಿಯು ಪರಮ ವಿಷ್ಣುಭಕ್ತನಾಗಿ ಒಂದು ಲಕ್ಷ ವರ್ಷಗಳವರೆಗೆ ಈ ಭೂಲೋಕವನ್ನು ಧರ್ಮದಿಂದ ಪರಿಪಾಲನೆಮಾಡುತ್ತಿದ್ದನು ಈ ರಾಜನ ರಾಜ್ಯದ ಮೇರೆಯು, ಈ ಬ್ರಹ್ಮಾಂಡಮಂಡಲದಲ್ಲಿ ಎಲ್ಲಿಯತನಕ ಸೂರ್ಯನು ತನ್ನ ಕಿರಣಗಳನ್ನು ಬೀರುವನೋ ಅಲ್ಲಿಯವರೆವಿಗೂ ವ್ಯಾಪಿಸಿತ್ತು ಈರೀತಿಯಾಗಿ ಮಾಂಧಾತೃ ಚಕ್ರವರ್ತಿಯು ಸಕಲ ಶತ್ರುಗಳನ್ನೂ ಗೆದ್ದವನಾಗಿ ಸುಖಪಡಲು ಮೂಲಕಾರಣವಾವುದು? ತಿಳಿದೆಯಾ?

ಏವಂ ಚ ರಾಜಾ ವಿಜಿತಾರಿಪಕ್ಷೋ
ದೇವಾಲಯಾಲೇಪನಕೃದ್ಬಭೂವ ।
ಭಾರ್ಯಾ ಚ ಸಾ ತಸ್ಯ ಬಭೂವ ಭಾರ್ಯಾ
ಲೋಕೇ ವರಿಷ್ಠಾ ಪ್ರಮದಾವರಾಭ್ಯಃ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಾಂಧಾತ್ರುಪಾಖ್ಯಾನಂನಾಮ
ಸಪ್ತತ್ಯಧಿಕಶತತಮೋಽಧ್ಯಾಯಃ.



ವಜ್ರರಾಜ! ದೇವಾಲಯವನ್ನು ಪ್ರತಿನಿತ್ಯವೂ ಸ್ವಚ್ಛವಾಗಿ ಸಾರಿಸುತ್ತಿದ್ದುದರ ಫಲವೇ ಅಲ್ಲವೇ ಇದು! ಆ ಮಹಾಮಂಡಲಾಧೀಶ್ವರನ ಸತ್ನಿಯೂ ಸಹ ಲೋಕದ ಸಕಲ ನಾರಿಯರಿಗೂ ಮಾದರಿಯಾದವಳಾಗಿ ಲೋಕಪ್ರಸಿದ್ಧಿ ಹೊಂದಿದಳು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಮಾಂಧಾತ್ರುಪಾಖ್ಯಾನವೆಂಬ
ಹೆಸರಿನ ಒಂದುನೂರ ಎಪ್ಪತ್ತನೆಯ ಅಧ್ಯಾಯವು
ಮುಗಿದುದು

*

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
# ॥ ಏಕಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ವಜ್ರ ಉವಾಚ ॥

ಸ ತು ರಾಜಾ ಮಯಾ ಬ್ರಹ್ಮನ್ಮಾಂಧಾತಾ ಭುವನೇಶ್ವರಃ ।
ಮಾಹೇಶ್ವರೇಣ ಶೂಲೇನ ಲವಣೇನ ಹತಃ ಶ್ರುತಃ ॥ ೧ ॥

॥ ಮಾರ್ಕಂಡೇಯ ಉವಾಚ ॥

ಅಜೇಯಂ ವೈಷ್ಣವಂ ತೇಜಸ್ತತ್ಚ್ಚ ನಿತ್ಯಂ ಚ ಜಂತುಷು ।
ನಾಶಮಾಯಾಂತಿ ತೇ ಸರ್ವೇ ಹೀನಾ ವೈಷ್ಣವತೇಜಸಾ ॥ ೨ ॥

## ನೂರ ಎಪ್ಪತ್ತೊಂದನೆಯ ಅಧ್ಯಾಯವು.

೧ ವಜ್ರರಾಜನು ಕೇಳುತ್ತಾನೆ —ಅಯ್ಯಾ ! ಮಾರ್ಕಂಡೇಯನೇ ! ನೀನು ಹೇಳಿದ ಮಹಾಮಹಿಮನಾದ ಮಾಂಧಾತೃ ಚಕ್ರವರ್ತಿಯೂ ತನ್ನ ಅಂತ್ಯಕಾಲದಲ್ಲಿ ಮೃತ್ಯುವನ್ನು ಪರೀಕ್ಷೆಮಾಡಲೆಳಸಿ ಕೊನೆಗೆ ಲವಣಾಸುರನಿಂದ ಈಶ್ವರೀಶೂಲಕ್ಕೆ ತುತ್ತಾಗಿ ಪ್ರಾಣಬಿಟ್ಟನೆಂಬ ಇತಿಹಾಸವನ್ನು ಕೇಳಿರುತ್ತೇನೆ

ಟಿಪ್ಪಣಿ ಈ ಗ್ರಂಥಕರ್ತರು ಸ೯ ೧೯೧೦ನೇ ಇಸವಿಯಲ್ಲಿ (ಈಗ ೨೪ ವರ್ಷ ಗಳ ಹಿಂದೆ) ಮೊಟ್ಟಮೊದಲು ಬರೆದು ಅಚ್ಚುಮಾಡಿರುವ ಮೃತ್ಯುಪರೀಕ್ಷೆಯೆಂಬ ಕಾದಂಬರೀಸಂಗ್ರಹ ಮಾಸಪತ್ರಿಕೆಯ ಪ್ರಪ್ರಥಮ ಕಾದಂಬರಿಯಲ್ಲಿ ಈ ಮಾಂಧಾತೃ ಚಕ್ರವರ್ತಿಯ ಮೃತ್ಯುವೃತ್ತಾಂತವು ಬರೆಯಲ್ಪಟ್ಟಿದೆ ದಯಮಾಡಿ ಓದಿರಿ.)

(ಈ ಪುರಾಣದ ೨೦೦ನೇ ಅಧ್ಯಾಯದಲ್ಲಿ ಬರುವ ಲವಣಾಸುರನ ಕಥೆಯಲ್ಲಿ ಈ ವೃತ್ತಾಂತವನ್ನು ನೋಡಿರಿ )

೨ ಮಾರ್ಕಂಡೇಯನು ಹೇಳುತ್ತಾನೆ —ಪ್ರತಿಯೊಂದು ಪ್ರಾಣಿಯೂ ವಿಷ್ಣುತೇಜಸ್ಸಿನಿಂದಲೇ ಬೆಳಗುತ್ತಾ ಚಿದಾಭಾಸರೂಪದಿಂದ ಕಾಣುತ್ತಾ ಜೀವಿಸುತ್ತ

**ಅವಿನಾಶಿ ಜಗತ್ಯಸ್ಮಿನ್ನ ಕಿಂಚಿದಥ ವಿದ್ಯತೇ ।**
**ಋತೇ ತು ಮಹತಸ್ತಸ್ಮಾತ್ತೇಜಸೋ ನೃಪ ವೈಷ್ಣವಾತ್ ॥ ೩ ॥**

**ತೇಜಸ್ತಸ್ಯ ಸುದುರ್ವಾರ್ಹ್ಯಂ ದೇಹಿಭಿರ್ನೃಪ ಸರ್ವದಾ ।**
**ತಸ್ಮಾತ್ತೇನ ವಿಹೀನಾಸ್ತೇ ಕ್ಷಯಂ ಗಚ್ಛಂತಿ ಮಾನದ ॥ ೪ ॥**

**ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹೋಽಥ ವಾಮನಃ ।**
**ಬ್ರಹ್ಮಾ ಶಂಭುಸ್ತಥೈವಾರ್ಕಶ್ಚಂದ್ರಮಾಶ್ಚ ಶತಕ್ರತುಃ ॥ ೫ ॥**

---

ಲಿವೆ ಇಂತಹ ವೈಷ್ಣವೀಶಕ್ತಿಯು ಜಯಿಸಲಶಕ್ಯವಾದುದೆಂದು ತಿಳಿ ಯಾವಾಗ ಪ್ರಾಣಿಗಳಲ್ಲಿರುವ ವೈಷ್ಣವತೇಜಸ್ಸು (ಸದ್ವಸ್ತು-ಆತ್ಮತೇಜಸ್ಸು) ಕುಂದಿಹೋಗುವುದೋ ಆಗ ಆ ಪ್ರಾಣಿಗಳು ನಾಶವಾದ (ಸತ್ತ) ವೆಂದು ತಿಳಿಯಬೇಕು

೩. ಮಹತ್ತಾದ ವಿಷ್ಣು (ಪರಮಾತ್ಮ) ಶಕ್ತಿಯೊಂದೇ ತ್ರಿಕಾಲಾಬಾಧಿತವಾಗಿ ಎಂದೆಂದಿಗೂ ನಾಶವಿಲ್ಲದೆ ಇರತಕ್ಕುದೇ ಹೊರತು, ಇತರ ಪದಾರ್ಥಗಳೆಲ್ಲವೂ ಈ ಪ್ರಪಂಚದಲ್ಲಿ ಎಂದಾದರೊಂದು ದಿನ ನಾಶವಾಗಿಯೇ ಆಗುವುದೆಂದು ತಿಳಿ (ಒಂದು ಲಕ್ಷ ವರ್ಷ ರಾಜ್ಯಭಾರಮಾಡಿದಾಗ್ಯೂ ಕೊನೆಗೆ ಈ ಮಾಂಧಾತೃವು ಮರಣಕ್ಕೆ ಗುರಿಯಾದನು )

೪ ಈ ಪರಿದೃಶ್ಯಮಾದ ಪಂಚಭೂತಾತ್ಮಕವಾದ ಈ ಸ್ಥೂಲದೇಹದಿಂದ ಆತ್ಮತೇಜಸ್ಸು ನಿರಂತರವಾಗಿ ಧರಿಸಲ್ಪಡಲು ಸಾಧ್ಯವೇ ಇಲ್ಲ ಎಂದಾದರೊಂದು ದಿನ ಈ ದೇಹವನ್ನು ಬಿಟ್ಟು ಈ ವೈಷ್ಣವ ತೇಜಸ್ಸು (ಚಿಚ್ಛಕ್ತಿ-ಸಚ್ಛಕ್ತಿ) ಹೊರಟು ಹೋಗುವುದು ಅಂಥವರನ್ನು ಕುರಿತು ಜನರು ಸತ್ತುಹೋದವನೆಂದು ಹೇಳುವರು.

ಟಿಪ್ಪಣಿ —ಈ ಸತ್ತ ಎಂಬ ಪದದ ಅರ್ಥಸ್ವಾರಸ್ಯವನ್ನು ಎಲ್ಲರೂ ತಿಳಿದಿರ ಬೇಕಾದುದು ಆವಶ್ಯಕ (ಸತ್-ಸತ್ಪದಾರ್ಥ-ಆತ್ಮಶಕ್ತಿ) ಪರಮಾತ್ಮನ ಸತ್-ಅಂಶವು ಅಂದರೆ ಸತ್ತು ಹೊರಟುಹೋಯಿತು ಈ ದೇಹವನ್ನು ಬಿಟ್ಟು ಇದುವರಿ ಗಿದ್ದ ಸತ್ತು ಹೊರಟುಹೋಯಿತು ಎಂಬ ಪದವೂ, ಸತ್ತುಹೋದನು ಎಂಬ ಪದಗಳು ನಪುಂಸಕ ಪುಲ್ಲಿಂಗಗಳೆರಡರಲ್ಲಿಯೂ ಪ್ರಯೋಗಮಾಡಲ್ಪಡುವುವುಗಳಾಗಿವೆ ಇವು ಪುನ್ನಪುಂಸಕಪದಗಳು

೫-೮ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನಾದ್ಯವತಾರ ಗಳನ್ನು ತಳೆದಿದ್ದ ಭಗವಂತನ ಪಂಚಭೌತಿಕ-ಸ್ಥೂಲದೇಹಗಳೂ, ಬ್ರಹ್ಮ, ಈಶ್ವರ

ಏವಮಾದ್ಯಾಸ್ತಥೈವಾನ್ಯೇ ಯುಕ್ತಾ ವೈಷ್ಣವತೇಜಸಾ ।
ಗಜಚ್ಛಾಯಾನುಮಾನೇನ ವಿಯುಜ್ಯಂತೇ ಚ ತೇಜಸಾ ॥ ೬ ॥

ವಿತೇಜಸಶ್ಚ ತೇ ಸರ್ವೇ ಪಂಚತ್ವಮುಪಯಾಂತಿ ಚ ।
ಪಂಚಭೂತಾತ್ಮಕಂ ಸ್ಥೂಲಂ ಯತ್ಕಿಂಚಿಜ್ಜಗತೀಗತಂ ॥ ೭ ॥

ಸರ್ವಂ ವಿನಾಶಿ ತತ್ ಜ್ಞೇಯಂ ತ್ವಯಾ ಪಾರ್ಥಿವಸತ್ತಮ ।
ಅವಿನಾಶಿ ತು ಶದ್ವಿದ್ಧಿ ಯೇನ ವಿಶ್ವಮಿದಂ ತತಂ ॥ ೮ ॥

ಯತ್ತು ಗಂಧಗುಣೈರ್ಹೀನಂ ರೂಪಸ್ಪರ್ಶವಿವರ್ಜಿತಂ ।
ಶಬ್ದಹೀನಂ ಚ ವಿರಸಂ ಸರ್ವೇಶಂ ಸರ್ವಗಂ ಚ ಯತ್ ॥ ೯ ॥

ಸೂರ್ಯ, ಚಂದ್ರ, ದೇವೇಂದ್ರಾದಿ ವಿವಿಧನಾಮಗಳನ್ನು ತಳೆದ ದೇವತಾವಿಶೇಷಗಳೂ, ಜಗತ್ಕಾರ್ಯಾನುಮಾನದಿಂದ ದೇಹದಲ್ಲಿ (ಇದು ತರ್ಕಶಾಸ್ತ್ರದ ಜಟಿಲವಾದ ವಿಚಾರಭಾಗ ಆತ್ಮ ವೈಷ್ಣವ-ತೇಜಸ್ಸಿನಿಂದ) ಸೇರಿರುವ ತನಕ ಎಲ್ಲಾ ವಿಧವಾದ ಅಘಟಿತ ಘಟನಾ ವ್ಯಾಪಾರವನ್ನೂ ಮಾಡಬಲ್ಲವು ಆ ತೇಜಸ್ಸು ದೇಹದಿಂದ ಮರೆಯಾಗಿ ಹೊರಟುಹೋದ ಮೇಲೆ ಪಂಚಭೂತಗಳಲ್ಲಿ ಆ ದೇಹವು ಬೆರೆದುಹೋಗುವುದು ಇದನ್ನೇ ಪಂಚತ್ವವೆಂದೂ, ಮರಣವೆಂದೂ, ಸಾವೆಂದೂ, ನಾಶವೆಂದೂ ವಿವಿಧವಾಗಿ ಹೇಳುವರು. ಈರೀತಿಯಾಗಿ ಮೇಲೆ ವಿವರಿಸಿದಂತೆ ಪಂಚಭೂತಗಳಿಂದ ಹುಟ್ಟಿ ಬೆಳೆದ ಈ ದೇಹವು ಸ್ಥೂಲದೇಹವೆಂದು ಹೇಳಿಸಿಕೊಳ್ಳುತ್ತದೆ ಇದು ಭೂಮಿಯ ಮೇಲೆ ಆತ್ಮತೇಜಸ್ಸಿನಿಂದೊಡಗೂಡಿ ಇರುವವರಿಗೆ ನಾಮರೂಪಾತ್ಮಕವಾಗಿ ತೋರುತ್ತಿರುತ್ತದೆ ಯಾವಾಗ ಅದರಲ್ಲಿದ್ದ ಸದ್ವಸ್ತುವು (ಆತ್ಮನು) ಹೊರಟುಹೋಗುವುದೋ ಆಗ್ಯೆ ಸ್ಥೂಲಶರೀರವೂ ಮರೆಯಾಗುವುದು. ಅಂದ ಮೇಲೆ ಭೂಮಿಯ ಮೇಲೆ ಈಗ ಕಾಣುತ್ತಿರುವ ದೃಶ್ಯಪದಾರ್ಥಗಳಲ್ಲವೂ ಎಂದಾದರೊಂದು ದಿನ ನಾಶವಾಗಿಯೇ ಆಗುತ್ತವೆಯೆಂದು ನೀನು ಚೆನ್ನಾಗಿ ತಿಳಿದುಕೊಂಡಿರು ಆದರ ಯಾವ ಪ್ರಕಾಶದಿಂದ ಈ ಪ್ರಪಂಚದ ಆಟನೋಟಗಳು ತೋರುತ್ತಿವೆಯೋ, ಯಾವ ಆತ್ಮವಸ್ತುವಿನಿಂದ ಈ ಲೋಕವು ವಿಸ್ತೃತವಾಗಿದಯೋ ಆ ಅವಾಙ್ಮಾನಸ ಗೋಚರವಾದ ಮಹಾವಿಷ್ಣುವಿನ ತೇಜಸ್ಸು ಮಾತ್ರ ಎಂದಂದಿಗೂ ನಾಶವಾಗತಕ್ಕದ್ದೇ ಅಲ್ಲ

೯-೧೬ ಇನ್ನೂ ಈ ಆತ್ಮಶಕ್ತಿಯ ಸ್ವರೂಪವನ್ನು ಹೇಳುತ್ತೇನೆ, ಕೇಳು ಯಾವ ಆತ್ಮವಸ್ತು ಗಂಧಗುಣದಿಂದ ಬಿಡಲ್ಪಟ್ಟಿದೆಯೋ, ಯಾವ ಆತ್ಮನಿಗೆ ರೂಪ

ನಿರ್ಗುಣಂ ತದ್ಗುಣಾತೀತಮಂತಿಕಸ್ಥಂ ಚ ದೂರಗಂ ।
ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ॥ ೧೦ ॥

ಸರ್ವತಃ ಪಾಣಿಪಾದಂತಂ ಸರ್ವತೋಽಕ್ಷಿಶಿರೋಮುಖಂ ।
ಸರ್ವೇಂದ್ರಿಯಗುಣಂ ದೇವಂ ಸರ್ವತಃ ಪರಮೇಶ್ವರಂ ॥ ೧೧ ॥

ಅವಿನಾಶಿ ತದೇವೈಕಂ ಯಸ್ಯೋದರಗತಂ ಜಗತ್ ।
ಸದಾಶಿವೇತಿ ತಂ ಕೇಚಿದಾಹುರ್ದೇವಂ ಜಗತ್ಪತಿಂ ॥ ೧೨ ॥

ವಾಸುದೇವೇತಿ ಚಾಪ್ಯನ್ಯೇ ಕಾಲಮಿತ್ಯೇವ ಚಾಪರೇ ।
ದೈವಮಿತ್ಯಪರೇ ತಂ ಚ ಸ್ವಭಾವಮಿತಿ ಚಾಪರೇ ॥ ೧೩ ॥

ಕರ್ಮೇತಿ ಚಾಪರೇ ಪ್ರಾಹುಃ ಪುರುಷೇತಿ ತಥಾಪರೇ ।
ಪ್ರಣವಾಖ್ಯಂ ತಥಾ ತಂ ಚ ವಿದುರ್ವೇದವಿದೋ ಜನಾಃ ॥ ೧೪ ॥

---

ಸ್ಪರ್ಶಾದಿಗಳಿಲ್ಲವೋ, ಶಬ್ದದಿಂದಾವುದು ದೂರವಾದುದೋ ಮತ್ತು ರಸವಿವರ್ಜಿತವಾದುದಾದರೂ ಸರ್ವರಸವನ್ನೂ ಉತ್ಪತ್ತಿಮಾಡುವುದಾವುದೋ, ಯಾವುದು ಸರ್ವೇಶ್ವರತ್ವವನ್ನು ಹೊಂದಿ ಸರ್ವಕಾಲದಲ್ಲೂ ಸರ್ವ ಪದಾರ್ಥಗಳಲ್ಲೂ ಭಾಸಮಾನವಾಗಿರುದೋ, ನಿರ್ಗುಣವಾಗಿಯೂ, ಗುಣಾತೀತವಾಗಿಯೂ ಹತ್ತಿರದಲ್ಲೇ ಇರುವುದಾದರೂ ಎಲ್ಲೋ ದೂರದಲ್ಲಿದೆಯೆಂದು ತಿಳಿಯಲ್ಪಡುವುದಾಗಿಯೂ, ಸರ್ವೇಂದ್ರಿಯಗುಣಗಳಿಗೂ ಆಭಾಸವಾಗಿ ಸರ್ವೇಂದ್ರಿಯಗಳಿಂದಲೂ ಬಿಡಲ್ಪಟ್ಟುದಾಗಿದ್ದಾಗ್ಯೂ ಎಲ್ಲಾ ಕಡೆಗಳಲ್ಲೂ ಕೈಗಳನ್ನೂ, ಕಾಲುಗಳನ್ನೂ, ಕಣ್ಣುಗಳನ್ನೂ, ತಲೆಯನ್ನೂ, ಮುಖವನ್ನೂ, ಸರ್ವೇಂದ್ರಿಯ ಗುಣಗಳನ್ನೂ ತೋರಿಸುತ್ತಾ ಎಲ್ಲೆಲ್ಲೂ ನಾನು ನಾನೆಂದು ಹೇಳಿಕೊಳ್ಳುತ್ತಾ, ಸರ್ವದಾ ವಿನಾಶವಿಲ್ಲದೆ ಇರುವುದಾಗಿ ಸರ್ವರ ಹೃದಯಗುಹೆಗಳಲ್ಲಡಗಿ ಕುಳಿತು ಜಗದಾಕಾರವಾಗಿ ಕಾಣುತ್ತಿರುವೀ ಪರಬ್ರಹ್ಮ ವಸ್ತುವನ್ನು ಕೆಲವರು ಸದಾಶಿವನೆಂದೂ, ಮತ್ತೆ ಕೆಲವರು ವಾಸುದೇವನೆಂದೂ, ಇನ್ನೂ ಕೆಲವರು ಕಾಲನೆಂದೂ, ಇನ್ನು ಕೆಲವರು ದೇವರೆಂದೂ, ಮತ್ತನಿಬರು ಪ್ರಕೃತಿ (ಸ್ವಭಾವ) ಯೆಂದೂ, ಮತ್ತನೇಕರು ಕರ್ಮವೆಂದೂ, ಕೆಲವರು ಪುರುಷನೆಂದೂ, ವೇದವನ್ನು ತಿಳಿದವರೆಲ್ಲರೂ ಇದು ಪ್ರಣವವೆಂದೂ ಹೇಳುವರು ಯಾರೇನೆಂದು ಬೇಕಾದರೂ ಹೇಳಿಕೊಳ್ಳಲಿ. ಆ ಪರಮಾತ್ಮನೊಬ್ಬನೇ ಹುಟ್ಟುಸಾವುಗಳಿಲ್ಲದೆ ನಿತ್ಯನಾದವನು. ಅವನು ಅವ್ಯಕ್ತನು ಆ ಪರಮಾತ್ಮನೊಬ್ಬನ ಹೊರತಾಗಿ ಉಳಿದ ಸಕಲ ಪ್ರಪಂ

ತದೇಕಮಜಮವ್ಯಕ್ತಮವಿನಾಶಂ ನರಾಧಿಪ ।
ಯತೇ ತಮೇಕಮೀಶಾನಮಂತವತ್ಸಕಲಂ ಜಗತ್ ॥ ೧೫ ॥

ಏತತ್ತವೋಕ್ತಂ ಭುವನಸ್ಯ ಪತ್ಯುಃ
ರ್ಮಯಾ ಸ್ವರೂಪಂ ಯದುವಂಶಚಂದ್ರ ।
ಭಕ್ತಿಂ ವಿನಾ ಬುದ್ಧಿಮತಾಽಪಿ ಯಸ್ಯ
ಶಕ್ಯಂ ನ ವಕ್ತುಂ ಗ್ರಹಣಂ ನರೇಣ ॥ ೧೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪುರುಷಸ್ವರೂಪವರ್ಣನಂ ನಾಮೈಕಸಪ್ತತ್ಯಧಿಕ
ಶತತಮೋಽಧ್ಯಾಯಃ.

ಚನೂ ವಿನಾಶವನ್ನು ಹೊಂದತಕ್ಕದ್ದಾಗಿರುವುದು ಎಲೈ ವಜ್ರರಾಜನೇ! ನಿನಗೆ ಈಗ ಲೋಕೇಶ್ವರನಾದ ಪರಮಾತ್ಮನ ಸ್ವರೂಪವನ್ನು ತಿಳಿಸಿರುತ್ತೇನೆ ಆ ಪರಮಾತ್ಮನಲ್ಲಿ ಭಕ್ತಿಯಿಲ್ಲದವನು ಎಂತಹ ಬುದ್ಧಿವಂತನೇ ಆಗಿರಲಿ, ಅಂಥವನು ಈ ಪರಮಾತ್ಮನನ್ನು ಹೊಂದಲೂ ಆರನು, ಆತನ ಸ್ವರೂಪವನ್ನು ಗ್ರಹಿಸಲೂ ಆರನು, ತಿಳಿಯಲೂ ಆರನು, ಹೇಳಲೂ ಆರನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಪುರುಷಸ್ವರೂಪ ವರ್ಣನೆಯೆಂಬ
ಹೆಸರಿನ ಒಂದುನೂರ ಎಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ದ್ವಿಸಪ್ತತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಪ್ರಾದುರ್ಭಾವಾ ವರಾಹಾದ್ಯಾಃ ಸರ್ವೇಶಸ್ಯಾಮಿತಾತ್ಮನಃ ।
ಮಹಾಭೂತಚಯಾಃ ಸರ್ವೇ ಜನ್ಮಮೃತ್ಯುಯುತಾಶ್ಚ ಯೇ ॥ ೧ ॥

ಯದ್ಯೇವಂ ಪ್ರಾಣಿಭಿಸ್ತೇಷಾಂ ಕೋ ವಿಶೇಷೋ ಭೃಗೂತ್ತಮ ।
ಏತತ್ತ್ವಂ ಸಂಶಯಂ ಛಿಂದಿ ಪರಂ ಕೌತೂಹಲಂ ಹಿ ಮೇ ॥ ೨ ॥

॥ ಮಾರ್ಕಂಡೇಯ ಉವಾಚ ॥

ಸರ್ವೇ ಜೀವಾ ಮಹೀಪಾಲ ಕರ್ಮಬಂಧನಿಬಂಧನಾಃ ।
ಜಾಯಂತೇ ಚ ಮ್ರಿಯಂತೇ ಚ ಪರತಂತ್ರಾಃ ಸದೈವ ಚ ॥ ೩ ॥

---

### ನೂರ ಎಪ್ಪತ್ತೆರಡನೆಯ ಅಧ್ಯಾಯವು.

೧-೨ ವಜ್ರರಾಜನು ಪ್ರಶ್ನೆ ಮಾಡುತ್ತಾನೆ —ಸರ್ವಾತ್ಮನಾದ ಪರಮಪುರುಷನು ವರಾಹಾದ್ಯವತಾರಗಳನ್ನು ಮಾಡಿ ಮಹಾಭೂತಗಳಲ್ಲಿ ಬೆರೆದು ಜನನ ಮರಣಾದಿಗಳನ್ನು ಅನುಭವಿಸುವನೆಂದ ಮೇಲೆ ಅವನಿಗೂ ಇತರ ಪ್ರಾಣಿಗಳಿಗೂ ಏನು ವಿಶೇಷ ವ್ಯತ್ಯಾಸವಾದಂತಾಯಿತು? ಈ ವಿಚಾರವನ್ನು ತಿಳಿಯಲು ನನಗೆ ಬಹಳ ಆಶೆಯಾಗಿದೆ ಈಸಂಶಯವನ್ನು ದಯಮಾಡಿ ಪರಿಹರಿಸೈ! ಮಾರ್ಕಂಡೇಯ ಮುನೀಂದ್ರನೇ!

೩ ಮಾರ್ಕಂಡೇಯನು ಹೇಳುತ್ತಾನೆ —ಎಲೈ ರಾಜನೇ! ಕೇಳು. ಸಕಲ ಜೀವರಾಶಿಗಳೂ ತಮ್ಮ ತಮ್ಮ ಕರ್ಮಗಳಿಂದ ಬಂಧಿಸಲ್ಪಟ್ಟು ಕರ್ಮಾನುಸಾರವಾಗಿ ಹುಟ್ಟುತ್ತವೆ ಮತ್ತು ಸಾಯುತ್ತವೆ ಮತ್ತು ಆ ಜೀವಿಗಳು ಸುತರಾಂ ಸ್ವತಂತ್ರ ಜೀವಿ

ಈಶ್ವರಪ್ರೇರಿತೈರ್ನಿತ್ಯಂ ಕರ್ಮಬಂಧೈಃ ಶುಭಾಶುಭೈಃ ।
ಜನ್ಮಾಂತರಕೃತೈರ್ಭೂಪ ಸುಖದುಃಖಸಮನ್ವಿತಾಃ ॥ ೪ ॥

ವಾಸುದೇವಸ್ತು ಧರ್ಮಾತ್ಮಾ ಪ್ರಾದುರ್ಭಾವೇಷು ಯಾದವ ।
ಆತ್ಮನಃ ಸ್ವೇಚ್ಛಯಾ ಜನ್ಮ ವಿಧತ್ತೇ ಮರಣಂ ತಥಾ ॥ ೫ ॥

ಕರ್ಮಾಣಿ ನ ಚ ಲಿಪ್ಯಂತಿ ಪ್ರಾದುರ್ಭಾವೇಷ್ವಪಿ ಪ್ರಭುಂ ।
ಕರ್ಮಸ್ವಪಿ ಸದಾ ಸಕ್ತಂ ಪದ್ಮಪತ್ರಮಿವಾಂಭಸಾ ॥ ೬ ॥

ಫಲಾನಾಂ ಕರ್ಮಜಾತಾನಾಂ ಭೋಗಂ ತತ್ರಾಪಿ ಯಾದವ ।
ನೃಣಾಂ ದರ್ಶಯತೇ ಮಿಥ್ಯಾ ಮರ್ಯಾದಾಭೇದಭಿನ್ನೃಪ ॥ ೭ ॥

ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಯಾದವ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜತ್ಯಸೌ ॥ ೮ ॥

---

ಗಳಲ್ಲಿ ಅವರ ಜನನ ಮರಣಗಳು ಪರಾಧೀನ (ಆತ್ಮಾಧೀನ ಅಥವಾ ದೈವಾಧೀನ) ವೆಂದು ತಿಳಿದುಕೋ

೪-೫ ಈ ಜೀವರಾಶಿಗಳು ತಾವು ತಾವು ಹಿಂದಿನ ಜನ್ಮಗಳಲ್ಲಿ ಮಾಡಿದ ಶುಭಾಶುಭರೂಪಗಳಾದ ಈಶ್ವರಪ್ರೇರಿತ ಕರ್ಮಬಂಧಗಳಿಂದ ಬಿಗಿಯಲ್ಪಟ್ಟವರಾಗಿ ಪ್ರತಿನಿತ್ಯವೂ ಸುಖದುಃಖಾಗಳನ್ನನುಭವಿಸುವರು ಇವರ ಜನನ ಮರಣಗಳು ಈಶ್ವರಾಧೀನವಾಗಿರುತ್ತವೆ ಆದರೆ ಆ ಪರಮಪುರುಷನಾದ ವಾಸುದೇವನು ಅವತರಿಸಬೇಕಾಗಿ ಬಂದಾಗ ಸ್ವತಂತ್ರ ಶಕ್ತಿಯಿಂದಲೇ, ಇಚ್ಛಾಮರಣವನ್ನು ಅನಾಯಾಸವಾಗಿ ಹೊಂದಬಲ್ಲನು

೬. ಆ ಭಗವಂತನು ಅವತಾರಮಾಡಿದಾಗ ಯಾವ ಕರ್ಮಗಳೂ ಅವನನ್ನು (ಪದ್ಮಪತ್ರವನ್ನು ನೀರು ಅಂಟದಂತೆ) ಅಂಟುವುದಿಲ್ಲ ಭಗವಂತನು ಸರ್ವದಾ ಕರ್ಮಗಳಲ್ಲಿ ಸಕ್ತನಾಗಿದ್ದರೂ ಕರ್ಮಬಂಧವು ಅವನಿಗೆ ಇಲ್ಲವೇ ಇಲ್ಲ

೭-೧೨. ಕರ್ಮಗಳನ್ನು ಮಾಡಿದರ ಆದರ ಫಲವಾಗಿ ನಾನಾಭೋಗಗಳನ್ನು ನಾನು ಮನುಷ್ಯರಿಗೆ ಕೊಡುತ್ತೇನೆಂದು ಆ ಭಗವಂತನು ಆಶೆಯನ್ನು ತೋರಿಸುತ್ತಾನೆ ಯಾರು ಯಾವ ಆಶೆಯೂ ಇಲ್ಲದ ಈಶ್ವರಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡುವರೋ ಅವರಿಗೆ ಈ ಮಿಥ್ಯಾಸುಖಗಳು ಮರ್ಯಾದಾಭೇದಕಗಳೆಂದು ತಿಳಿಸಿ ಮುಕ್ತಿಯನ್ನು ಕೊಡುತ್ತಾನೆ ಈ ಪರಮಾತ್ಮನು ಈ ಲೋಕದಲ್ಲಿ ಯಾವಾಗ

**ದೇವತಿರ್ಯಜ್ಮನುಷ್ಯೇಷು ಗಂಧರ್ವೋರಗಪಕ್ಷಿಷು ।**
**ಯೋನಿಷ್ವನ್ಯೇಷ್ವಪಿ ತಥಾ ಬುದ್ಧ್ವಾಕಾರ್ಯಬಲಾಬಲಂ ॥ ೯ ॥**

**ಯಸ್ಯಾಂ ಯಸ್ಯಾಂ ಯದಾ ಯೋನೌ ಪ್ರಾದುರ್ಭವತಿ ಕಾರಣಾತ್ ।**
**ತದ್ಯೋನಿಸದೃಶಾ ತಸ್ಯ ತದಾ ಲೋಕೇ ವಿಚೇಷ್ಟತೇ ॥ ೧೦ ॥**

**ಸಂಹರ್ತುಂ ಜಗದೀಶಾನಃ ಸಮರ್ಥೋಽಪಿ ತದಾ ನೃಪ ।**
**ತದ್ಯೋನಿಸದೃಶೋಪಾಯೈರ್ವಧ್ಯಾನ್ಹಿಂಸತಿ ಯಾದವ ॥ ೧೧ ॥**

**ಹಾರ್ದಂ ತಮಸ್ತಥಾ ನೈಶಂ ಮೂರ್ತಂ ಚ ಪುರುಷೋತ್ತಮಃ ।**
**ಏಕ ಏವ ಸ ಲೋಕಾನಾಂ ನಾಶಯತ್ಯಮಲದ್ಯುತಿಃ ॥ ೧೨ ॥**

**ಹಾರ್ದಂ ಧ್ವಸ್ತಂ ತಮಸ್ತೇನ ಜಗತೋ ದೇವಮೂರ್ತಿನಾ ।**
**ಜ್ಯೋತೀರೂಪೇಣ ಚ ಧ್ವಸ್ತಂ ತಮೋ ನೈಶಂ ಸದಾರುಣಂ ॥ ೧೩ ॥**

**ತಮೋ ನಾಶಯಿತುಂ ಮೂರ್ತಂ ಪ್ರಾದುರ್ಭಾವಗತಃ ಸದಾ ।**
**ಮೂರ್ತಂ ತಮಶ್ಚ ರಾಜೇಂದ್ರ ದೈತ್ಯದಾನವರಾಕ್ಷಸಾಃ ॥ ೧೪ ॥**

---

ಅಧರ್ಮವು ಹೆಚ್ಚಿ ಧರ್ಮವು ನಾಶನಾಗುತ್ತಾ ಬರುವುದೋ ಆ ಸಮಯದಲ್ಲಿ ಯಾವುದಾದರೊಂದು ರೂಪದಿಂದ ಅವತಾರಮಾಡುತ್ತಾನೆ ದೇವತಾರೂಪದಲ್ಲೋ, ಮನುಷ್ಯರೂಪದಲ್ಲೋ, ಗಂಧರ್ವ, ಸರ್ಪ, ಪಕ್ಷಿ ಮುಂತಾದ ಯಾವುದಾದರೊಂದು ಪ್ರಾಣಿಯ ಯೋನಿಯಲ್ಲಿ ಆ ಕಾಲದ ಬಲಾಬಲಗಳನ್ನು ನೋಡಿಕೊಂಡು ಆದಕ್ಕೆ ತಕ್ಕ ಜನ್ಮವನ್ನು ತಾಳುವನು ಯಾವ ಯಾವ ಯೋನಿಯಲ್ಲಿ ದೇವರು ಯಾವ ವಿಧವಾಗಿ ಹುಟ್ಟುತ್ತಾನೋ ಆ ಯೋನಿಗೆ ಸದೃಶವಾದ ವ್ಯಾಪಾರವನ್ನು ಮಾಡುತ್ತಿರುತ್ತಾನೆ ಆಗ ಆ ಭಗವಂತನು ತನ್ನ ಅಪಾರ ದೈವೀಶಕ್ತಿಯನ್ನು ಧರಿಸಿದವನಾಗಿ, ಆ ಜನ್ಮಕ್ಕೆ ಸದೃಶವಾದ ಉಪಾಯಗಳಿಂದ ದುಷ್ಟರನ್ನು ಸಂಹರಿಸಿ ಲೋಕಕ್ಷೇಮವನ್ನುಂಟುಮಾಡುತ್ತಾನೆ ನಿರ್ಮಲಕಾಂತಿಯನ್ನು ಧರಿಸಿದ ಪರಮಾತ್ಮನು ಅಗಾಧವಾದ ಕತ್ತಲೆಯನ್ನು ಸೂರ್ಯನೊಬ್ಬನೇ ನಾಶಮಾಡಿ ಬೆಳಕನ್ನುಂಟುಮಾಡುವಂತೆ ಸಕಲರಾದ ದುಷ್ಟರನ್ನೂ ತಾನೊಬ್ಬನೇ ಸಂಹರಿಸಿ ಪ್ರಪಂಚವನ್ನು ರಕ್ಷಿಸಲು ಸಮರ್ಥನಾಗಿರುತ್ತಾನೆ

೧೩-೧೮ ಅಗಾಧವಾದ ತಮಸ್ಸುಗಳೆಂದರೆ ತಮೋಗುಣವಿಶಿಷ್ಟರಾದ ದೈತ್ಯರೂ

ವಂಧ್ಯಾನಾಮಪಿ ದೈತ್ಯಾನಾಂ ದೇಹಸ್ಥೋಽಪಿ ಜನಾರ್ದನಃ ।
ನ ವಿಮುಂಚತಿ ದೇಹಾನಿ ಯುಕ್ತ್ಯಾ ತಾಂಶ್ಚ ಜಿಘಾಂಸತಿ ॥ ೧೫ ॥

ದೇವತಾನಾಂ ಗುರೂಣಾಂ ಚ ದ್ವಿಜಾನಾಂ ಚ ಗುರುಪ್ರಿಯಃ ।
ಶಾಸ್ತ್ರದೃಷ್ಟೇನ ವಿಧಿನಾ ಭವತ್ಯಾರಾಧನೇ ರತಃ ॥ ೧೬ ॥

ನ ಚ ತಸ್ಯಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನೈವಾನಾಪ್ತಮವಾಪ್ತವ್ಯಂ ವರ್ತತೇಽಥ ಚ ಕರ್ಮಸು ॥ ೧೭ ॥

ಸರ್ವಜ್ಞಃ ಸರ್ವದರ್ಶೀ ಚ ಸರ್ವಶಕ್ತಿರಪಿ ಪ್ರಭುಃ ।
ತಥಾಪ್ಯಧೀತೇ ಯಜತೇ ತಪಸ್ತಪ್ಯತಿ ಪಾರ್ಥಿವ ॥ ೧೮ ॥

—

ದುಷ್ಟರೂ ಎಂದರ್ಥ ಅಂತಹ ತಾಮಸರನ್ನು ಅವತಾರರೂಪೀ ಮಹಾವಿಷ್ಣುವು ನಾಶಮಾಡುವವನಾಗಿ ಕತ್ತಲೆಯು ಬೇಕಾದ ಮೇಲೆ ನಾಶವಾಗುವ ರೀತಿಯಾಗಿ ತಾಮಸನಾಶಾನಂತರವಲ್ಲಿ ಜ್ಯೋತಿರ್ಮಯನಾಗಿ ಬೆಳಗುತ್ತಾನೆ ಇದೇ ರೀತಿ ತಮೋನಾಶಕ್ಕಾಗಿಯೇ ಮೂರ್ತಿಗಳ ಅವತಾರವಾಗುವುದು ದೈತ್ಯದಾನವ ರಾಕ್ಷಸರೆಂಬ ಸಕಲ ರಾಕ್ಷಸ ವರ್ಗವೂ ತಾಮಸರೆಂದೇ ।ವ್ಯವಹರಿಸಲ್ಪಡುವುದು ಎಂತಹ ಬರಡು ವೃತ್ಯನನ್ನಾದರೂ ಬಿಡದೆ ಆ ಮಹಾನುಭಾವನು ಯುಕ್ತಿಯಿಂದ ಸಕಲ ದುಷ್ಟರನ್ನೂ ಸಂಹರಿಸಿ ಭೂಭಾರವನ್ನಿಳುಕುವನು ಈರೀತಿ ದುಷ್ಟರನ್ನು ನಿಗ್ರಹಮಾಡಿ ಶಾಂತಿ ಸ್ಥಾಪನೆ ಮಾಡಿದ ಬಳಿಕ ಶಿಷ್ಟರಾದ ದೇವದ್ವಿಜಗುರುಗಳೇ ಮುಂತಾದ ಸಾಧುಸಂತರನ್ನು ಆ ಗುರುಪ್ರಿಯನಾದ ಪರಬ್ರಹ್ಮಮೂರ್ತಿಯು ಶಾಸ್ತ್ರವಿಹಿತವಾದ ಮಾರ್ಗವನ್ನನುಸರಿಸಿ ಅವರ ಆರಾಧನೆಯಲ್ಲಿ ನಿರತನಾಗಿರುತ್ತಾನೆ ಆ ಪರಮಪುರುಷನಿಗೆ ಮೂರು ಲೋಕದಲ್ಲೂ ಮಾಡಲ್ಪಡಬೇಕಾದ ಕೆಲಸವಾವುದೂ ಇಲ್ಲವೇ ಇಲ್ಲವಾದರೂ, ಯಾರಿಂದಲೂ ಯಾವ ಪ್ರಯೋಜನವೂ ಆಗಬೇಕಾಗಿಲ್ಲವಾದರೂ ಕರ್ಮವನ್ನು ಮಾಡುತ್ತಲೇ ಇರುತ್ತಾನೆ ಸರ್ವಜ್ಞನೂ, ಸರ್ವ ಸಮದರ್ಶಿಯೂ, ಸರ್ವಶಕ್ತನೂ, ಸರ್ವೇಶ್ವರನೂ ಆದ ಆ ಭಗವಂತನು ಈರೀತಿ ಕರ್ಮನಿರತನಾಗಿಯೇ ಇದ್ದುಕೊಂಡು ಲೋಕಮರ್ಯಾದಾಸ್ಥಾಪನೆಗಾಗಿಯೂ, ಲೋಕ ಹಿತಕ್ಕಾಗಿಯೂ ಇತರರಿಗ ಮೇಲ್ಪಂಕ್ತಿ ಹಾಕುವುದಕ್ಕಾಗಿ ಓದುತ್ತಾನೆ, ಯಜ್ಞಮಾಡುತ್ತಾನೆ, ತಪಸ್ಸು ಮಾಡುತ್ತಾನೆ

ಮರ್ಯಾದಾಸ್ಥಾಪನಾರ್ಥಾಯ ಜಗತೋ ಹಿತಕಾಮ್ಯಯಾ ।
ಕರೋತಿ ರಾಜನ್ಕರ್ಮಾಣಿ ಕೀನಾಶ ಇವ ದುರ್ಬಲಃ ॥ ೧೯ ॥

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೦ ॥

ಏತತ್ಕಾರಣಮಾಸ್ಥಾಯ ಸದಾ ಕರ್ಮಸು ವರ್ತತೇ ।
ಪ್ರಾದುರ್ಭಾವಕೃತೋ ವಿಷ್ಣುರ್ಯಥಾನ್ಯಃ ಪ್ರಾಕೃತಸ್ತಥಾ ॥ ೨೧ ॥

ದೇವೇಭ್ಯಶ್ಚ ಋಷಿಭ್ಯಶ್ಚ ವರಾನ್ಪ್ರಾರ್ಥಯತೇ ಸದಾ ।
ವರಾಂಶ್ಚ ವರದಸ್ತೇಷಾಂ ಮಾನಯತ್ಯಪಿ ಪಾಂಡವ ॥ ೨೨ ॥

ಪ್ರಾದುರ್ಭಾವರತಸ್ತಸ್ಮಾತ್ಪರೋಽಯಮಿತಿ ಮಾನವಾಃ ।
ಪುರುಷಂ ನಾಧಿಗಚ್ಛಂತಿ ಮೋಹಿತಾಸ್ತಸ್ಯ ಮಾಯಯಾ ॥ ೨೩ ॥

---

೧೯-೨೦ ಈರೀತಿ ನಾನಾವತಾರಗಳನ್ನು ಕಳೆದ ಕಾಲದಲ್ಲೆಲ್ಲಾ ಆ ಪರಾಪರ ಮೂರ್ತಿಯು ಕರ್ಮಮಾರ್ಗವನ್ನನುಸರಿಸಿ ಅಶಕ್ತನಾದ ದರಿದ್ರಮನುಷ್ಯನು (ರೈತನು) ಫಲವನ್ನು ಬಯಸಿ ಬಕ್ತಿಯಿಂದ ಕರ್ಮಮಾಡುವ ರೀತಿಯಿಂದ ಕರ್ಮಮಾಡುತ್ತಿರುತ್ತಾನೆ ಉತ್ತಮಪುರುಷನೆನಿಸಿಕೊಂಡಿರುವವನು ಯಾವ ಯಾವ ಕೆಲಸಗಳನ್ನು ಮಾಡುವನೋ ಅದೇ ಮಾದರಿಯನ್ನು ಸಕಲರೂ ಇದು ಪ್ರಮಾಣವೆಂದು ನಂಬಿ ಹಾಗೆಯೇ ನಡೆಯುತೊಡಗುತ್ತಾರಾದ್ದರಿಂದ ಅದರಂತೆ ಭಗವಂತನು ಕರ್ಮಾಸಕ್ತನಾಗಿರುವನು

೨೧-೨೩ ಈ ಕಾರಣಕ್ಕಾಗಿಯೇ ಲೋಕದಲ್ಲವತರಿಸಿದ ಭಗವಂತನು ಪ್ರಾಕೃತ ಜನರಂತೆ (ಸಾಮಾನ್ಯ ಮಾನವರಂತೆ) ಕರ್ಮಮಾಡಿ ದೇವತೆಗಳಿಂದಲೂ ಋಷಿಗಳಿಂದಲೂ ವರವನ್ನು ಬೇಡುತ್ತಾನೆ ವಜ್ರರಾಜ! ನೋಡಿದಿಯೇನಯ್ಯಾ! ಈ ಚೋದ್ಯವನ್ನು! ಎಲ್ಲ ಜನರಿಗೂ ಬೇಕುಬೇಕಾದ ವರವನ್ನು ಕೊಟ್ಟು ಕಾಪಾಡುವ ಪರಮಾತ್ಮನು ಇನ್ನೊಬ್ಬರನ್ನು ತಾನು ವರಬೇಡುತ್ತಾನೆಂಬ ಮಾತಿನ ಹುಡುಗಾಟಿಕೆಯನ್ನು ನೋಡಿದರೆ ಇವೆಲ್ಲಾ ಲೀಲಾನಾಟಕಸೂತ್ರಧಾರಿಯ ವಿನೋದ ಕ್ರೀಡೆಯಲ್ಲದೆ ಮತ್ತೇನು? ತಿಳಿಯದ ಜನರು ಭಗವಂತನ ಈ ಅವತಾರ ರಹಸ್ಯಗಳನ್ನರಿಯಲಾರದ ಈಶ್ವರೀಮಾಯೆಯಿಂದ ಮೋಹಿತರಾಗಿ ಇವನೂ ಒಬ್ಬ ಯಾರೋ ದೊಡ್ಡಮನುಷ್ಯನಿರಬಹುದೆಂದು ಭಾವಿಸಿಬಿಡುವರಯ್ಯಾ!

ಪ್ರಾದುರ್ಭಾವಂ ಗತೋಽಪ್ಯೇವಂ ಸಂಹೃತ್ಯ ಸ ಚರಾಚರಂ ।
ನಿಮೇಷಾಂತರಮಾತ್ರೇಣ ಶಕ್ತಿರ್ನಾ ಜಗತಃ ಪ್ರಭುಃ ॥ ೨೪ ॥

ಪ್ರಾದುರ್ಭಾವಗತಸ್ಯಾಪಿ ತಸ್ಯ ಸರ್ವಗತಾ ಸ್ಮೃತಾ ।
ಸ್ವತಂತ್ರತಾ ಚ ಸರ್ವತ್ರ ನಾತ್ರ ಕಾರ್ಯಾ ವಿಚಾರಣಾ ॥ ೨೫ ॥

ಮಹದ್ವಿಶೇಷಮೇತತ್ತೇ ಪ್ರಾಣಿಭಿಃ ಪ್ರಾಣಿನಾಂ ಪತೇಃ ।
ಮಯೋಕ್ತಂ ತಸ್ಯ ದೇವಸ್ಯ ಸರ್ವಗಸ್ಯ ಸ್ವಯಂಭುವಃ ॥ ೨೬ ॥

ಆಕ್ಷಿಪ್ತಾಃ ಕರ್ಮಭಿಃ ಪುಣ್ಯೈಃ ಕೈಶ್ಚಿದ್ಯದುವರೋತ್ತಮ ।
ತೇಷಾಮಾವಿಶತೇ ದೇವಸ್ತೇಜಸಾ ತೇನ ಸರ್ವಶಃ ॥ ೨೭ ॥

ಆವಿಷ್ಟಾಸ್ತೇಜಸಾ ತೇನ ದೇವೇನ ಪರಮೇಷ್ಠಿನಾ ।
ತದ್ವತ್ಕರ್ಮಾಣಿ ಕುರ್ವಂತಿ ಪೂಜ್ಯಮಾನಾ ಮಹರ್ಷಿಭಿಃ ॥ ೨೮ ॥

---

೨೪-೨೮ ಈರೀತಿ ಆ ಪರಮಾತ್ಮನು ಅವತಾರಮಾಡಿದ ದೇಹದಿಂದಲೇ ಸಚರಾಚರ ಪ್ರಪಂಚವನ್ನು ಒಂದು ನಿಮಿಷ ಮಾತ್ರದಲ್ಲಿ ದಹಿಸಿಬಿಡಬಲ್ಲನು ಕೃಪೆಯಿಂದ ಬದುಕಿಸಲೂ ಬಲ್ಲನು ಇಂತಹ ಶಕ್ತಿ ಆ ಅವತಾರ ಪುರುಷನಿಗಿದೆ ಬೇರೆಯಾದ ಪರಚ್ಛಿನ್ನ ದೇಹದಲ್ಲಿದ್ದ ಮಾತ್ರಕ್ಕೇ ಭಗವಂತನು ಅಲ್ಲಿ ಮಾತ್ರ ಇರುತ್ತಾನೆಂದು ತಿಳಿಯಬಾರದು. ಎಲ್ಲೆಲ್ಲೂ ಯಾವಾಗಲೂ ಅವನು ಪೂರ್ಣನಾಗಿ ಪ್ರಕಾಶಿಸುತ್ತಲೇ ಇರುತ್ತಾನೆ ಅವನು ಯಾವಾಗಲೂ `ಸರ್ವತಂತ್ರ ಸ್ವತಂತ್ರನೆಂದು ತಿಳಿಯಬೇಕು ಈವಿಷಯದಲ್ಲಿ ಸಂಶಯವಿಲ್ಲ ಇನ್ನುಕೆಲವರು ಮಹನೀಯರಿರುತ್ತಾರೆ ಆ ಪರಮಾತ್ಮನು ತಾನು ಒಂದೇ ಒಂದು ಅಂಶದಿಂದ ಅವರಲ್ಲಿ ಅವರ ಪುಣ್ಯ ವಿಶೇಷದಿಂದ ಸೇರಿದವನಾಗಿ ಪುಣ್ಯಕರ್ಮಗಳನ್ನು ಮಾಡಿಸುತ್ತಾ ಅವರನ್ನು ಲೋಕಪೂಜ್ಯರನ್ನಾಗಿಮಾಡುತ್ತಾನೆ ಈರೀತಿ ಪರಮಾತ್ಮನ ತೇಜಸ್ಸಿನಿಂದ ಕೂಡಿದ ಆ ಮಹಾಪುರುಷರು ದೇವರಂತೆಯೇ ಸತ್ಕರ್ಮಾನುಷ್ಠಾನವನ್ನು ಮಾಡುತ್ತಿರುತ್ತಾರೆ. ಇಂತಹ ಮಹನೀಯರನ್ನು ಋಷಿಗಳೂ ಸಹ ಪೂಜಿಸುತ್ತಾರೆ ಆತ್ಮತೇಜಸ್ಸಿನ ಮಹಿಮೆಯ ವಿಶೇಷಗಳು ಹೀಗೆಲ್ಲಾ ಲೋಕದಲ್ಲಿ ಕಾಣುತ್ತಿರುತ್ತವೆ

ತಥಾ ತು ಕಾಲೇ ಸಂನ್ಯಸ್ತಾಸ್ತೇನ ವೈಷ್ಣವತೇಜಸಾ ।
ದಿಷ್ಟಾಂತವಶಮಾಯಾಂತಿ ತಸ್ಯೈವ ರುಚಿತಂ ಯಥಾ ॥ ೨೯ ॥

ಯೇ ಚ ಕೇಚನ ಲೋಕೇಽಸ್ಮಿನ್ದೃಶ್ಯಂತೇ ತೇಜಸಾನ್ವಿತಾಃ ।
ತೇಷಾಂ ತದ್ವೈಷ್ಣವಂ ತೇಜಸ್ತ್ವಯಾ ಜ್ಞೇಯಂ ಮಹೀಪತೇ ॥ ೩೦ ॥

ಯಚ್ಚಂದ್ರಮಸಿ ಯಚ್ಚಾಗ್ನೌ ಯಚ್ಚ ಸೂರ್ಯೇ ಜಗತ್ಪತೌ ।
ತೇಜಃ ಪಶ್ಯತಿ ತತ್ಸರ್ವಂ ವೈಷ್ಣವಂ ವಿದ್ಧಿ ಪಾರ್ಥಿವ ॥ ೩೧ ॥

ಅಗಸ್ತ್ಯಪ್ರಮುಖಾನಾಂ ಚ ಯಾ ಚ ಶಕ್ತಿರತೀಂದ್ರಿಯಾ ।
ತತ್ಸ್ಥಸ್ಯ ರಾಜನ್ಸಾ ಜ್ಞೇಯಾ ತ್ವಯಾ ವೈಷ್ಣವತೇಜಸಾ ॥ ೩೨ ॥

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಯುಕ್ತಂ ವೈಷ್ಣವತೇಜಸಾ ॥ ೩೩ ॥

ಬ್ರಾಹ್ಮಣಾನಾಂ ಸುರಾಣಾಂ ಚ ಸಾಧ್ವೀನಾಂ ಚ ತಥಾ ಗವಾಂ ।
ಜಗತಾಂ ಧಾರಿಣೀಂ ಶಕ್ತಿಂ ವಿದ್ಧಿ ತಾಂ ವೈಷ್ಣವೀಂ ವಿಭೋ ॥ ೩೪ ॥

೨೯-೩೩ ಹಾಗೆಯೇ ದೇವತೇಜಸ್ಸುಳ್ಳ ಜನರು ಕ್ರಮೇಣ ವೈಷ್ಣವ ತೇಜಸ್ಸಿನಿಂದ ಬಿಡಲ್ಪಟ್ಟವರಾಗಿ ಅವರವರ ಇಚ್ಛಾನುಸಾರವಾದ ಲೋಕಗಳನ್ನು ಹೊಂದುತ್ತಾರೆ ಈ ಲೋಕದಲ್ಲಿ ಅತ್ಯಂತ ತೇಜೋ ವಿಶೇಷದಿಂದ ಪ್ರಕಾಶಿಸುವ ಜನರನ್ನು ನೋಡಿದರೆ ಇವರಲ್ಲಿ ವೈಷ್ಣವ ತೇಜಸ್ಸಿದೆಯೆಂದು ನಮಗೇ ಸ್ಪಷ್ಟವಾಗಿ ತಿಳಿಯುತ್ತದೆ ಎಲೈ ವಜ್ರಮಹಾರಾಜನೇ' ಚಂದ್ರನಲ್ಲಿ ಕಾಣುವ ಬೆಳಕನ್ನೂ, ಬೆಂಕಿಯಲ್ಲಿ ಕಾಣುವ ಪ್ರಭೆಯನ್ನೂ ಜಗತ್ಪತಿಯಾದ ಸೂರ್ಯನಲ್ಲಿ ಕಾಣುವ ಮಹಾಪ್ರಕಾಶವನ್ನೂ ಸಹ ವೈಷ್ಣವತೇಜಸ್ಸೆಂದೇ ತಿಳಿದುಕೊ ಅಗಸ್ತ್ಯಋಷಿಯೇ ಮೊದಲಾದವರು ಯಾವ ಅತೀಂದ್ರಿಯಶಕ್ತಿಯನ್ನು ಹೊಂದಿರುವರೋ ಆ ಶಕ್ತಿಯಲ್ಲಿ ವೈಷ್ಣವ ತೇಜಸ್ಸು ಚೆನ್ನಾಗಿ ಅಡಗಿದೆಯೆಂದು ತಿಳಿ ಯಾವ ಯಾವ ಸ್ಥಳಗಳಲ್ಲಿ ಯಾವ ಯಾವ ಜನರಲ್ಲಿ ಈಶ್ವರೀಶಕ್ತಿಯು ತೇಜಸ್ಸು ಸ್ಫುರಿಸುತ್ತಿರುವುದೋ ಅವುಗಳೆಲ್ಲಾ ನನ್ನ ತೇಜಸ್ಸಿನ ಅಂಶಗಳಿಂದ ತುಂಬಿದುವುಗಳೆಂದು ತಿಳಿದುಕೋ

೩೪ ಬ್ರಾಹ್ಮಣರಲ್ಲಿ, ದೇವತೆಗಳಲ್ಲಿ, ಪತಿವ್ರತೆಯರುಗಳಲ್ಲಿ, ಹಸುಗಳಲ್ಲಿ, ಕಡೆಗೆ ಜಗತ್ತಿನ ಭಾರಹೊರುವುದರಲ್ಲಿ ಯಾವ ಶಕ್ತಿಯು ತುಂಬಿರುವುದೋ ಅವುಗಳೆಲ್ಲಾ ಆತ್ಮ (ವೈಷ್ಣವ) ಶಕ್ತಿಯಿಂದ ತುಂಬಿದವುಗಳೆಂದು ತಿಳಿದುಕೊ

ರಾಜಾನಸ್ತೇಜಸಾ ಯುಕ್ತಾ ವೈಷ್ಣವೇನ ವಸುಂಧರಾಂ ।
ಪಾಲಯಂತಿ ಮಹೀಪಾಲ ವೀರ್ಯೋದಗ್ರಾ ಯಶಸ್ವಿನಃ ॥ ೩೫ ॥

ಋಷಯಶ್ಚ ತಥಾ ವಿಪ್ರಾ ವೇದವೇದಾಂಗಪಾರಗಾಃ ।
ಪಾಲಯಂತಿ ಜಗತ್ಕೃತ್ಸ್ನಂ ಯುಕ್ತಾ ವೈಷ್ಣವತೇಜಸಾ ॥ ೩೬ ॥

ತ್ರೇತಾಯುಗಾದೌ ಯೇ ಕೇಚಿಜ್ಜಾಯಂತೇ ಚಕ್ರವರ್ತಿನಃ ।
ಗುರುಣಾ ವಿದ್ಧಿ ತಾನ್ಸರ್ವಾನ್ಸಂಯುಕ್ತಾನ್ವಿಷ್ಣುತೇಜಸಾ ॥ ೩೭ ॥

ಆಜಾನುಬಾಹವಃ ಸರ್ವೇ ನ್ಯಗ್ರೋಧಪರಿಮಂಡಲಾಃ ।
ಜಿಹ್ವಯಾ ಸಕಲಂ ವಕ್ತ್ರಂ ಪರಿಮಾರ್ಜಂತಿ ತೇ ತಥಾ ॥ ೩೮ ॥

ಷಷ್ಟ್ಯಾ ದಂತೈಶ್ಚ ಸಂಯುಕ್ತಾ ದಂಷ್ಟ್ರಾಭಿಶ್ಚ ತಥಾಽಷ್ಟಭಿಃ ।
ಊರ್ಣೇಯಂ ಚ ಶುಭಂ ತೇಷಾಂ ಭವತ್ಯಂತರ್ಭ್ರುವೋರ್ನೃಪ ॥ ೩೯ ॥

೩೫-೪೩ ರಾಜರುಗಳು ವೈಷ್ಣವ ತೇಜೋವಿಶಿಷ್ಟರಾಗಿ ಮಹಾವೀರ್ಯದಿಂದ ಪ್ರಕಾಶಿಸುತ್ತಾ ಯಶಸ್ವಿಗಳಾಗಿ ರಾಜ್ಯವನ್ನು ಪರಿಪಾಲಿಸುತ್ತಾರೆ ಅದೇ ರೀತಿ ಋಷಿಗಳೂ, ಬ್ರಾಹ್ಮಣರೂ ಸಹ ವೇದವೇದಾಂಗಪಾರಂಗತರಾಗಿ ಸಕಲ ಜಗತ್ತನ್ನೂ ತಮ್ಮ ವೈಷ್ಣವತೇಜಸ್ಸಿಂದ ಕಾಪಾಡುತ್ತಾರೆ ತ್ರೇತಾಯುಗದ ಆದಿಭಾಗದಲ್ಲಿ ಕೆಲವು ಮಂದಿ ರಾಜರು ಹುಟ್ಟುತ್ತಾರೆ ಅವರು ಭೂಮಂಡಲಕ್ಕೇ ಚಕ್ರವರ್ತಿಗಳಾಗಿರುತ್ತಾರೆ ಅವರೆಲ್ಲರೂ ಮಹತ್ತರವಾದ ವಿಷ್ಣುತೇಜಸ್ಸಿನಿಂದಲೇ ಕೂಡಿದವರಾಗಿರುತ್ತಾರೆಂದು ತಿಳಿದುಕೋ ಅವರ ದೇಹರಚನಾಸ್ವರೂಪವನ್ನು ಸ್ವಲ್ಪಮಟ್ಟಿಗೆ ವಿವರಿಸುತ್ತೇನೆ, ಕೇಳು ಅವರು ತೊಡೆಯತನಕ ತೋಳುಗಳುಳ್ಳವರಾಗಿಯೂ, ಆಲದಮರದಂತೆ ಎತ್ತರವುಳ್ಳವರಾಗಿಯೂ, ತಮ್ಮ ಉದ್ದವಾದ ನಾಲಿಗೆಯಿಂದಲೇ ಮುಖವನ್ನೆಲ್ಲಾ ನೆಕ್ಕಿಕೊಂಡು ಪರಿಶುದ್ಧಮಾಡಿಕೊಳ್ಳುವಂಥವರಾಗಿಯೂ, ಬಾಯಲ್ಲಿ ಅರವತ್ತು ಹಲ್ಲುಗಳು, ಎಂಟು ದವಡೆ ಹಲ್ಲುಗಳು ಒಟ್ಟು ಸೇರಿ ಅರವತ್ತೆಂಟು ಹಲ್ಲುಗಳುಳ್ಳವರಾಗಿಯೂ ಕಂಬಳೀದಾರದಂತೆ ಇರುವ ಹುಬ್ಬಿನ ಕೂದಲುಗಳುಳ್ಳವರಾಗಿಯೂ, ಪಾದಗಳಲ್ಲಿ ಚಕ್ರರೇಖೆಗಳುಳ್ಳವರಾಗಿಯೂ, ಕರಗಳಲ್ಲಿ ಬಾಣರೇಖೆಗಳುಳ್ಳವರಾಗಿಯೂ, ನೀಪ ವೃಕ್ಷದಂತೆ ಕೈಕಾಲುಗಳುಳ್ಳವರಾಗಿ, ಕುದುರೆಯ ಶಿಶ್ನ (ರಹಸ್ಯೇಂದ್ರಿಯ) ದಂತ ಮೇಢ್ರ (ಜನನೇಂದ್ರಿಯ) ಗಳುಳ್ಳವರಾಗಿಯೂ, ಮಹಾಸೌಂದರ್ಯಶಾಲಿಗಳಾಗಿಯೂ, ಪ್ರಭಾವಂತರಾಗಿಯೂ, ವಪುಷ್ಮಂತರಾಗಿಯೂ, ಅತೀಂದ್ರಿಯಜ್ಞಾನವುಳ್ಳವರಾಗಿಯೂ

ಚಕ್ರಾಂಕಿತೈಃ ಪಾದತಲೈಃ ಕರೈಶ್ಚಾಪಿ ಶರಾಂಕಿತೈಃ ।
ಜಾಲಪಾದಕರಾಶ್ಚೈವ ತಥಾ ತುರಗಮೋಹನಾಃ ॥ ೪೦ ॥

ರೂಪವಂತಃ ಪ್ರಭಾವಂತೋ ವಪುಷ್ಮಂತಶ್ಚ ಯಾದವ ।
ಅತೀಂದ್ರಿಯಜ್ಞಾನಬಲಾಃ ಪೃಥಿವ್ಯಾಂ ಚಕ್ರವರ್ತಿನಃ ॥ ೪೧ ॥

ತೇಷಾಂ ತು ಸಪ್ತ ರತ್ನಾನಿ ಭವಂತೀಹ ಮಹೀತಲೇ ।
ಹಸ್ತ್ಯಶ್ವರಥರತ್ನಾನಿ ಭಾರ್ಯಾರತ್ನಂ ತಥೈವ ಚ ॥ ೪೨ ॥

ತಥೈವಾಯುಧರತ್ನಂ ಚ ಮಣಿರತ್ನನಿಧಿಸ್ತಥಾ ।
ಚತಸ್ರಶ್ಚಾಪ್ರತಿಹತಾಸ್ತೇಷಾಂ ತು ಗತಯಸ್ತಥಾ ॥ ೪೩ ॥

ಪಾತಾಲೇ ಗಗನೇ ಶೈಲೇ ಸಮುದ್ರೇ ಚ ಮಹೀಪತೇ ।
ಸಮುದ್ರಃ ಸ್ತಂಭಿತಜಲಃ ಪ್ರಯಾಣೇ ಚಕ್ರವರ್ತಿನಾಂ ॥ ೪೪ ॥

ಭೂಸಮಾಶ್ಚ ತಥಾ ಶೈಲಾ ಮಾರ್ಗೇ ತೇಷಾಂ ಬವಂತಿ ತು ।
ಭೂಮಿರ್ದದಾತಿ ವಿವರಂ ಪಾತಾಲಮುಪಯಾಸ್ಯತಾಂ ॥ ೪೫ ॥

---

ಇರುತ್ತಾರೆ ಈರೀತಿ ಪ್ರಕಾಶಿಸುವ ಆ ಚಕ್ರವರ್ತಿಗಳು ಯಾವಾಗಲೂ ಏಳು ವಿಧವಾದ ರತ್ನವನ್ನು ಹೊಂದಿದ್ದರು ಅವಾವುವೆಂದರೆ —ಆನೆ, ಕುದುರೆ, ರಥ, ಭಾರ್ಯಾ, ಆಯುಧ, ಮಣಿರತ್ನ, ನಿಧಿ ಇವೇ ಆ ಏಳು ರತ್ನಗಳು ಮತ್ತು ಅವರು ಪಾತಾಳ, ಆಕಾಶ, ಬೆಟ್ಟ, ಸಮುದ್ರ ಈ ನಾಲ್ಕು ಸ್ಥಳಗಳಲ್ಲೂ ತಡೆಬಿಡುವಿಲ್ಲದೆ ಸಂಚಾರಶಕ್ತಿ ಹೊಂದಿದವರಾಗಿರುತ್ತಾರೆ

೪೪-೪೯ ಈ ರಾಜರು ಪ್ರಯಾಣಹೊರಟರೆ ಸಮುದ್ರದ ನೀರು ಅಲೆಗಳಿಲ್ಲದೆ ಸ್ತಂಭೀಭೂತವಾಗಿ ಬಿಡು (ನಿಲ್ಲು)ತ್ತದೆ ಬೆಟ್ಟಗಳು ಬಗ್ಗಿ ಭೂಮಿಗೆ ಸಮವಾಗಿ ದಾರಿಯನ್ನು ಕೊಡುತ್ತದೆ ಪಾತಾಳಕ್ಕೆ ಹೋಗಬೇಕೆಂದರೆ ಭೂಮಿಯು ಬಾಯಿಬಿಟ್ಟು ಬಿಲದ್ವಾರವನ್ನು ತೋರಿಸುತ್ತದೆ ಈ ರಾಜರ ಕುದುರೆಗಳು ಗಗನಕ್ಕೆ ಹಾರುವಂತಹ ಶಕ್ತಿಯುಳ್ಳವುಗಳಾಗಿ ರಾಜರನ್ನು ಕೂರಿಸಿಕೊಂಡು ಸ್ವರ್ಗಲೋಕಕ್ಕೆ ಹೋಗುತ್ತವೆ ಮತ್ತು ಈ ರಾಜರುಗಳೆಲ್ಲರೂ ವೇದ, ತಪಸ್ಸು, ಯಜ್ಞ ಇವುಗಳನ್ನೆಲ್ಲಾ ತಿಳಿದವರಾಗಿಯೂ ಅಸ್ತ್ರಬಲವುಳ್ಳವರಾಗಿಯೂ ಇನ್ನೂ ಇತರ ಪ್ರಾಣಿಗಳಿಂತ ಹೆಚ್ಚು

ನ ವಿಷೀದಂತಿ ಗಗನೇ ತಥಾ ತೇಷಾಂ ತುರಂಗಮಾಃ ।
ಶ್ರುತೇನ ತಪಸಾ ಯಜ್ಞೈರ್ವೀರ್ಯೇಣಾಸ್ತ್ರಬಲೇನ ಚ ॥ ೪೬ ॥

ಸರ್ವೇಭ್ಯಸ್ತೇಽತಿರಿಚ್ಯಂತೇ ಪ್ರಾಣಿಭ್ಯೋ ಮನುಜೇಶ್ವರ ।
ಆರಾಧಿತಜಗನ್ನಾಥಾಃ ಪ್ರಾಪ್ನುವಂತೀಹ ತತ್ಪದಂ ॥ ೪೭ ॥

ವರ್ಷಾಯುತಾನಿ ಜೀವಂತಿ ಷಡಷ್ಟೌ ಸಪ್ತ ವಾ ನೃಪ ।
ತೇಷಾಂ ಚ ತೇಜಸಾ ವಿಷ್ಣುಃ ಕರೋತ್ಯಾಪ್ಯಾಯನಂ ಸದಾ ॥ ೪೮ ॥

ಯೇನ ತೇ ಕಥಿತಂ ಸರ್ವಂ ಪ್ರಾಪ್ನುವಂತಿ ಗುಣೋದಯಂ ।
ಸ್ಥಾನಾಂತರಗತೇನಾಪಿ ತೇಽಪಿ ವೈಷ್ಣವತೇಜಸಾ ॥ ೪೯ ॥

ಸಂಹಾರಮುಪಗಚ್ಛಂತಿ ಕ್ಷಯಕಾಲ ಉಪಸ್ಥಿತೇ ।
ಕ್ಷಯಕಾಲೇ ಚ ಮಾಂಧಾತುಸ್ತೇಜಸ್ತದತಿದುಃಸಹಂ ॥ ೫೦ ॥

ವೈಷ್ಣವಂ ಶೂಲಿಶೂಲಾಗ್ರಮಾಶ್ರಯಾಮಾಸ ಯಾದವ ।
ಅರ್ಜುನಸ್ಯ ನರೇಂದ್ರಸ್ಯ ಯುಕ್ತಸ್ಯ ಹರಿತೇಜಸಾ ॥ ೫೧ ॥

ಹರಿರೇವಾಂತಕೃಚ್ಚಾಸೀದ್ರಾಮೋ ಭೃಗುಕುಲೋದ್ವಹಃ ।
ಭಾರ್ಗವಸ್ಯ ಚ ರಾಮಸ್ಯ ತೇಜಸ್ತದತಿದುಃಸಹಂ ॥ ೫೨ ॥

---

ಸಾಮರ್ಥ್ಯವನ್ನು ಪಡೆದವರಾಗಿರುತ್ತಾರೆ ಇವರು ಯಾವಾಗಲೂ ಜಗನ್ನಾಥನಾದ ಮಹಾವಿಷ್ಣುವಿನ ಧ್ಯಾನದಲ್ಲೇ ನಿರತರಾಗಿರುತ್ತಾರ ಕಡೆಗೆ ಇವರು ದೇಹಾವಸಾನದಲ್ಲಿ ಮಹಾವಿಷ್ಣುವಿನ ಪದ (ಸ್ಥಾನ) ವನ್ನೇ ಹೊಂದುತ್ತಾರೆ ಈ ರಾಜರು ೬೦-೭೦-೮೦ ಸಾವಿರ ವರ್ಷಗಳ ತನಕ ಬದುಕಿರುತ್ತಾರೆ ಮಹಾವಿಷ್ಣುವು ಅವರನ್ನು ತನ್ನ ತೇಜಸ್ಸಿನಿಂದಲೇ ಸರ್ವದಾ ತುಂಬಿ ಅವರಿಗೆ ಮಹತ್ತರವಾದ ಸುಖಭೋಗಗಳನ್ನು ಕೊಡುತ್ತಾನೆ

೫೦-೫೬. ಅವತಾರ ಸಮಾಪ್ತಿಯ ಕಾಲದಲ್ಲಿ ತಾವೇ ತಮ್ಮ ಸ್ವರೂಪವನ್ನು ಉಪಸಂಹರಿಸಿಕೊಳ್ಳು (ದೇಹಬಿಡು)ತ್ತಾರೆ ಮಾಂಧಾತೃರಾಜನ ಅವತಾರ ಸಮಾಪ್ತಿ ಕಾಲದಲ್ಲಿ ಅವನ ತೇಜಸ್ಸು ಅತ್ಯಂತ ದುಸ್ಸಹವಾಗಿತ್ತು ಕೊನೆಗೆ ಆ ಮಹಾರಾಜನು ವೈಷ್ಣವತೇಜಸ್ಸನ್ನು ಶೂಲಿಶೂಲದಲ್ಲ ಅಡಕಮಾಡಿಬಿಟ್ಟನು ಆ ತೇಜಸ್ಸು ಪುನಃ ಪರಶುರಾಮನನ್ನು ಸೇರಿತು ಅವನ ತೇಜಸ್ಸಂತೂ ದುಸ್ಸಹವಾದುದಾಗಿತ್ತು ಕಡೆಗೆ

ಆದತ್ತೇ ವೈಷ್ಣವಂ ಘೋರಂ ರಾಮೋ ದಶರಥಾತ್ಮಜಃ ।
ಕಾಂಚಿತ್ತನುಮಧಿಷ್ಠಾಯ ತೇನ ಘೋರೇಣ ತೇಜಸಾ ॥ ೫೩ ॥
ಕರೋತಿ ದೇವಕಾರ್ಯಾಣಿ ಕೃತಕರ್ಮಾ ತತಃ ಪ್ರಭುಃ ।
ಆದಾನಂ ತೇಜಸಸ್ತಸ್ಯ ವಿದತ್ತೇ ಸ ಸ್ವತೇಜಸಾ ॥ ೫೪ ॥
ನಾನ್ಯಃ ಶಮಯಿತಾ ಲೋಕೇ ನೃಪ ವೈಷ್ಣವತೇಜಸಃ ॥ ೫೫ ॥
ತಸ್ಯಾವತಾರೇಷು ಮಯಾ ಸ್ವರೂಪ-
ಮೇತತ್ತವೋಕ್ತಂ ಭುವನಸ್ಯ ಪತ್ಯುಃ ।
ರಹಸ್ಯಮೇತತ್ಪರಮಂ ಮುನೀನಾಂ
ಜ್ಞಾನಾಮೃತಂ ಕಲ್ಮಷನಾಶಕಾರಿ ॥ ೫೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪ್ರಾದುರ್ಭಾವಸ್ವರೂಪವರ್ಣನಂನಾಮ
ದ್ವಿಸಪ್ತತ್ಯಧಿಕ ಶತತಮೋಽಧ್ಯಾಯಃ

ಆ ತೇಜಸ್ಸು ಪರಶುರಾಮನನ್ನಾಶ್ರಯಿಸಿತು. ಆಗ ಆ ಮಹಾನುಭಾವನೂ ಸರ್ವೇಶ್ವರನೂ, ಪರಮಾತ್ಮನೂ ಆದ ಆ ಸೀತಾರಾಮಮೂರ್ತಿಯು ರಾಮನೆಂಬ ಹೆಸರಿನ ತನುವನ್ನು ಅಧಿಷ್ಠಾನಮಾಡಿಕೊಂಡು ದೇವತಾಕಾರ್ಯವನ್ನು ನಡೆಸಿದನು. ಪರಶುರಾಮನ ತೇಜಸ್ಸನ್ನು ತನ್ನ (ಆತ್ಮ) ಶಕ್ತಿಗೆ ಸೇರಿಸಿಕೊಂಡು ಭಗವಂತನು ಲೀಲಾನಾಟಕವನ್ನಾಡಿದನು. ಈ ಮಹಾನುಭಾವರಾದ ಅವತಾರ ಪುರುಷರ (ಆತ್ಮ) ಶಕ್ತಿಯನ್ನು ಶಮನ (ಶಾಂತ) ಮಾಡಲು ಯಾರಿಗೂ ಶಕ್ತಿಯಿಲ್ಲ. ಭುವನಾಧಾರಮೂರ್ತಿಯಾದ ಭಗವಂತನ ಅವತಾರ ಕಾಲಗಳ ಸ್ವರೂಪವನ್ನು ನಿನಗೆ ತಿಳಿಸಿದ್ದೇನೆ. ಈ ಜ್ಞಾನಾಮೃತರೂಪವಾದ ಪಾಪಪರಿಹಾರಕವಾದ ಈ ಪರಮ ಪವಿತ್ರ ವೃತ್ತಾಂತಗಳಲ್ಲವೂ ಬಹು ರಹಸ್ಯವಾದುದೆಂದು ತಿಳಿದಿರಯ್ಯ! ವಜ್ರಮಹಾರಾಜ! ಹೀಗೆಂದು ಮಾರ್ಕಂಡೇಯರು ಹೇಳಿದರು.

ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ಪ್ರಾದುರ್ಭಾವಸ್ವರೂಪ ವರ್ಣನಯೆಂಬ
ಹೆಸರಿನ ನೂರ ಎಪ್ಪತ್ತೆರಡನೆಯ ಅಧ್ಯಾಯವು
ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ತ್ರಿಸಪ್ತತ್ಯಧಿಕಶತತಮೋಽಧ್ಯಾಯಃ ॥

---

॥ ವಜ್ರ ಉವಾಚ ॥

ಯುವನಾಶ್ವೇನ ಯದ್ರಾಜಾ ಪುತ್ರೀಯಂ ತು ಕೃತಂ ವ್ರತಂ ।
ತಮಹಂ ಶ್ರೋತುಮಿಚ್ಛಾಮಿ ಜನಾನಾಂ ಹಿತಕಾಮ್ಯಯಾ ॥ ೧ ॥

॥ ಮಾರ್ಕಂಡೇಯ ಉವಾಚ ॥

ಪುತ್ರೀಯಂ ತೇ ಪ್ರವಕ್ಷ್ಯಾಮಿ ವ್ರತಂ ಭೂಪಾಲ ಸತ್ತಮ ।
ಅನಂತವ್ರತಮಿತ್ಯುಕ್ತಂ ಸೇವತಾಂ ಪುತ್ರಜನ್ಮದಂ ॥ ೨ ॥

ಮಾಸಿಮಾಸಿ ತು ನಕ್ಷತ್ರಂ ಮಾಸನಾಮ್ನಾ ತು ಚಿಹ್ನಿತಂ ।
ಸಂಪ್ರಾಪ್ಯ ಪೂಜಯೇದ್ದೇವಂ ಸೋಪವಾಸೋ ನರೋತ್ತಮ ॥ ೩ ॥

---

### ನೂರ ಎಪ್ಪತ್ತಮೂರನೆಯ ಅಧ್ಯಾಯವು.

೧ ವಜ್ರರಾಜನು ಹೇಳುತ್ತಾನೆ —ಮಹಾರಾಜನಾದ ಯುವನಾಶ್ವನಿಂದ ಪುತ್ರಾಪೇಕ್ಷೆಯಾದ ಅದಾವವ್ರತವು ಆಚರಿಸಲ್ಪಟ್ಟಿತೋ, ಆ ವ್ರತವಾವುದೆಂಬುದನ್ನು ತಿಳಿಯಲು ನಾನು ಅಪೇಕ್ಷಿಸುತ್ತೇನೆ ಜನರ ಹಿತಕ್ಕಾಗಿ ಇದನ್ನು ತಿಳಿಸು

೨ ಮಾರ್ಕಂಡೇಯನು ಹೇಳುತ್ತಾನೆ —ಎಲೈ ವಜ್ರರಾಜನೇ! ಮಕ್ಕಳಾಗುವ ಶಕ್ತಿಯುಳ್ಳ ವ್ರತವನ್ನು ನಿನಗೆ ತಿಳಿಸುತ್ತೇನೆ, ಕೇಳು ಇದನ್ನು ಮಾಡಿದರೆ ಖಂಡಿತವಾಗಿಯೂ ಮಕ್ಕಳಾಗುವುದು ಇದರ ಹೆಸರು ಅನಂತನ ವ್ರತ

೩-೪ ಪ್ರತಿಯೊಂದು ಮಾಸದಲ್ಲಿಯೂ ಬರುವ ಆಯಾ ಮಾಸದ ಹೆಸರಿನ

**ಏಕೈಕಮಂಗಂ ದೇವಸ್ಯ ಪ್ರತಿಮಾಸಂ ವಿಶೇಷತಃ ।**
**ಪೂಜಯೇತ್ಪ್ರಯತಃ ಶುದ್ಧಃ ಶ್ರುಣು ಚಾಂಗಕ್ರಮಂ ಮಮ ॥ ೪ ॥**

**ಮಾರ್ಗಶೀರ್ಷಾದಥಾರಭ್ಯ ವ್ರತಮೇತತ್ಸಮಾಚರೇತ್ ।**
**ದೇವಸ್ಯ ಮಾರ್ಗಶೀರ್ಷೇ ತು ವಾಮಂ ಜಾನುಂ ಸಮರ್ಚಯೇತ್ ॥ ೫ ॥**

**ಕಟಿಭಾಗಂ ತಥಾ ವಾಮಂ ಪೌಷೇ ಮಾಸಿ ಸಮರ್ಚಯೇತ್ ।**
**ಮಾಘೇ ಮಘಾಸು ವಾಮಂ ಚ ಭುಜಂ ದೇವಸ್ಯ ಪೂಜಯೇತ್ ॥ ೬ ॥**

**ಉತ್ತರಾಫಲ್ಗುನೀಋಕ್ಷೇ ಸ್ಕಂಧಂ ವಾಮಂ ಪ್ರಪೂಜಯೇತ್ ।**
**ಚತುರ್ಷ್ವೇತೇಷು ವಾಮೇಷು ಗೋಮೂತ್ರಸ್ನಾನಮಾಚರೇತ್ ॥ ೭ ॥**

---

ನಕ್ಷತ್ರವು ಒಂದ ದಿವಸ ಉಪವಾಸವಿದ್ದು ಮಹಾವಿಷ್ಣುವನ್ನು ಪೂಜಿಸಬೇಕು. ಮತ್ತು ಒಂದೊಂದು ತಿಂಗಳಲ್ಲಿಯೂ ಭಗವಂತನ ಒಂದೊಂದು ಅಂಗವನ್ನು ಪೂಜಿಸಬೇಕು ಇದಕ್ಕೆ ಹೇಳಿರುವ ಅಂಗಕ್ರಮವನ್ನು ಹೇಳುವೆನು ಕೇಳು

೫-೭ ಮಾರ್ಗಶೀರ್ಷ ಮೊದಲುಗೊಂಡು ಈ ವ್ರತವನ್ನಾರಂಭಿಸಬೇಕು ಮೊದಲನೇ ತಿಂಗಳಲ್ಲಿ ಮೃಗಶಿರಾನಕ್ಷತ್ರದ ದಿವಸ ಎಡಭಾಗದ ಮೊಣಕಾಲನ್ನೂ, ಪುಷ್ಯಮಾಸದಲ್ಲಿ ಪುಷ್ಯನಕ್ಷತ್ರದ ದಿವಸ ಎಡಗಡೆ ಸೊಂಟವನ್ನೂ, ಮಾಘಮಾಸದ ಮಘಾನಕ್ಷತ್ರದ ದಿವಸ ಎಡಗಡೆ ಭುಜವನ್ನೂ, ಫಾಲ್ಗುನಮಾಸದಲ್ಲಿ ಉತ್ತರ ಫಲ್ಗುನೀ ನಕ್ಷತ್ರದ ದಿವಸ ಎಡಭಾಗದ ಕತ್ತನ್ನೂ ಪೂಜಿಸಬೇಕು ಈ ರೀತಿ ಈ ನಾಲ್ಕು ತಿಂಗಳು ಎಡಭಾಗದ ಅಂಗಗಳನ್ನು ಗೋಮೂತ್ರದಿಂದ ಸ್ನಾನಮಾಡಿಸಬೇಕು

ಟಿಪ್ಪಣಿ —ಮಾರ್ಗಶೀರ್ಷಮಾಸವು ಇತರ ಎಲ್ಲಾ ತಿಂಗಳಿಗಿಂತಲೂ ಶ್ರೇಷ್ಠವಾದ ಮಾಸವೆಂದು ಹೇಳಿಸಿಕೊಂಡಿದೆ ಇದರ ಕಾರಣವನ್ನು ಸ್ವಲ್ಪ ತಿಳಿಸುವೆವು ಗೀತೆಯಲ್ಲಿ ಭಗವಂತನು ಮಾಸಾನಾಂ ಮಾರ್ಗಶೀರ್ಷೋಽಹಂ, ಅಂದರೆ ಮಾಸಗಳಲ್ಲಿ ನಾನು ಮಾರ್ಗಶೀರ್ಷವಾಗಿದ್ದೇನೆಯೆಂದು ಹೇಳಿರುವನು ಮತ್ತು ಅರ್ಜುನನಿಗೆ ಶ್ರೀಕೃಷ್ಣನು ಭಗವದ್ಗೀತೆಯನ್ನು ಉಪದೇಶಮಾಡಿದುದು ಮಾರ್ಗಶೀರ್ಷ ಶುದ್ಧ ಏಕಾದಶೀದಿವಸ ಅಲ್ಲದ ಈ ಮಾರ್ಗಶೀರ್ಷಮಾಸಕ್ಕೆ ಆಗ್ರಹಾಯಣಮಾಸವೆಂಬ ಮತ್ತೊಂದು ಹೆಸರಿದೆ ಅದಕ್ಕೆ ಕಾರಣವೇನೆಂದರೆ —ಹಾಯನವೆಂದರೆ ವರ್ಷ ವರ್ಷದ ಅಗ್ರ ಅಂದರೆ ಶ್ರೇಷ್ಠಭಾಗವಾದ್ದರಿಂದ ಆಗ್ರಹಾಯಣವೆಂದಾಯಿತು ಈ ಮಾರ್ಗಶೀರ್ಷಮಾಸದಲ್ಲಿ ಯಜ್ಞಯಾಗಾದಿಗಳನ್ನು ಮಾಡುವವರು ಮೊಟ್ಟಮೊದಲು

**ಪೂಜನಂ ದೇವದೇವಸ್ಯ ರಕ್ತೈಃ ಪುಷ್ಪಾದಿಭಿಸ್ತಥಾ ।**
**ಹೋಮೋ ಘೃತೇನ ಕರ್ತವ್ಯಸ್ತಿಲದಾನಂ ದ್ವಿಜಾತಿಷು ॥ ೮ ॥**

**ತಾಮ್ರಸ್ಯ ಚ ತಥಾ ದಾನಂ ಗೋಮೂತ್ರಪ್ರಾಶನಂ ತತಃ ।**
**ಹವಿಷ್ಯಾನ್ನೇನ ಚಾಹಾರಂ ತತಃ ಕಾರ್ಯಂ ವಿಜಾನತಾ ॥ ೯ ॥**

**ದೇವಸ್ಯ ದಕ್ಷಿಣಂ ಸ್ಕಂಧಂ ಚೈತ್ರೇ ಚಿತ್ರಾಸು ಪೂಜಯೇತ್ ।**
**ವೈಶಾಖೇ ಚ ವಿಶಾಖಾಸು ಬಾಹುಂ ದೇವಸ್ಯ ದಕ್ಷಿಣಂ ೧೦ ॥**

**ದಕ್ಷಿಣಂ ಕಟಿಭಾಗಂ ಚ ಜ್ಯೈಷ್ಠೇ ಜ್ಯೇಷ್ಠಾಸು ಪೂಜಯೇತ್ ।**
**ದಕ್ಷಿಣಂ ಚ ತಥಾ ಜಾನುಮಾಷಾಢೇ ವೈಶ್ವದೇವಕೇ ॥ ೧೧ ॥**

**ಚತುಷ್ವೇತೇಷು ಮಾಸೇಷು ಕ್ಷೀರಸ್ನಾನಂ ವಿಧೀಯತೇ ।**
**ಪೀತಪುಷ್ಪಾದಿಪೂಜಾ ಚ ದೇವದೇವಸ್ಯ ಚಕ್ರಿಣಃ ॥ ೧೨ ॥**

---

ಆಗ್ರಹಾಯಣ್ಯೇಷ್ಟಿ ಎಂಬ ಒಂದು ಇಷ್ಟಿಯನ್ನು ಆರಂಭಿಸುತ್ತಾರೆ ಕೆಲವು ಉದಾಹರಣೆಗಳಿಂದ ಈ ಮಾಸವು ಶ್ರೇಷ್ಠವೆಂದೂ ಆದಿಯೆಂದೂ ಇಲ್ಲಿ ವಿವರಿಸಿರುತ್ತೇವೆ

೮-೯ ಕೆಂಪುಬಣ್ಣದ ಹೂವುಗಳಿಂದ ಈ ನಾಲ್ಕು ತಿಂಗಳೂ ಭಗವಂತನನ್ನು ಪೂಜಿಸಬೇಕು ತುಪ್ಪದಿಂದ ಹೋಮಮಾಡಬೇಕು ಬ್ರಾಹ್ಮಣರಿಗೆ ಎಳ್ಳನ್ನು ದಾನಮಾಡಬೇಕು ಮತ್ತು ಆ ಎಳ್ಳನ್ನು ತಾಮ್ರದ ಚೆಂಬಿನಲ್ಲಿ ಅಥವಾ ಪಾತ್ರೆಯಲ್ಲಿ ಹಾಕಿ ದಾನಮಾಡಿದರೆ ಇನ್ನೂ ವಿಶೇಷ ಮತ್ತು ಗೋಮೂತ್ರ ತೀರ್ಥವನ್ನು ಕುಡಿಯಬೇಕು ಹವಿಸ್ಸ (ಅಕ್ಕಿಯನ್ನು ಹುರಿದುಮಾಡಿದ ಅನ್ನ) ನ್ನು ಊಟಮಾಡಬೇಕು ಬುದ್ಧಿಶಾಲಿಗಳಾದವರು ಈ ಕ್ರಮವನ್ನು ಅನುಸರಿಸಬೇಕು

೧೦-೧೨. ಪರಮಾತ್ಮನಾದ ಮಹಾವಿಷ್ಣುವಿನ ಬಲಭಾಗದ ಭುಜವನ್ನು ಚೈತ್ರಮಾಸದ ಚಿತ್ರಾನಕ್ಷತ್ರದ ದಿವಸದಲ್ಲಿಯೂ, ವೈಶಾಖಮಾಸದ ವಿಶಾಖಾನಕ್ಷತ್ರದ ದಿವಸ ಬಲಭಾಗದ ತೋಳನ್ನೂ, ಜ್ಯೇಷ್ಠಮಾಸದ ಜ್ಯೇಷ್ಠಾ ನಕ್ಷತ್ರದ ದಿವಸ ಬಲಭಾಗದ ಸೊಂಟವನ್ನೂ, ಆಷಾಢಮಾಸದ ಉತ್ತರಾಷಾಢಾ ನಕ್ಷತ್ರದ ದಿವಸ ಬಲಭಾಗದ ಮೊಣಕಾಲನ್ನೂ ಪೂಜಿಸಬೇಕು ಈ ನಾಲ್ಕು ತಿಂಗಳೂ ಭಗವಂತನ ಬಲಭಾಗದ ಈ ಅಂಗಗಳನ್ನು ಕ್ಷೀರದಿಂದ ಅಭಿಷೇಕಮಾಡಬೇಕು ಮತ್ತು ಹಳದೀ ಬಣ್ಣದ ಹೂವುಗಳಿಂದ ಪರಮಾತ್ಮನ ಪಾದಾರವಿಂದವನ್ನು ಪೂಜಿಸುತ್ತಿರಬೇಕು

ಹೋಮಂ ಚ ಶಾಲಿಭಿಃ ಕುರ್ಯಾದ್ಯವಾ ದೇಯಾ ದ್ವಿಜಾತಿಷು ।
ರಜತಂ ಚ ತಥಾ ದೇಯಂ ಯಥಾಽನ್ನೇನ ಭುಜಕ್ರಿಯಾ ॥ ೧೩ ॥

ಅನಂತನಾಮ ಜಪ್ತವ್ಯಂ ಸರ್ವಮಾಸೇಷು ಪಾರ್ಥಿವ ।
ತೇನೈವ ನಾಮ್ನಾ ದೇವಸ್ಯ ಹೋಮಕರ್ಮಾಪಿ ನಿರ್ದಿಶೇತ್ ॥ ೧೮ ॥

ವ್ರತಾವಸಾನೇ ದಾತವ್ಯಂ ಬ್ರಾಹ್ಮಣೇಭ್ಯಸ್ತು ಭೋಜನಂ ।
ದಾನಂ ಶಕ್ತ್ಯಾ ಚ ದಾತವ್ಯಂ ಬ್ರಾಹ್ಮಣೇಭ್ಯೋ ನರಾಧಿಪ ॥ ೧೯ ॥

ಸಂವತ್ಸರಾದವಾಪ್ನೋತಿ ಸರ್ವಾನೇವ ಮನೋರಥಾನ್ ।
ಪುತ್ರಾರ್ಥಿಭಿರ್ವೃತ್ತಿಕಾಮೈರ್ಭೃತ್ಯದಾರಧನೇಪ್ಸುಭಿಃ ॥ ೨೦ ॥

ಪ್ರಾರ್ಥಯದ್ಭಿಶ್ಚ ಕರ್ತವ್ಯಂ ಬಲಮಾರೋಗ್ಯಸಂಪದಂ ।
ಏತದ್ವ್ರತಂ ಮಹಾರಾಜ ಪುಣ್ಯಂ ಸ್ವಸ್ತ್ಯಯನಂ ಪರಂ ॥ ೨೧ ॥

---

೧೩ ಮೇಲ್ಕಂಡ ನಾಲ್ಕು ತಿಂಗಳೂ ಭತ್ತದಿಂದ ಹೋಮಮಾಡಬೇಕು. ಬ್ರಾಹ್ಮಣರಿಗೆ ಅಕ್ಕಿಯನ್ನು ಬೆಳ್ಳಿಯ ಪಾತ್ರೆಯಲ್ಲಿಟ್ಟು ದಾನಮಾಡಬೇಕು. ಅನ್ನವನ್ನು ಉಣ್ಣಬೇಕು

೧೪-೧೭ ಶ್ರಾವಣಮಾಸದ ಶ್ರವಣನಕ್ಷತ್ರದ ದಿವಸ ಎರಡು ಪಾದಗಳನ್ನೂ, ಭಾದ್ರಪದಮಾಸದ ಉತ್ತರಾಭಾದ್ರಪದಾ ನಕ್ಷತ್ರದ ದಿವಸ ಭಗವಂತನ ಗುಪ್ತೇಂದ್ರಿಯವನ್ನೂ, ಆಶ್ವೀಜಮಾಸದ ಆಶ್ವಿನೀನಕ್ಷತ್ರದ ದಿವಸ ಹೃದಯ (ಎದೆ) ವನ್ನೂ, ಕಾರ್ತಿಕಮಾಸದ ಕೃತ್ತಿಕಾನಕ್ಷತ್ರದ ದಿವಸ ಶಿರಸ್ಸನ್ನೂ ಪೂಜೆಮಾಡಬೇಕು ಈ ನಾಲ್ಕು ತಿಂಗಳೂ ಮೊಸರಿನಲ್ಲಿ ಸ್ನಾನಮಾಡಿಸಬೇಕು ಬಿಳೀಬಣ್ಣದ ಹೂಗಳಿಂದ ಪರಮಾತ್ಮನನ್ನು ಪೂಜಿಸಬೇಕು. ಹಾಲಿನಿಂದ ಹೋಮಮಾಡಬೇಕು. ಬ್ರಾಹ್ಮಣರಿಗೆ ತುಪ್ಪವನ್ನು ಚಿನ್ನದ ಪಾತ್ರೆಯಲ್ಲಿ ತುಂಬಿ ದಾನಮಾಡಬೇಕು ಮೊಸರನ್ನೇ ಆಹಾರಕ್ಕಾಗಿಯೂ ಉಪಯೋಗಿಸಬೇಕು

೧೮-೨೫ ಎಲ್ಲಾ ತಿಂಗಳುಗಳಲ್ಲಿಯೂ ಅನಂತನ ಅನಂತನಾಮಗಳನ್ನು ಜಪಸಂಕೀರ್ತನೆ ಮಾಡುತ್ತಿರಬೇಕು ಹೋಮಗಳನ್ನು ಅನಂತನಾಮದಿಂದಲೇ ಮಾಡಬೇಕು. ಈರೀತಿ ಒಂದು ವರ್ಷ ಈ ವ್ರತವನ್ನು ಮಾಡಿ ವರ್ಷದ ಕೊನೆಯಲ್ಲಿ

**ಅನಂತವ್ರತಮಿತ್ಯುಕ್ತಂ ಸರ್ವಕಲ್ಮಷನಾಶನಂ ।**
**ವ್ರತಮೇತತ್ಪುರಾ ಕೃತ್ವಾ ಯುವನಾಶ್ವೋ ಮಹೀಪತಿಃ ॥ ೨೨ ॥**
**ಮಾಂಧಾತಾರಂ ಸುತಂ ಲೇಭೇ ರಾಜಾನಂ ಚಕ್ರವರ್ತಿನಂ ।**
**ಕೃತವೀರ್ಯಸ್ಯ ರಾಜೇಂದ್ರ ಭಾರ್ಯಾ ಶೀಲಧರಾ ತಥಾ ॥ ೨೩ ॥**
**ವ್ರತಾನಾನೇನ ಸಾ ಲೇಭೇ ಪುತ್ರಂ ಬಾಹುಸಹಸ್ರಿಣಂ ।**
**ಕಾರ್ತವೀರ್ಯಾರ್ಜುನಂ ನಾಮ ರಾಜಾನಂ ಚಕ್ರವರ್ತಿನಂ ॥ ೨೪ ॥**
**ಯಮಾವಿವೇಶ ಭಗವಾಂಸ್ತೇಜಸಾ ಸ್ವೇನ ಮಾಧವಃ ।**
**ನಮಸ್ತೇ ಕಾರ್ತವೀರ್ಯಾಯ ಅರ್ಜುನಾಯ ಮಹಾತ್ಮನೇ ॥ ೨೫ ॥**

---

ಬ್ರಾಹ್ಮಣರಿಗೆ ಸಮಾರಾಧನೆ ಮಾಡಿಸಬೇಕು ಮತ್ತು ಬ್ರಾಹ್ಮಣರಿಗೆ ಶಕ್ತ್ಯನುಸಾರವಾಗಿ ದಾನಗಳನ್ನು ಮಾಡಬೇಕು ಈರೀತಿ ಒಂದು ವರ್ಷಮಾಡಿದರೆ ಸಕಲ ಇಷ್ಟಾರ್ಥಗಳೂ ಕೈಗೂಡುವುವು ಮಕ್ಕಳಿಲ್ಲವೆಂದವನಿಗೆ ದೇವರು ಮಕ್ಕಳನ್ನು ಕೊಡುವನು ಹೀನಸ್ಥಿತಿಯಲ್ಲಿದ್ದವನು ವೃದ್ಧಿಹೊಂದುವನು. ಆನು, ಹೆಂಡತಿ, ಹಣ ಮುಂತಾದುವುಗಳೇನುಬೇಕೋ ಅವನ್ನೆಲ್ಲಾ ದೇವರು ಕರುಣಿಸುವನು ಬಲ, ಆರೋಗ್ಯ, ಸಂಪತ್ತುಗಳು ಬೇಕೆನ್ನುವವರೆಲ್ಲಾ ಈ ವ್ರತವನ್ನು ಮಾಡಬೇಕು. ಎಲೈ ವಜ್ರಮಹಾರಾಜನೇ! ಕೇಳು ಈ ವ್ರತವು ಬಹಳ ಸುಖಪ್ರದವೂ, ಮಂಗಳಕರವೂ ಆದುದು ಇದಕ್ಕೆ ಸಕಲ ಪಾಪಪರಿಹಾರಕವಾದ ಅನಂತವ್ರತವೆಂದು ಹೆಸರು ಈ ವ್ರತವನ್ನು ಮಾಡಿಯೇ ಕೃತಯುಗದಲ್ಲಿ ಯುವನಾಶ್ವಮಹಾರಾಜನು ಮಾಂಧಾತೃ ಚಕ್ರವರ್ತಿಯನ್ನು ಮಗನನ್ನಾಗಿ ಪಡೆದನು ಯಾವ ತನ್ನ ತೇಜಸ್ಸಿನಿಂದ ಭಗವಂತನು ಕೃತವೀರ್ಯನ ಮಗನಾದ ಕಾರ್ತವೀರ್ಯಾರ್ಜುನನಾಗಿ ಸಾವಿರ ತೋಳಿನಿಂದ ಹೊಳೆದನೋ ಅಂತಹ ಕಾರ್ತವೀರ್ಯನು ಉದಯಿಸಲು ಕೃತವೀರ್ಯನ ಹೆಂಡತಿ ಶೀಲಧರೆಯೆಂಬುವಳು ಈ ವ್ರತವನ್ನು ಮಾಡಿದುದೇ ಮುಖ್ಯ ಕಾರಣವೆಂದು ತಿಳಿ. ಇಂಥ ಭಗವಂತನ ತೇಜಸ್ಸಿನಿಂದವತರಿಸಿದ ಮಹಾತ್ಮನಾದ ಕಾರ್ತವೀರ್ಯಾರ್ಜುನನಿಗೆ ನಾವೆಲ್ಲರೂ ಬೆಳಗಾಗುತ್ತಲೇ ಎದ್ದುನೊಡಲು ನಮಸ್ಕಾರ ಮಾಡೋಣ ಭೂಮಿಯಲ್ಲಿ ಹುಟ್ಟಿ ಸಪ್ತದ್ವೀಪಪರಿವೃತವಾದ ಸಮುದ್ರಗಳಿಗೂ ಭೂಮಿಗೂ ಒಡೆಯನಾದ ಮಹಾನುಭಾವನಾದ ಕಾರ್ತವೀರ್ಯಾರ್ಜುನ ದೇವರೇ! ನಿನಗೆ ಸಾವಿರ ಸಾಲ ನಮಸ್ಕಾರಮಾಡುತ್ತೇನೆ

೨೬-೩೦ ಈ ಕಥೆಯು ನಿನ್ನ ಪುಣ್ಯದಿಂದಲೇ ನನ್ನಿಂದ ಹೇಳಲ್ಪಟ್ಟಿದೆ ಬ್ರಾಹ್ಮಣನಿಗೆ ತಿಲಪ್ರಸ್ಥನಂ ದಾನಮಾಡಿದರ ಆವ ಪುಣ್ಯವುಂಟೋ ಆ ಪುಣ್ಯವು ಈ

ಸಪ್ತದ್ವೀಪಸಮುದ್ರಾಯಾಂ ಮೇದಿನ್ಯಾಮೀಶ್ವರಾಯ ಚ ।
ಏತಾವದುಕ್ತ್ವಾ ಪುಣ್ಯೇನ ತಿಲಪ್ರಸ್ಥಸ್ಯ ಯುಜ್ಯತೇ ॥ ೨೬ ॥
ರಾಜರ್ಷೆ ದತ್ತಸ್ಯ ವಿಧಿವದ್ಬ್ರಾಹ್ಮಣಾಯ ಯತಾತ್ಮನೇ ।
ಯಸ್ಯ ವೈ ಜಾತಮಾತ್ರಸ್ಯ ಪ್ರವವಾವನಿಲಃ ಶುಭಃ ॥ ೨೭ ॥
ನೀರಜಸ್ಕಮಭೂದ್ವ್ಯೋಮ ಮುದಂ ಪ್ರಾಪಾಖಿಲಂ ಜಗತ್ ।
ಸಮಾಶ್ರಯಾರ್ಥಂ ನೃಪತಿಂ ದೈತ್ಯಾ ಮಾನುಷ್ಯತಾಂ ಗತಾಃ ॥ ೨೮ ॥
ಆಶ್ರಯಾಮಾಸುರವ್ಯಗ್ರಾಶ್ಯತಶೋಽಥ ಸಹಸ್ರಶಃ ।
ಯಸ್ಮಿನ್ರಾಜನ್ಯತೀವಾರ್ತಾ ಭೂಮಿರ್ಭಾರಾವಪೀಡಿತಾ ।
ದಧಾರ ಕೃಚ್ಛ್ರೇಣಾತ್ಮಾನಂ ಜಲವೇಲವಪುರ್ನೃಪ ॥ ೨೯ ॥

ಪುತ್ರೀಯಮೇತತ್ತವರಾಜಸಿಂಹ
ಮಯಾ ವ್ರತಂ ತೇ ಕಥಿತಂ ಪುರಾಣಂ ।
ಕರ್ತವ್ಯಮೇತದ್ಭುವಿ ಪುತ್ರಕಾಮೈಃ
ಪಾಪಾಪಹಂ ಧರ್ಮವಿವರ್ಧನಂ ಚ ॥ ೩೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇಽನಂತವ್ರತಮಾಹಾತ್ಮ್ಯವರ್ಣನೋನಾಮ
ತ್ರಿಸಪ್ತತ್ಯಧಿಕ ಶತತಮೋಽಧ್ಯಾಯಃ.

---

ಚರಿತ್ರಶ್ರವಣದಿಂದಾಗುವುದು ಆವಾವ ಕಾರ್ತವೀರ್ಯಾರ್ಜುನನು ಹುಟ್ಟಿದೊಡನೆ ತಂಗಾಳಿಯು ಬೀಸಿತೋ, ಆಕಾಶವು ನಿರ್ಮಲವಾಯಿತೋ, ಸಕಲ ಜನರೂ ಸಂತೋಷಭರಿತರಾದರೋ, ಅವನನ್ನಾಶ್ರಯಿಸಿದ್ದ ದೈತ್ಯರೆಲ್ಲರೂ ಮನುಷ್ಯತ್ವವನ್ನು ಹೊಂದಿದರೋ ಅಂಥವನಿಗೆ ನಮಸ್ಕಾರ. ಯಾವ ಕಾರ್ತವೀರ್ಯಾರ್ಜುನನು ಹುಟ್ಟಿದಾಗ ಜಲಪರಿವೃತಳಾದ ಭೂಮಾತೆಯು ಭೂಭಾರದಿಂದಾಕ್ರಾಂತಳಾಗಿ ಕಷ್ಟದಿಂದ ಜನರನ್ನು ಹೊತ್ತಿದ್ದಳು ಎಲೈ ವಜ್ರರಾಜನೆ! ಪುತ್ರಪ್ರದವಾದೀ ಅನಂತ ವ್ರತವನ್ನು ನಿನಗೆ ಹೇಳಿದ್ದೇನೆ ಈ ವ್ರತಮಾಡಿದವರಿಗೆ ಸಂತಾನಪ್ರಾಪ್ತಿಯಾಗುವುದಲ್ಲದೆ ಧರ್ಮವೂ ಬರುತ್ತದೆ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದದಲ್ಲಿ ಅನಂತವ್ರತಮಹಿಮೆಯೆಂಬ ಹೆಸರಿನ
ಒಂದುನೂರ ಎಪ್ಪತ್ತಮೂರನೆಯ ಅಧ್ಯಾಯವು
ಮುಗಿದುದು

॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಚತುಃಸಪ್ತತ್ಯಧಿಕಶತತಮೋಽಧ್ಯಾಯಃ ॥

---

॥ ಮಾರ್ಕಂಡೇಯ ಉವಾಚ ॥

ಇದಮನ್ಯತ್ಪ್ರವಕ್ಷ್ಯಾಮಿ ಮಾಸನಕ್ಷತ್ರಪೂಜನಂ ।
ಯತ್ಫಲಂ ದೇವದೇವಸ್ಯ ಪುರುಷಃ ಸಮುಪಾಶ್ನುತೇ ॥ ೧ ॥

ಆರಭ್ಯ ಕಾರ್ತಿಕಾದೇತದ್ವ್ರತಂ ಕಾರ್ಯಂ ವಿಜಾನತಾ ।
ಪಾರಣತ್ರಿತಯೇನೈತದ್ವ್ರತಂ ಪರಿಸಮಾಪ್ಯತೇ ॥ ೨ ॥

ಚಾತುರ್ಮಾಸ್ಯಂ ತಥೈವಾತ್ರ ಪಾರಣಂ ನೃಪ ಕೀರ್ತಿತಂ ।
ಪಾರಣೇಪಾರಣೇ ರಾಜನ್ಪ್ರತಿಮಾಸವಿಧಿಂ ಶೃಣು ॥ ೩ ॥

### ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು.

೧ ಮಾರ್ಕಂಡೇಯನು ಹೇಳಿದನು —ಎಲೈ ವಜ್ರರಾಜನೇ! ಕೇಳು. ಇದೇ ಮಾಸನಕ್ಷತ್ರ ಪೂಜಾವಿಧಿಯನ್ನು ಇನ್ನೊಂದು ವಿಧವಾಗಿ ಹೇಳುತ್ತೇನೆ, ಕೇಳು ಈರೀತಿ ಮಾಡಿದರೆ ಸಹ ಮನುಷ್ಯನು ಪರಮಾತ್ಮನ ಪೂಜಾಫಲವನ್ನು ಹೊಂದಲು ಸಂದೇಹವಿಲ್ಲ

೨ ಕಾರ್ತಿಕಮಾಸದಿಂದಾರಂಭಿಸಿ ಈ ವ್ರತವನ್ನು ಮಾಡಬಹುದು. ಮೂರು ಪಾರಣೆಯಿಂದ ಈ ವ್ರತವು ಸಮಾಪ್ತಿಯಾಗುತ್ತದೆ

೩-೪ ಅಥವಾ ಚಾತುರ್ಮಾಸ್ಯ ನಾಲ್ಕು ತಿಂಗಳೂ (ಆಷಾಢದಿಂದ ಆಶ್ವೀಜ-ಪೂರ್ತಾ) ಪಾರಣೆಮಾಡಿ ಈ ವ್ರತವನ್ನು ಮಾಡಬಹುದು. ಪ್ರತಿ ತಿಂಗಳೂ ಪಾರಣೆ ಮಾಡುವ ವಿಧಿಯನ್ನು ಹೇಳುತ್ತೇನೆ, ಕೇಳು. ಈ ನಾಲ್ಕು ತಿಂಗಳು ಕಾಲ

ಪಂಚಗವ್ಯಜಲಸ್ನಾನಂ ಸದೈವ ಚ ಸಮಾಚರೇತ್ ।
ಪುಷ್ಪಾದಿಪೂಜಾ ಕರ್ತವ್ಯಾ ಯಥಾಲಾಭಮುಪಾಹೃತೈಃ ॥ ೪ ॥

ನೈವೇದ್ಯಂ ಕೃಸರಂ ಪೂರ್ವಮತ್ರ ಮಾಸಚತುಷ್ಟಯಂ ।
ಯಾವಕೇನ ತಥಾ ಕಾರ್ಯಂ ಮಧ್ಯಮಂ ಚ ಚತುಷ್ಟಯಂ ॥ ೫ ॥

ಚತುಷ್ಟಯೇ ತೃತೀಯೇ ಚ ನೈವೇದ್ಯಂ ಪಾಯಸಂ ಭವೇತ್ ।
ತೇನೈವಾನ್ನೇನ ರಾಜೇಂದ್ರ ಬ್ರಾಹ್ಮಣಾನ್ಭೋಜಯೇದ್ಬುಧಃ ॥ ೬ ॥

ನಕ್ತಂ ನೈವೇದ್ಯ ಮಶ್ನೀಯಾದ್ವಾಗ್ಯತಃ ಸುಸಮಾಹಿತಃ ।
ಸಂಯುಕ್ತಸ್ತಾಂ ಭವೇದ್ರಾತ್ರಿಂ ತಥಾ ಸ್ಥಂಡಿಲಶಾಯಕಃ ॥ ೭ ॥

ಏವಂ ಕುರ್ಯಾತ್ಪುನಸ್ತಾವದ್ಯಾವತ್ಕಾರ್ತಿಕಕೃತ್ತಿಕಾ ।
ತತ್ರ ಸಂಪೂಜ್ಯ ದೇವೇಶಮಾರಬ್ಧವಿಧಿನಾ ನೃಪ ॥ ೮ ॥

---

ಪ್ರತಿದಿನವೂ ಪಂಚಗವ್ಯಮಿಶ್ರಿತವಾದ ಜಲದಿಂದ ಸ್ನಾನಮಾಡಬೇಕು ಹೂ ತುಳಸಿಗಳು ಎಷ್ಟು ಲಭ್ಯವಾಗುತ್ತದೆಯೋ ಅಷ್ಟೇ ಹೂ ಪತ್ರೆಗಳಿಂದ ಭಗವಂತನಿಗೆ ಪುಷ್ಪಪೂಜೆಯನ್ನು ಮಾಡಬೇಕು

೫-೭. ಮೊದಲು ದೇವರಿಗೆ ಚಿಗಳಿಯನ್ನು ನಿವೇದನಮಾಡಬೇಕು ಈ ರೀತಿ ನಾಲ್ಕು ತಿಂಗಳೂ ಮಾಡಬೇಕು ಈ ನಾಲ್ಕು ತಿಂಗಳ ಮಧ್ಯೆ ನವಣೇ ಅಕ್ಕಿಯ ಅನ್ನವನ್ನು ಮಾಡಿ ದೇವರಿಗೆ ನೈವೇದ್ಯಮಾಡಬೇಕು ಮೂರು, ನಾಲ್ಕನೇ ತಿಂಗಳುಗಳಲ್ಲಿ ಪಾಯಸವನ್ನು ಮಾಡಿ ನೈವೇದ್ಯಮಾಡಬೇಕು ಮತ್ತು ಪಾಯಸದಿಂದ ಕಲಸಿದ ಅನ್ನದಿಂದ ಬ್ರಾಹ್ಮಣ ಸಮಾರಾಧನೆಯನ್ನು ಮಾಡಿಸಬೇಕು ಹಗಲೆಲ್ಲಾ ಉಪವಾಸದಿಂದಿದ್ದು ತಾನು ಮಾತ್ರ ರಾತ್ರಿ ಊಟವಮಾಡಬೇಕು ರಾತ್ರಿ ಇಂದ್ರಿಯಗಳನ್ನು ನಿಗ್ರಹಿಸಿ ನೆಲದಮೇಲೆ ಮಲಗಿಕೊಳ್ಳಬೇಕು

೮-೯ ಈರೀತಿಯಾಗಿ ಕಾರ್ತಿಕಮಾಸವು ಪುನಃ ಬರುವವರಿಗೂ ಮೊದಲು ಆರಂಭಮಾಡಿದ ವಿಧಿಯನ್ನನುಸರಿಸಿಕೊಂಡೇ ಆ ಅನಂತಸ್ವರೂಪೀ ಪರಮಾತ್ಮನನ್ನು ಪೂಜೆಮಾಡುತ್ತ ಬರಬೇಕು ಕಡೆಯಲ್ಲಿ ಚಿನ್ನದ ಕಂಚಿನ ತುಂಬಾ ತುಪ್ಪವನ್ನು ತುಂಬಿ ಬ್ರಾಹ್ಮಣನಿಗೆ ದಾನಮಾಡಿ ಬಳಿಕ ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಮಾಡಬೇಕು

ಭಾಜನಂ ಘೃತಸಂಪೂರ್ಣಂ ಸಹಿರಣ್ಯಂ ದ್ವಿಜಾತಯೇ ।
ದಾತವ್ಯಂ ಭೋಜನಂ ಕಾರ್ಯಂ ಬ್ರಾಹ್ಮಣಾನಾಂ ವಿಶೇಷತಃ ॥ ೯ ॥
ಸಂವತ್ಸರಮಿದಂ ಕೃತ್ವಾ ವ್ರತಂ ಪುರುಷಸತ್ತಮಃ ।
ಲಬ್ಧ್ವಾ ಸ್ಥಾನಂ ಚ ಮೋದೇತ ತಥಾ ನಾರೀ ಚ ಯಾದವ ॥ ೧೦ ॥
ಸ್ಥಿರಾಂ ಶ್ರಿಯಂ ಧರ್ಮಮತಿಂ ಬಲಂ ಚ
ಸೌಭಾಗ್ಯಮೋಜಃ ಸ್ಥಿರಸತ್ವತಾಂ ಚ ।
ಆಸ್ಥಾಂ ಸುಧೀರ್ಘಾಂ ತ್ರಿದಿವೇ ಚ ಕುರ್ಯಾ-
ದ್ವ್ರತಂ ನೃಣಾಮೇತದತೀವ ಪುಣ್ಯಂ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಮಾಸನಕ್ಷತ್ರಪೂಜನಂ
ನಾಮ ಚತುಸ್ಸಪ್ತತ್ಯಧಿಕ ಶತತಮೋಽಧ್ಯಾಯಃ

---

೧೦-೧೧　ಯಾವ ಉತ್ತಮ ಬುದ್ಧಿಯುಳ್ಳ ಮನುಷ್ಯನು ಈ ಮೇಲೆ ಹೇಳಿದ ಕ್ರಮದಂತೆ ಒಂದು ವರ್ಷ ಈ ವ್ರತವನ್ನು ಆಚರಿಸುತ್ತಾನೋ ಅಂತಹ ಮಹನೀಯನು ಒಳ್ಳೇ ಪರಮಪದವಿಯನ್ನು ಹೊಂದುವನು ಹಂಗಸಾದವಳು ಮಾಡಿದಾಗ್ಯೂ ಪರಮಪದವಿಯನ್ನು ಹೊಂದಿ ಸಂತೋಷಪಡುವಳು ಮತ್ತು ಆದಾರು ಈ ಪುಣ್ಯಕರವಾದ ವ್ರತವನ್ನು ಮಾಡುವರೋ ಅಂಥ ಮಹಾನುಭಾವರೆಲ್ಲರೂ ಶಾಶ್ವತವಾದ ಐಶ್ವರ್ಯವನ್ನೂ, ಧರ್ಮಬುದ್ಧಿಯನ್ನೂ, ಬಲವನ್ನೂ, ಸೌಭಾಗ್ಯವನ್ನೂ, ಪರಾಕ್ರಮವನ್ನೂ, ಸ್ಥೈರ್ಯಬುದ್ಧಿಯನ್ನೂ, ದೀರ್ಘಾಯುರಾರೋಗ್ಯಗಳನ್ನೂ ಸಹ ಈ ಲೋಕ ಪರಲೋಕಗಳಲ್ಲಿ ಸಂಶಯವಿಲ್ಲದೆ ಹೊಂದುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಮಾಸನಕ್ಷತ್ರಪೂಜೆಯೆಂಬ ಹೆಸರಿನ
ಒಂದು ನೂರೆಪ್ಪತ್ತನಾಲ್ಕನೆಯ ಅಧ್ಯಾಯವು
ಮುಗಿದುದು



॥ ಶ್ರೀಃ ॥

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ಮಾರ್ಕಂಡೇಯ ಉವಾಚ ॥

ಅತ್ರ ತೇ ವರ್ಣಯಿಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಸ್ವರ್ಗೇ ವೃತ್ತಾಂ ಸಮಾಶ್ರಿತ್ಯ ಮಾಸನಕ್ಷತ್ರಪೂಜನಂ ॥ ೧ ॥

ಪೂರ್ವೈಸ್ತು ಚರಿತಂ ಶಕ್ರ ನಾಹಂ ಜಾನಾಮಿ ಕಿಂಚನ ।
ಭವತಃ ಸಮಕಾಲೀನಂ ವಿದ್ಧಿ ಮಾಂ ಸುರಸತ್ತಮ ॥ ೨ ॥

ಇಯಂ ಸಿದ್ಧಾ ವಿಜಾನಾತಿ ಪ್ರಖ್ಯಾತಾ ಶಾಂಬರಾಯಣೀ ।
ಏವಮುಕ್ತಸ್ತತಃ ಶಕ್ರಃ ಪಪ್ರಚ್ಛ ಬಲಸೂದನಃ ॥ ೩ ॥

### ನೂರೆಪ್ಪತ್ತೈದನೆಯ ಅಧ್ಯಾಯವು

೧-೪ ಮಾರ್ಕಂಡೇಯನು ಹೇಳುತ್ತಾನೆ — ವಜ್ರಮಹಾರಾಜ! ಮನಸ್ಸಿಟ್ಟು ಕೇಳು. ಈ ಅನಂತವ್ರತ ವಿಚಾರದಲ್ಲಿ ಸಕಲ ಪಾಪಗಳನ್ನೂ ನಾಶಗೊಳಿಸುವ ಶಕ್ತಿಯುಳ್ಳ ಪುರಾತನವಾದ ಒಂದು ಕಥೆಯನ್ನು ಹೇಳುತ್ತೇನೆ. ಈ ವ್ರತ ಮಾಡಿದವರೆಲ್ಲರೂ ಇಂದ್ರಪಟ್ಟಕ್ಕೇರಿದರು. ಇದು ನೋಡು! ಈಕಥೆ ಭೂಲೋಕದಲ್ಲಿ ನಡೆದುದಲ್ಲ ದೇವಲೋಕಕ್ಕೆ ಸಂಬಂಧಪಟ್ಟುದು ಈ ಮಾಸನಕ್ಷತ್ರ ಪೂಜಾ ವಿಚಾರದಲ್ಲಿ ಇದು ಇಂದ್ರಪದಪ್ರದವಾದುದೆಂಬುವರಲ್ಲಿ ನಾನೊಂದು ಬಾರಿ ಸ್ವರ್ಗದಲ್ಲಿದ್ದಾಗ ನನಗೂ ಇಂದ್ರನಿಗೂ ಮಾತುಕಥೆಗಳು ನಡೆದುವು ಆಗ ನಾನು ಈ ವ್ರತ ಸಂಬಂಧವಾದ ಮಾತಿನ ಸಂದರ್ಭದಲ್ಲಿ ಇಂದ್ರನನ್ನು ಕುರಿತು ಹೇಳಿದ ಮಾತುಗಳು ಜ್ಞಾಪಕದಲ್ಲಿವೆ ಅದನ್ನು ಈಗ ನಿನಗೆ ತಿಳಿಸುವೆನು ನಾನು ಆಗ ಇಂದ್ರನನ್ನು ಕುರಿತು, ಅಯ್ಯಾ! ದೇವೇಂದ್ರ, ನನಗೆ ಇದರ ವಿಷಯವು ಚೆನ್ನಾಗಿ ತಿಳಿದಿಲ್ಲ

ಜಗಾದ ಸಾ ಚ ಶಕ್ರಸ್ಯ ಪೂರ್ವೇಂದ್ರಚರಿತಂ ಮಹತ್ ।
ಶಕ್ರಾಣಾಂ ಸಾ ವ್ಯತೀತಾನಾಂ ಶತಶೋಽಥ ಸಹಸ್ರಶಃ ॥ ೪ ॥
ಜಗಾದ ತತ್ರ ಚರಿತಂ ಕಲ್ಪೇಷ್ವನ್ಯೇಷ್ವಪಿ ಪ್ರಭೋ ।
॥ ಶಾಂಬರಾಯಣ್ಯುವಾಚ ॥
ಸರ್ವೇಷಾಮಪಿ ಶಕ್ರಾಣಾಂ ಯೇ ತು ದಾಯಾದಬಾಂಧವಾಃ ॥ ೫ ॥
ಸರ್ವೇ ವಿನಾಶಿತಾಸ್ತೇನ ವಿಷ್ಣುನಾ ಪ್ರಭವಿಷ್ಣುನಾ ।
ಸರ್ವೇ ಶಕ್ರಾಸ್ತಥಾ ಯುಕ್ತಾಸ್ತೇನ ವೈಷ್ಣವತೇಜಸಾ ॥ ೬ ॥
ಭೂತೇಭ್ಯಸ್ತ್ವತಿರಿಚ್ಯಂತೇ ತೇನ ತೇ ಗುಣಸಂಪದಃ ।
ದಾನೇನ ಯಜ್ಞೈಃ ಶೌರ್ಯೇಣ ತಪಸಾ ಚ ಬಲೇನ ಚ ॥ ೭ ॥
ಸುಖೇನ ಧರ್ಮನಿಷ್ಠತಯಾ ದೇವದೈತ್ಯಮಹೋರಗಾನ್ ।
ಋಷಯಶ್ಚ ಮಹಾಭಾಗಾಸ್ತೇಽಪಿ ಪಾರ್ಥಿವಸತ್ತಮ ॥ ೮ ॥

ಪೂರ್ವಿಕರು ಇದನ್ನು ಮಾಡಿದ ಅನುಭವವನ್ನು ಮಾತ್ರ ಹೇಳಿರುದನ್ನು ಕೇಳಿದ್ದೇನೆ, ಅಪ್ಪ! ನಾನೂ ನೀನೂ ಸಮಕಾಲೀನರಾಗಿದ್ದೇವೆ ಆದ್ದರಿಂದ ಆ ಹಳೆಯಕಾಲದ ಬಹು ಹಿಂದಿನ ಸಂಗತಿಯನ್ನು ತಿಳಿದವರ ಬಾಯಿಂದಲೇ ಈ ಮಾತನ್ನು ಕೇಳಬೇಕು ಆಗ ಅದರ ಪ್ರಭಾವ ನಮಗೆ ಗೊತ್ತಾಗುವುದು ಇಗೋ! ನೋಡು ಇಲ್ಲೊಬ್ಬಳು ಸಿದ್ಧನಾರಿಯು ಕುಳಿತಿರುವಳು ಅವಳು ಬಹಳ ಹಿಂದಿನ ಸಂಗತಿಯನ್ನೆಲ್ಲಾ ಬಲ್ಲಳು ಅವಳನ್ನು ಕೇಳಿದರೆ ಇವನ್ನೆಲ್ಲಾ ಚಾಚೂ ತಪ್ಪದೆ ಹೇಳುತ್ತಾಳೆಯೆನ್ನಲು, ಅದೇ ನೇರೆ ಇಂದ್ರನು ಆ ಶಾಂಬರಾಯಣಿಯೆಂಬ ಹೆಸರಿನ ಸಿದ್ಧನಾರಿಯನ್ನು ಕುರಿತು ಪ್ರಶ್ನೆ ಮಾಡಲು, ಅವಳು ಎಷ್ಟೆಷ್ಟೋ ಹಿಂದೆ ಕಳದುಹೋದ ನೂರಾರು ಸಾವಿರಾರು ಜನ ಇಂದ್ರರ ಕಥೆಗಳನ್ನೂ, ಬೇರೆ ಬೇರೆ ಅನೇಕ ಕಲ್ಪಗಳಲ್ಲಿದ್ದ ಇಂದ್ರರ ಉಪಾಖ್ಯಾನಗಳನ್ನೂ ಹೇಳಿದಳು ಅದನ್ನೇ ಈಗ ನಾನು ನಿನಗೆ ಹೇಳುತ್ತೇನೆ, ಕೇಳೈ! ಮಹಾರಾಜ!

೫-೮ ಶಾಂಬರಾಯಣಿಯೆಂಬ ಸಿದ್ಧಸುಂದರಿಯು ಇಂದ್ರನನ್ನು ಕುರಿತಿಂತೆಂದಳು —ಕೇಳಯ್ಯಾ! ದೇವೇಂದ್ರಮಹಾರಾಜ! ಎಲ್ಲ ಇಂದ್ರರ ಕಥೆಯನ್ನೂ ನಿನಗೆ ತಿಳಿಸುತ್ತೇನೆ ಸಕಲ ದೈತ್ಯರೂ ಸಕಲ ಇಂದ್ರರಿಗೂ ದಾಯಾದಿಗಳಾಗಿಯೇ ಹುಟ್ಟಿ ಪರಸ್ಪರ ಜಗಳ ಕಾಯುತ್ತಲೇ ಇದ್ದರು ಅಂತಹ ಸನ್ನಿವೇಶವುಂಟಾದಾಗಲೆಲ್ಲಾ ಮಹಾವಿಷ್ಣುವು ಒಂದೊಂದು ವಿಧವಾದ ಅವತಾರಗಳನ್ನು ತಳೆದು ಸಕಲ ದೈತ್ಯದಾನವರನ್ನೂ ಸಂಹರಿಸುತ್ತಿರುವನು ಈ ಇಂದ್ರನ ದಾಯಾದಿಗಳಾದ ರಾಕ್ಷಸರೇನು ಸಾಮಾನ್ಯರೆಂದು ತಿಳಿದುಕೊಳ್ಳಬೇಡ ಇವರೆಲ್ಲರೂ ಮಹಾಗುಣಶಾಲಿಗಳು

ವರಂ ಸಂಪಾದನಂ ತೈಶ್ಚ ಕೃತಂ ಸರ್ವಂ ಸ್ವಯಂಭುವಾ ।
ಪರಾಜಯಂ ಯತಃ ಪ್ರಾಪ್ತಾ ದಾಯಾದೇಭ್ಯಃ ಪುನಃಪುನಃ ॥ ೯ ॥

ಸರ್ವೇಶ್ವರಾ ವೀರ್ಯಬಲೋಪಪನ್ನಾ
ಧರ್ಮೇ ನಿವಿಷ್ಟಾ ಜಗತಃ ಪ್ರಧಾನಾಃ ।
ತ್ಯಕ್ತಾಧಿಕಾರಾಶ್ಚ ತತಃ ಕ್ರಮೇಣ
ಸರ್ವೇ ಗತಾ ವಿಷ್ಣುಸಹಾಯತಾಂ ಚ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ಶಕ್ರಚರಿತಾಖ್ಯಾನಂ
ನಾಮ ಪಂಚಸಪ್ತತ್ಯಧಿಕ ಶತತಮೋಽಧ್ಯಾಯಃ.

ಸಕಲ ಪ್ರಾಣಿಗಳಿಗಿಂತ ಮಹಾಬಲಶಾಲಿಗಳು ಯಾರನ್ನೂ ಲಕ್ಷಿಸುವವರಲ್ಲ ದಾನ, ಯಜ್ಞ, ಶೌರ್ಯ, ತಪೋಬಲಗಳಿಂದಲೂ, ಶ್ರುತಿಸಾರ, ಧರ್ಮವಿಚಾರಗಳಲ್ಲೂ ಅವರು ಬಹು ಮುಂದಕ್ಕೆ ಹೆಜ್ಜೆಯಿಟ್ಟು ತಮ್ಮ ತಪೋಬಲದಿಂದ ಬ್ರಹ್ಮನನ್ನು ಮೆಚ್ಚಿಸಿ, ಅವನ ಕಡೆಯಿಂದ ದೇವರ್ಷಿಗಣಕ್ಕಿಂತ ಅಧಿಕರಾಗಿರುವಂತೆ ವರವನ್ನು ಸಂಪಾದಿಸುತ್ತಿದ್ದರಲ್ಲದೆ ತಮಗೆ ಆ ವರಬಲದಿಂದ ಅಧಿಕಾರ ಬಲದೊಡನೆ ಪ್ರಜಾಪೀಡೆಯನ್ನು ಮಾಡುತ್ತಾ ಬ್ರಹ್ಮದತ್ತ ವರದಿಂದ ಕೊಬ್ಬಿ ಲೋಕಕಂಟಕರಾಗುತ್ತಾ ಬರುತ್ತಿದ್ದರು. ಆಗ ದೇವತೆಗಳು ರಾಕ್ಷಸ ದಾಯಾದಿಗಳಿಂದ ಪಡುತ್ತಿದ್ದ ಕಷ್ಟವನ್ನು ನೋಡಿ ಮಹಾವಿಷ್ಣುವು ಮನಕರಗಿ ದೇವತೆಗಳ ಸಹಾಯಾರ್ಥವಾಗಿ ನಾನಾ ಅವತಾರಗಳಿಂ ತಳೆದು ದುಷ್ಟ ರಾಕ್ಷಸರನ್ನು ಕೊಂದು ಭೂಭಾರವಂ ಪರಿಹರಿಸುತ್ತಿದ್ದನಲ್ಲದೆ ಅಂದಿನಿಂದಿಂದಿಗೂ ಸಾತ್ವಿಕರನ್ನು ಕಾಪಾಡುತ್ತಾ ಬಂದಿರುವನು

೧೦ ಸರ್ವೇಶ್ವರರೂ, ಮಹಾವೀರ್ಯಶಾಲಿಗಳೂ, ಧರ್ಮಾತ್ಮರೂ ಜಗದೊಡೆಯರೂ ಆದ ದೇವತೆಗಳೂ, ಇಂದ್ರರೂ ಸಹ ದಾಯಾದಿಗಳಾದ ರಾಕ್ಷಸರಿಂದ ಅಪಜಯ ಹೊಂದಿ ಅಧಿಕಾರವನ್ನು ಕಳೆದುಕೊಂಡು ದಿಕ್ಕುತೋರದ ಮಹಾವಿಷ್ಣುವಿನ ಸಹಾಯವನ್ನು ಹೊಂದುತ್ತ ಬಂದಿರುವರು ಕೇಳಯ್ಯಾ! ವಜ್ರರಾಜ! ಹೀಗೆಂದು ಮಾರ್ಕಂಡೇಯರು ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಇಂದ್ರರ ಕಥೆಗಳೆಂಬ ಹೆಸರಿನ
ಒಂದುನೂರ ಎಪ್ಪತ್ತೈದನೆಯ ಅಧ್ಯಾಯವು
ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಷಟ್ಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ಇಂದ್ರ ಉವಾಚ ॥

ಯಸ್ಮಿನ್ಕಾಲೇ ವ್ಯತೀತಾ ಯೇ ಷಡಿಂದ್ರಾ ಭೂರಿತೇಜಸಃ ।
ತೇಷಾಂ ಚರಿತಮಿಚ್ಛಾಮಿ ಶ್ರೋತುಂ ವಿಸ್ತರಶಃ ಶುಭೇ ॥ ೧ ॥

ಪ್ರತಿಶಕ್ರಂ ಮನುಂ ಭದ್ರೇ ಮನುಪುತ್ರಾಂಸ್ತಥೈವ ಚ ।
ದೇವಾನ್ಸಪ್ತ ಋಷೀಂಶ್ಚೈವ ತಥಾ ದಾಯಾದಬಾಂಧವಾನ್ ॥ ೨ ॥

ಶಕ್ರಸ್ಯ ತೇಷಾಂ ಚ ವಧಂ ತಥಾ ದೇವಾಜ್ಜನಾರ್ದನಾತ್ ।
ತ್ವತ್ತೋಽಹಂ ಶ್ರೋತುಮಿಚ್ಛಾಮಿ ಸರ್ವಂ ತ್ವಂ ವೇತ್ಸಿ ಸುಂದರಿ ॥ ೩ ॥

### ಒಂದುನೂರ ಎಪ್ಪತ್ತಾರನೆಯ ಅಧ್ಯಾಯವು

೧-೩ ಇಂದ್ರನು ಶಾಂಬರಾಯಣಿಯೆಂಬ ಹೆಸರಿನ ಸಿದ್ಧಕನ್ಯೆಯನ್ನು ಕೇಳುತ್ತಾನೆ —ಮಹಾತೇಜಸ್ವಿಗಳಾದ ಆರು ಜನ ಇಂದ್ರರುಗಳು ಇದ್ದರೆಂದು ಕೇಳಿದ್ದೇನೆ ಹಿಂದೆ ಕಳೆದುಹೋಗಿರುವ ಯಾವ ಕಾಲದಲ್ಲಿ ಅವರಿದ್ದರೋ ಅಂತಹ ನನ್ನ ಪೂರ್ವಜರ ಚರಿತ್ರೆಯನ್ನು ವಿಸ್ತಾರವಾಗಿ ಕೇಳಬೇಕೆಂದು ಆಸೆಯಾಗಿದೆ ಎಲೌ ಮಂಗಳಾಂಗಿಯೇ! ಪ್ರತಿಯೊಬ್ಬ ಇಂದ್ರನ ಮತ್ತು ಪ್ರತಿಯೊಬ್ಬ ಮನುವಿನ ಮತ್ತು ಆ ಮನುಪುತ್ರರುಗಳ, ಹಾಗೂ ದೇವತೆಗಳ, ಸಪ್ತಋಷಿಗಳ ಚರಿತ್ರೆಗಳನ್ನೂ, ಹಾಗೂ ಅವರುಗಳ ಜ್ಞಾತಿ (ದಾಯಾದಿ) ಗಳಾದ ಅಸುರರ ಚರಿತ್ರೆಗಳನ್ನೂ, ಆ ಅಸುರರನ್ನು ಇಂದ್ರಾದಿದೇವತೆಗಳ ಪ್ರಾರ್ಥನೆಯಿಂದ ಆಗಾಗ್ಗೆ ಅವತರಿಸಿ, ಸಂಹರಿಸಿದ ಪರಮಾತ್ಮನ (ವಿಷ್ಣುವಿನ) ಚರಿತ್ರೆಗಳನ್ನೂ ನಾನು ನಿನ್ನ ಮುಖದಿಂದ ಕೇಳಬೇಕೆಂದು ಅಪೇಕ್ಷಿಸುತ್ತೇನೆ ಈ ವೃತ್ತಾಂತಗಳನ್ನೆಲ್ಲಾ ವಿವರವಾಗಿ ವಿವರಿಸು! ಸುಂದರಿಯೆ!

॥ ಶಾಂಬರಾಯಣ್ಯುವಾಚ ॥

ಬ್ರಹ್ಮಣೋ ಮಾನಸಃ ಪುತ್ರಃ ಪ್ರಥಮಸ್ತು ಮನುಃ ಸ್ಮೃತಃ ।
ದಶ ಪುತ್ರಾಶ್ಚ ತಸ್ಯೈನೇ ಖ್ಯಾತಾಸ್ತ್ರಿಭುವನೇಶ್ವರ ॥ ೪ ॥

ಆಗ್ನೀಧ್ರಶ್ಚಾತಿಬಾಹುಶ್ಚ ಮೇಧಾ ಮೇಧಾತಿಥಿರ್ವಸುಃ ।
ಜ್ಯೋತಿಷ್ಮಾನ್ದ್ಯುತಿಮಾನ್ಹವ್ಯಃ ಸವನಃ ಸತ್ರ ಏವ ಚ ॥ ೫ ॥

ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ವಸಿಷ್ಠಶ್ಚ ಮಹಾತೇಜಾ ಋಷಯಃ ಸಪ್ತ ಕೀರ್ತಿತಾಃ ॥ ೬ ॥

ಜಯಾಖ್ಯಾಶ್ಚಾಜಿತಾಖ್ಯಾಶ್ಚ ಶುಕ್ರಯಾಮಾಸ್ತಥೈವ ಚ ।
ಗಣಾ ದ್ವಾದಶಕಾ ಏತೇ ಚತ್ವಾರಃ ಸೋಮಪೀಥಿನಃ ॥ ೭ ॥

ವಿಶ್ವಭುಜ್ನಾಮ ದೇವಾನಾಂ ತೇಷಾಮಿಂದ್ರೋ ಬಭೂವ ಹ ।
ಅಸಂಸ್ತಸ್ಯಾಸುರಾ ಘೋರಾಸ್ತದಾ ದಾಯಾದಬಾಂಧವಾಃ ॥ ೮ ॥

೪ ಶಾಂಬರಾಯಣಿಯು ಹೇಳುತ್ತಾಳೆ —ಬ್ರಹ್ಮನ ಮೊದಲನೆಯ ಮಾನಸ ಪುತ್ರನಿಗೆ ಮನುವೆಂದು ಹೆಸರು ಆ ಮನುವಿಗೆ ಮೂರು ಲೋಕದಲ್ಲೂ ಸುಪ್ರಸಿದ್ಧ ರಾದ ಈ ಕೆಳಗೆ ವಿವರಿಸಿದ ಹತ್ತು ಮಂದಿ ಮಕ್ಕಳಿದ್ದರು

೫-೬. ಅವರ ಹೆಸರುಗಳೇನೆಂದರೆ —ಆಗ್ನೀಧ್ರ, ಅತ್ರಿಬಾಹು, ಮೇಧಾ ಮೇಧಾತಿಥಿ, ವಸು, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ, ಸವನ, ಸತ್ರ ಇವರೇ ಹತ್ತು ಮಂದಿ ಮನುಪುತ್ರರುಗಳು ಇನ್ನೂ ಏಳು ಋಷಿಗಳ ಹೆಸರನ್ನು ಹೇಳುತ್ತೇನೆ, ಕೇಳು ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಇವರಿಗೆ ಸಪ್ತಋಷಿಗಳೆಂದು ಹೆಸರು

೭ ಜಯ, ಅಜಿತ, ಶುಕ್ರಯಾಮ, ದ್ವಾದಶಗಣ, ಈ ನಾಲ್ಕುಮಂದಿಯೂ ಸೋಮಯಾಗಮಾಡಿ ಆ ಸಂದರ್ಭದಲ್ಲಿ ಸೋಮಪಾನಮಾಡಿದವರು.

೮ ಈ ಮೇಲೆ ಹೇಳಿದವರಿಗೆಲ್ಲಾ ಅಧಿಪತಿಯಾಗಿ ವಿಶ್ವಭುಜನೆಂಬ ದೇವೇಂದ್ರನು ಬಹಳ ಪ್ರಸಿದ್ಧಿಹೊಂದಿದ್ದನು ಇವನಿಗೆ ಅನೇಕ ಮಂದಿ ರಾಕ್ಷಸರು ದಾಯಾದಿಗಳಾಗಿದ್ದರು

ಬಭೂವ ನೃಪತಿರ್ಯೇಷಾಂ ಬಾಷ್ಕಲೋ ನಾಮ ನಾಮತಃ ।
ಯಸ್ಯ ಹಸ್ತಾದುಭೌ ಲೋಕೇ ವಾಮನೇನ ಹೃತೌ ಪುರಾ ॥ ೯ ॥

ಕ್ರಮಿದ್ವಯೇನ ತು ಕೃತಂ ಪಾತಾಲಂ ಚ ಸುರೇಶ್ವರ ।
ಯಸ್ಯ ಪುತ್ರವತಸ್ತ್ವಾಸೀತ್ಕೇಶೀ ನಾಮ ಬಲೋತ್ಕಟಃ ॥ ೧೦ ॥

ಜಹಾರ ಭೂಯಸ್ತ್ರೈಲೋಕ್ಯಂ ಶಕ್ರಸ್ಯಾಕ್ರಮ್ಯ ದುರ್ಮತಿಃ ।
ತಮಾಹೂಯ ರಣೇ ವಿಷ್ಣುಸ್ತಾರ್ಕ್ಷ್ಯಪ್ರವರವಾಹನಃ ॥ ೧೧ ॥

ದ್ವಿಧಾ ಚಕಾರ ಚಕ್ರೇಣ ತ್ರೈಲೋಕ್ಯಹಿತಕಾಮ್ಯಯಾ ॥ ೧೨ ॥

ಏವಂ ಹತಸ್ತೇನ ಪುರಾರಿಮುಖ್ಯೋ
ಮಹಾತ್ಮನಾ ಕಾಲಸಮಪ್ರಭಾವಃ ।

೯-೧೨  ಈ ರಾಕ್ಷಸರಿಗೆಲ್ಲರಿಗೂ ಬಾಷ್ಕಲ (ಬಲಿಚಕ್ರವರ್ತಿ) ನೆಂಬ ಹೆಸರಿನ ದೊರೆಯಿದ್ದನು. ಈ ಬಲಿಯ ಕೈಯಲ್ಲಿದ್ದ ಎರಡು ಲೋಕವನ್ನೂ ವಾಮನಾವತಾರ ಮಾಡಿದ ಮಹಾವಿಷ್ಣುವು ಮೂರು ಹೆಜ್ಜೆ ದಾನಬೇಡಿ ಎರಡು ಹಜ್ಜೆಯಿಂದ ಅಳೆದು ಅವನನ್ನು ಪಾತಾಳಕ್ಕೆ ತುಳಿದ ಕಥೆ ಪ್ರಸಿದ್ಧವಾಗಿಯೇ ಇದೆ. ಆ ಬಲಿಚಕ್ರವರ್ತಿಗೆ ಕೇಶಿಯೆಂಬ ಮಗನಿದ್ದನು. ಅವನು ಮಹಾಪರಾಕ್ರಮಶಾಲಿಯಾದುದರಿಂದ ಇಂದ್ರ ನೊಡನೆ ಕಾಳಗವಾಡಿ ಮೂರು ಲೋಕವನ್ನೂ ಗೆದ್ದುಕೊಂಡುಬಿಟ್ಟನು. ಅಂತಹ ಪರಾಕ್ರಮಿಯಾದ ಕೇಶಿನಾಮಕ ದೈತ್ಯನನ್ನು ಮಹಾವಿಷ್ಣುವು ಗರುಡಾರೂಢನಾಗಿ ಬಂದು ತನ್ನ ಚಕ್ರದಿಂದ ಮೂರು ಲೋಕಕ್ಕೂ ಉಪಕಾರಮಾಡುವ ಮಹೋದ್ದೇಶ ದಿಂದ ಎರಡು ತುಂಡುಮಾಡಿ ಕೊಂದುಬಿಟ್ಟನು. ಈರೀತಿ ರಾಕ್ಷಸರಲ್ಲಿ ಪ್ರಬಲನಾಗಿದ್ದ ಕೇಶಿಯನ್ನು ಮಹಾವಿಷ್ಣುವು ಲೋಕಹಿತಾರ್ಥವಾಗಿಯೂ ಇಂದ್ರನ ಮೇಲಿನ ಪ್ರೇಮ ದಿಂದಲೂ, ಅಪ್ರತಿಮ ತೇಜೋವಿಶಿಷ್ಟನಾದವನಾಗಿ ಹೊಡೆದು ಕೆಡವಿದನು

ಶಕ್ರಪ್ರಿಯಾರ್ಥಂ ಜಗತಾಂ ಹಿತಾರ್ಥಂ
ದೇವೇಶ್ವರೇಣಾಪ್ರತಿಮೇನ ತೇನ ॥ ೧೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಾಂಬರಾಯಣೀವಾಕ್ಯೇ ಪ್ರಥಮಮನ್ವಂತರ
ವರ್ಣನಂನಾಮ ಷಟ್ಸಪ್ತತ್ಯಧಿಕ ಶತತಮೋಽಧ್ಯಾಯಃ.

---

ಕೇಳಯ್ಯಾ ! ಇಂದ್ರ ! ಹೀಗೆಂದು ಶಾಂಬರಾಯಣಿಯು ಇಂಪ್ರನೊಡನೆ ಈ ವೃತ್ತಾಂತ
ವನ್ನು ಹೇಳಿದರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪವಾದ ಶಾಂಬರಾಯಣಿಯ
ಮಾತೆಂಬ ಹೆಸರಿನ ಒಂದುನೂರ ಎಪ್ಪತ್ತಾರನೆಯ
ಅಧ್ಯಾಯವು ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ ॥

---

॥ ಶಾಂಬರಾಯಣ್ಯುವಾಚ ॥

ಮನುಃ ಸ್ವಾರೋಚಿಷೋ ನಾಮ ಬಭೂವ ತದನಂತರಂ ।
ಯಸ್ಯಾಸನ್ಸುಮಹಾಭಾಗಾಃ ಪುತ್ರಾ ಭೂಮಂಡಲೇಶ್ವರಾಃ ॥ ೧ ॥

ಚೈತ್ರಃ ಕವಿರುತಶ್ಚೈವ ಕೃತಾಂತೋ ವಿದ್ಯುತೋ ರವಿಃ
ಬೃಹದ್ರ್ವತೋ ನಭಶ್ಚೈವ ಮಹಾಬಲಪರಾಕ್ರಮಃ ॥ ೨ ॥

ಊರ್ಜಸ್ತಸ್ಯ ತಥಾ ಪ್ರಾಣಃ ಋಷಭೋ ನಿಶ್ಚಲಸ್ತಥಾ ।
ದಂತೋಭಿಃ ಶಾಕ್ವಲೀವಾಂಶ್ಚ ಋಷಯಃ ಸಪ್ತ ಕೀರ್ತಿತಾಃ ॥ ೩ ॥

ಭೂಷಿತಾ ದ್ವಾದಶ ಪ್ರೋಕ್ತಾಸ್ತಥಾ ಪಾರಾವತಾಶ್ಚ ಯೇ ।
ತೇಷಾಮಿಂದ್ರೋ ವಿಪಶ್ಚಿಚ್ಚ ಮಹಾತ್ಮಾ ಲೋಕವಿಶ್ರುತಃ ॥ ೪ ॥

### ಒಂದುನೂರ ಎಪ್ಪತ್ತೇಳನೆಯ ಅಧ್ಯಾಯವು.

೧-೪ ಆ ಶಂಬರಾಯಣಿಯೆಂಬ ಸಿದ್ಧಕನ್ಯೆಯು ಪುನಃ ಹೇಳುತ್ತಾಳೆ — ಈ ಮೊದಲನೇ ಮನುವಿನ ಅಂತರದಲ್ಲಿ ಸ್ವಾರೋಚಿಷನೆಂಬ ಮನುವಿದ್ದನು ಅವನಿಗೂ ಹತ್ತು ಮಕ್ಕಳಿದ್ದರು ಅವರು ಭೂಮಂಡಲಕ್ಕೆಲ್ಲಾ ಅಧಿಪತಿಗಳಾಗಿದ್ದು ಭೋಗಭಾಗ್ಯಗಳನ್ನನುಭವಿಸಿದರು ಅವರುಗಳ ಹೆಸರುಗಳೇನೆಂದರೆ —ಚೈತ್ರ, ಕವಿರುತ, ಕೃತಾಂತ, ವಿದ್ಯುತ, ರವಿ, ಬೃಹದ್ವ್ರತ, ನಭ, ಇತ್ಯಾದಿಗಳು ಆಗಿನ ಸಪ್ತ ಋಷಿಗಳಾರೆಂದರೆ ಊರ್ಜ, ಪ್ರಾಣ, ಋಷಭ, ನಿಶ್ಚಲ, ದಂತೋಭಿ, ಶಾಕ್ವರೇವಂತ, ಇವರೇ ಆ ಋಷಿಗಳು. ಇವರುಗಳೆಲ್ಲರಿಗೂ ಲೋಕವಿಶ್ರುತನಾದ ವಿಪಶ್ಚಿನ್ನಾಮಕ ದೇವೇಂದ್ರನು ತ್ರಿದಶೇಶ್ವರನಾಗಿದ್ದನು

ಆಸಂಸ್ತಸ್ಯಾಸುರಾ ಘೋರಾಸ್ತದಾ ದಾಯಾದಬಾಂಧವಾಃ ।
ತೇಷಾಮಾಸೀತ್ತದಾ ರಾಜಾ ಪುರುಕುತ್ಸೋ ಬಲಾಧಿಕಃ ॥ ೫ ॥

ಶಕ್ರಸ್ಯ ವಿಪ್ರಿಯಾಸಕ್ತೋ ಮೃಗಯಾಯೈ ವನಂಗತಃ ।
ಮಥಮತ್ಕುಂಜರಾನ್ಮತ್ತಾನ್ಬಹುವೀರ್ಯಸಮಾಶ್ರಯಃ ।
ಹಸ್ತೀ ಭೂಪಾಲಸಚಿವಃ ಸ ಜಘಾನ ಹರೀನ್ವನೇ ॥ ೬ ॥

ಜಘಾನ ಸಃ ಶೈಲ ಇವಾತಿವರ್ಮಾ
ನೀಲಾಂಜನಾಭೋ ರಚಿತಾಗ್ರಹಸ್ತಃ ।
ಜಘಾನ ತಂ ದೈತ್ಯವರಂ ಪ್ರಸಹ್ಯ
ದೇವಾಸುರಾಣಾಂ ಸಮರೇಷ್ವವಧ್ಯಂ ॥ ೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರಂಪ್ರತಿಶಾಂಬರಾಯಣ್ಯುಪಾಖ್ಯಾನೇ
ದ್ವಿತೀಯಮನ್ವಂತರಕಥಾವರ್ಣನಂನಾಮ
ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ.

---

೫-೭ ಆ ಇಂದ್ರನಿಗೂ ಅನೇಕ ಮಂದಿ ದಾಯಾದಿಗಳಾದ ರಾಕ್ಷಸರಿದ್ದರು ಇವರುಗಳಿಗೆಲ್ಲಾ ಮಹಾಪರಾಕ್ರಮಶಾಲಿಯಾಗಿದ್ದ ಪುರುಕುತ್ಸನೆಂಬವನು ರಾಜನಾಗಿದ್ದನು. ಇವನು ಇಂದ್ರನ ಮೇಲೆ ಯಾವಾಗಲೂ ವಿರೋಧವಾಗಿಯೇ ಇದ್ದನು. ಈ ಪುರುಕುತ್ಸನು ಕಾಡಿಗೆ ಬೇಟೆಗೋಸ್ಕರ ಹೋದಾಗಲೆಲ್ಲಾ ಮಹಾಬಲಿಷ್ಠವಾದ ಮದಿಸಿದ ಆನೆಗಳನ್ನೂ ಸಿಂಹಗಳನ್ನೂ ಸಂಹರಿಸುತ್ತಾ ಬೆಟ್ಟದಂತೆ ದೊಡ್ಡ ಶರೀರವುಳ್ಳವನಾಗಿಯೂ ಉದ್ದವಾದ ಹಸ್ತವುಳ್ಳವನಾಗಿಯೂ ಇದ್ದನು ಇಂತಹ ಪುರುಕುತ್ಸನನ್ನು ದೇವಾಸುರರ ಯುದ್ಧದಲ್ಲಿ ಭಗವಂತನು ಬಲಾತ್ಕಾರವಾಗಿ ಕೊಂದು ಇಂದ್ರನಿಗ ಜಯವನ್ನುಂಟುಮಾಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಇಂದ್ರನನ್ನು ಕುರಿತು ಶಾಂಬರಾಯಣಿಯು
ಇಂದ್ರಾದಿಗಳ ಚರಿತ್ರೆಗಳನ್ನು ಹೇಳುತ್ತಲಿರುವಳೆಂಬ
ಹೆಸರಿನ ಒಂದುನೂರ ಎಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಸಪ್ತತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ಔತ್ತಮಸ್ಯ ಮನೋಃ ಪುತ್ರಾಂಸ್ತೃತೀಯಸ್ಯ ನಿಬೋಧ ಮೇ ।
ಅಜಶ್ಚ ಪರಶುಶ್ಚೈವ ದೇವದೇವೋ ಬುಧೋ ನಯಃ ॥ ೧ ॥

ದೇವಾವೃಧಶ್ಚಾಪ್ರತಿಮೋ ಮಹೋತ್ಸಾಹೋ ಗಜಸ್ತಥಾ ।
ವಿನೀತಶ್ಚ ಸುಕೇತುಶ್ಚ ಸುಮಿತ್ರಃ ಸುಬಲಃ ಶುಚಿಃ ॥ ೨ ॥

ಅತಃ ಪರಂ ಪ್ರವಕ್ಷ್ಯಾಮಿ ಋಷಯಃ ಸಪ್ತ ವೈ ತದಾ ।
ರಜೋಽಬಾಹೂರ್ಧ್ವಬಾಹೂ ಚ ಸವನಶ್ಚಾನಘಶ್ಚ ಯಃ ॥ ೩ ॥

### ನೂರ ಎಪ್ಪತ್ತೆಂಟನೆಯ ಅಧ್ಯಾಯವು.

೧-೨ ಪುನಃ ಶಾಂಬರಾಯಣಿಯು ಇಂದ್ರನನ್ನು ಕುರಿತು ಹೇಳುತ್ತಾಳೆ — ಇನ್ನು ಮುಂದೆ ಮೂರನೆಯ ಮನುವಾದ ಉತ್ತಮ ಮನುವಿನ ಮಕ್ಕಳ ಹೆಸರನ್ನು ಹೇಳುತ್ತೇನೆ ಅಜ, ಪರಶು, ದೇವದೇವ, ಬುಧ, ನಯ, ದೇವಾವೃಧ, ಅಪ್ರತಿಮ, ಮಹೋತ್ಸಾಹ, ಗಜ, ವಿನೀತ, ಸುಕೇತು, ಸುಮಿತ್ರ, ಬಲ, ಶುಚಿ, ಇವರೇ ಆ ಮನುಪುತ್ರರು

೩-೮ ಆ ಮನ್ವಂತರದ ಋಷಿಗಳ ಹೆಸರನ್ನು ಹೇಳುತ್ತೇನೆ, ಕೇಳು ಇಂದ್ರ! ರಜೋಬಾಹು, ಊರ್ಧ್ವಬಾಹು, ಸವನ, ಅನಘ, ಸುತಪ್ತ, ಶಕ್ರ, ಇವರೇ ಆ ಋಷಿಗಳು ಆ ಕಾಲದ ದೇವಗಣಗಳ ಹೆಸರುಗಳನ್ನು ಕೇಳು ವಶವರ್ತಿ, ಸ್ವಧಾಸಾನ, ವಶ, ಸತ್ಯ, ಮತಾರ್ದನ ಈ ಐದು ಮಂದಿಯೂ ದೇವತೆಗಳು ಇವರಲ್ಲದೆ ದ್ವಾಪ

ಸುತಪಾಃ ಶಕ್ತಿರಿತ್ಯೇತೇ ಋಷಯಃ ಸಪ್ತಕೀರ್ತಿತಾಃ ।
ವಶವರ್ತಿನಃ ಸ್ವಧಾಸಾನೋ ವಶಾ ಸತ್ಯೋ ಮತಾರ್ದನಾಃ ॥ ೪ ॥

ಪಂಚ ದೇವಗಣಾಃ ಪ್ರೋಕ್ತಾಃ ಸರ್ವೇ ದ್ವಾದಶಕಾಸ್ತು ತೇ ।
ತೇಷಾಂ ಸುಚಿತ್ತಿರ್ನಾಮ್ನಾಭೂಚ್ಛಕ್ರಃ ಪರಪುರಂಜಯಃ ॥ ೫ ॥

ಆಸಂಸ್ತಸ್ಯಾಸುರಾ ಘೋರಾಸ್ತದಾ ದಾಯಾದಬಾಂಧವಾಃ ।
ಯೇಷಾಮಾಸೀದ್ಬಲೀ ರಾಜಾ ಪ್ರಲಂಬೋ ನಾಮ ನಾಮತಃ ॥ ೬ ॥

ಶಕ್ರಸ್ಯ ವಿಪ್ರಿಯಾಸಕ್ತಂ ತಂ ಸಮುದ್ರಾಂಬುವಾಹಿನಂ ।
ಮತ್ಸ್ಯರೂಪಧರೋ ವಿಷ್ಣುರ್ಗ್ರಸ್ತವಾನ್ಬಲವತ್ತರಂ ॥ ೭ ॥

ಕಾಲಾನಲಾಭಂ ತು ವಿದೇಶಶತ್ರುಂ
ರೂಪೇಣ ಮಾತ್ಸ್ಯೇನ ಜಗತ್ಪ್ರಚಾರಃ ।

---

ಶಾದಿತ್ಯರೂ ಆ ಕಾಲದಲ್ಲಿದ್ದರು ಇವರೆಲ್ಲರಿಗೂ ಧೊರೆಯಾದ ದೇವೇಂದ್ರನಿಗೆ ಸುಚಿತ್ತಿಯೆಂಬ ಹೆಸರಿತ್ತು ಇವನು ಮಹಾಬಲಶಾಲಿಯಾಗಿಯೂ ಇದ್ದನು ಇಷ್ಟಾದರೂ ಇವನಿಗೆ ಅನೇಕ ಮಂದಿ ರಾಕ್ಷಸರು ದಾಯಾದಿಗಳಾಗಿ ಹುಟ್ಟಿ ಇವನ ಮೇಲೆ ವಿಷವನ್ನು ಕಾರುತ್ತಾ ಇವನನ್ನು ಮಟ್ಟಮಾಡಿಬಿಡಬೇಕೆಂಬ ದುರಾಲೋಚನೆಯಲ್ಲಿಯೇ ಇದ್ದರು ಈ ರಾಕ್ಷಸರೆಲ್ಲರಿಗೂ ಪ್ರಲಂಬಾಸುರನೆಂಬುವನು ಧೊರೆಯಾಗಿದ್ದು ಸಮಯವನ್ನು ಸಾಧಿಸುತ್ತಾ ಇಂದ್ರನ ಮೇಲೆ ಬೀಳುವ ಸಂಧಾನದಲ್ಲಿರುವ ಸಂಗತಿಯು ಇಂದ್ರನಿಗೆ ಗೊತ್ತಾಗಿಹೋಯಿತು ಆಗ ಇಂದ್ರನು ತನಗೆ ಬಂದಿರುವ ವಿಪತ್ತನ್ನು ಮಹಾವಿಷ್ಣುವಿಗೆ ಹೇಳಿಕೊಂಡನು ಇಂದ್ರನ ಕಷ್ಟವನ್ನು ನೋಡಲಾರದೆ ಆ ಮಹಾನುಭಾವನು ಮತ್ಸ್ಯಾವತಾರಮಾಡಿ ನೀರಿನಲ್ಲಿ ಮುಳುಗಿದ್ದ ಆ ಪ್ರಲಂಬನನ್ನು ಹಿಡಿದು ನುಂಗಿಬಿಟ್ಟನು. ಆ ಪ್ರಲಂಬನು ಮಹಾನುಭಾವನಾದ ವಿಷ್ಣುವಿನ ಉದರದಲ್ಲಿ ಸಿಕ್ಕಿ ಮೃತಿಯನ್ನೈದಿದನು. ಈರೀತಿ ಆ ಪ್ರಲಂಬನು ಸಮುದ್ರಮಧ್ಯದಲ್ಲಿ ಹೊಕ್ಕು ಒಬ್ಬರಿಗೂ ಕಾಣಿಸದೆ ಅಲ್ಲಿಂದಲೇ ಬಾಣಪ್ರಯೋಗಮಾಡುತ್ತಾ ಲೋಕಕಂಟನಾಗಿದ್ದುದನ್ನು ನೋಡಿ ಪರಮಾತ್ಮನು ಮತ್ಸ್ಯಾವತಾರವನ್ನು ಮಾಡಿ, ಬೆಟ್ಟದಂತೆ

**ಜಘಾನ ತಂ ಪರ್ವತಕೂಟಮಾತ್ರಂ**
**ಸಮುದ್ರಮಧ್ಯೇ ಶರದಾನತೃಪ್ತಂ** ‖ ೮ ‖

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ತೃತೀಯಮನ್ವಂತರವರ್ಣನಂನಾಮಾಷ್ಟ ಸಪ್ತತ್ಯಧಿಕ ಶತತಮೋಽಧ್ಯಾಯಃ.**

---

ಒಲು ದೊಡ್ಡದಾದ ದೇಹವುಳ್ಳ ಆ ಅಸುರನನ್ನು ನುಂಗಿ ಲೋಕವನ್ನು ಉದ್ಧರಿಸಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದ ರೂಪವಾದ ಮೂರನೇ ಮನ್ವಂತರ ವರ್ಣನವೆಂಬ ಹೆಸರಿನ ಒಂದುನೂರ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನಾಶೀತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ತಾಮಸಸ್ಯ ಮನೋಃ ಪುತ್ರಾಂಶ್ಚತುರ್ಥಸ್ಯ ನಿಬೋಧ ಮೇ ।
ಜಾನುಜಂಘಃ ಶಾಂತಭಯೋ ನರಃ ಖ್ಯಾತಿರ್ನರಸ್ತಥಾ ॥ ೧ ॥

ಪ್ರಿಯಭೃತ್ಯೋ ಹ್ಯವಿಕ್ಷಿಚ್ಚ ಪ್ರಸ್ಥಿಲಶ್ಚ ದೃಢೇಷುಧಿಃ ।
ಕೃತಶ್ಚ ಕೃತಗಂಧಶ್ಚ ತಾಮಸಸ್ಯ ಮನೋಃ ಸುತಾಃ ॥ ೨ ॥

ಋಷಿರ್ವನಃ ಕರೀಯಾನ್ಸ್ಯೈ ಗಾತ್ರಶ್ಚೈತ್ರೋಽಗ್ನಿರೇವ ಚ ।
ಜ್ಯೋತಿರ್ವಾಸಾಃ ಪೃಥುಃ ಕಾರ್ಯ ಋಷಯಃ ಸಪ್ತ ಕೀರ್ತಿತಾಃ ॥ ೩ ॥

ಸತ್ಯಾಃ ಸುಪಾದಾಃ ಸುರಿಹಾ ಹರಶ್ಚೇತಿ ಪ್ರಕೀರ್ತಿತಾಃ ।
ದೇವತಾನಾಂ ಗಣಾ ಏತೇ ಚತ್ವಾರಃ ಪಂಚವಿಂಶಕಾಃ ॥ ೪ ॥

### ನೂರೆಪ್ಪತ್ತೊಂಭತ್ತನೆಯ ಅಧ್ಯಾಯವು.

೧-೨ ಇಂದ್ರ! ನಾಲ್ಕನೆಯ ತಾಮಸಮನುವಿನ ಚರಿತ್ರೆಯನ್ನು ಹೇಳುತ್ತೇನೆ, ಕೇಳು ಈ ಮನುವಿನ ಮಕ್ಕಳುಗಳ ಹೆಸರೇನೆಂದರೆ —ಜಾನುಜಂಘ, ಶಾಂತಭಯ, ನಯ, ಖ್ಯಾತಿನಯ, ಪ್ರಿಯವ್ರತ, ಅವಿಕ್ಷಿತ್ತು, ಪ್ರಸ್ಥಿಲ, ದೃಢೇಷುಧಿ, ಕೃತ, ಕೃತಗಂಧ, ಇವರೇ ಆ ತಾಮಸ ಮನುಪುತ್ರರು

೩ ವನ, ಕರೀಯ, ಗಾತ್ರ, ಚೈತ್ರ, ಅಗ್ನಿ, ಜ್ಯೋತಿರ್ವಾಸ, ಪೃಥುಕಾರ್ಯ ಈ ಏಳು ಜನ ಮಹರ್ಷಿಗಳೂ ತಾಮಸ ಮನ್ವಂತರದಲ್ಲಿದ್ದವರು.

೪ ಆಗಿನ ದೇವತಾಗಣಗಳು ನಾಲ್ಕು ಪಂಗಡಗಳಾಗಿದ್ದವು ಸತ್ಯ, ಸುಪಾದ, ಸುರಿಹಾ, ಹರನೆಂದು ಆ ಗಣಗಳ ಹೆಸರು. ಇಂಥ ಗಣಗಳು ಮುಂದೆ ಹೇಳುವಂತೆ ಇಪ್ಪತ್ತೈದು

ಸತ್ಯಾನಾಮಪಿ ಭೇದೌ ದ್ವೌ ಸತ್ಯಾ ವಿಶ್ವಾಶ್ಚ ಕೀರ್ತಿತಾಃ ।
ಸತ್ಯಾ ದ್ವಾದಶ ನಿರ್ದಿಷ್ಟಾ ವಿಶ್ವಾಃ ಪ್ರೋಕ್ತಾಸ್ತ್ರಯೋದಶ ॥ ೫ ॥

ತೇಷಾಮಾಸೀನ್ಮಹಾತೇಜಾ ಶಿಬಿರಿಂದ್ರಃ ಪ್ರತಾಪವಾನ್ ।
ಆಸಂಸ್ತಸ್ಯಾಸುರಾ ಘೋರಾಸ್ತದಾ ದಾಯಾದಬಾಂಧವಾಃ ॥ ೬ ॥

ಯೇಷಾಮಾಸೀನ್ಮಹಾತೇಜಾ ರಾಜಾ ಭೀಮರಥಃ ಪ್ರಭುಃ ।
ಪ್ರಸಾದ್ಯ ಯೇನ ಬ್ರಹ್ಮಾಣಮವಧ್ಯತ್ವಂ ಸ್ಥಲೇವೃತಂ ॥ ೭ ॥

ಜಲಂ ಸ ವರ್ಜಯಾಮಾಸ ತತಃ ಪ್ರಭೃತಿ ದುರ್ಮತಿಃ ।
ಸ ದದರ್ಶ ಮಹಾ ಕೂರ್ಮಂ ಪರ್ವತಾಕಾರದರ್ಶನಂ ॥ ೮ ॥

ತಮಾರುರೋಹ ದುರ್ಬುದ್ಧಿಃ ಕೌತೂಹಲಸಮನ್ವಿತಃ ।
ಸಮಾರೂಢಂ ಮಹಾಕಾಯಮಾದಾಯ ಭಗವಾನ್ಹರಿಃ ॥ ೯ ॥

---

೫ ಮೊದಲನೆ ಸತ್ಯದೇವತಾ ಗಣದಲ್ಲಿ ಎರಡು ಭೇದವಿವೆ ಅವೆರಡಕ್ಕೂ ಸತ್ಯ, ವಿಶ್ವ ಎಂದು ಹೆಸರು, ಸತ್ಯ ಹನ್ನೆರಡು, ವಿಶ್ವ ಹದಿಮೂರು, ಎರಡೂ ಸೇರಿ ಒಟ್ಟು ಇಪ್ಪತ್ತೈದು ಗಣದೇವತೆಗಳು.

೬-೧೧ ಇಷ್ಟು ಮಂದಿ ದೇವತೆಗಳೊಳಗೆ ಮಹಾಪ್ರತಾಪಶಾಲಿಯಾದ ಶಿಬಿ ಚಕ್ರವರ್ತಿಯು ಆಗ್ಗೆ ಇಂದ್ರಪಟ್ಟವನ್ನೇರಿದ್ದನು ಆಗ ಆ ಇಂದ್ರನಿಗೂ ಸಹ ಮಹಾ ಭಯಂಕರನಾದ ಅನೇಕ ಮಂದಿ ರಾಕ್ಷಸರು ದಾಯಾದಿಗಳಾಗಿದ್ದರು ಅವರಲ್ಲೆಲ್ಲಾ ಭೀಮರಥನೆಂಬುವನು ಮುಖ್ಯಸ್ಥನಾಗಿ ರಾಜನಾಗಿದ್ದನು ಆ ಭೀಮರಥನು ಬ್ರಹ್ಮ ನಿಂದ ಭೂಮಿಯ ಮೇಲೆ ಅವಧ್ಯತ್ವ ವರವನ್ನು ಬೇಡಿಕೊಂಡನು ಹಾಗೆಂದರೆ ನೆಲದ ಮೇಲೆಲ್ಲಿಯೂ ತನಗೆ ಮರಣವು ಆಗಬಾರದೆಂದು ತಾತ್ಪರ್ಯ ಈ ವರ ವನ್ನು ಸಂಪಾದಿಸಿದ ಮೇಲೆ ಅವನಿಗೆ ನೀರೆಂದರೆ ಹೆದರಿಕೆಯಾಗ ತೊಡಗಿತು ಆದು ದರಿಂದ ಅವನು ನೀರಿರುವ ಸ್ಥಳವನ್ನು ಬಿಟ್ಟು ಭೂಮಿಯ ಮೇಲೆಯೇ ಸಂಚರಿ ಸುತ್ತಾ ಕಾಲಕಳೆಯತೊಡಗಿದನು ಮತ್ತು ದೇವಲೋಕವನ್ನೂ ಭೂಲೋಕವನ್ನೂ ಹಿಂಸಿಸತೊಡಗಿದನು ಆಗ ಪರಮಾತ್ಮನು ಅವನ ಹಿಂಸಾಕೃತ್ಯವನ್ನು ನೋಡಿ ದೇವತೆಗಳ ಕಷ್ಟವನ್ನು ತಪ್ಪಿಸಿ ಅವನನ್ನು ಸಂಹರಿಸುವುದಕ್ಕಾಗಿ ಒಂದು ಆಮೆಯ (ಕೂರ್ಮ) ರೂಪವನ್ನು ತಳೆದು ದೊಡ್ಡದೊಂದು ಮರುಭೂಮಿಯಲ್ಲಿ ದೊಡ್ಡಪರ್ವ ತದ ಹಾಗೆ ಬೆನ್ನು ಮೇಲೆ ಮಾಡಿಕೊಂಡು ಮಲಗಿಬಿಟ್ಟನು ಇದನ್ನು ನೋಡಿ

**ಕೂರ್ಮರೂಪಧರೋ ವೇಗಾತ್ಪಾತಾಲಜಲಮಾವಿಶತ್ ।**
**ಪಾತಾಲಜಲಮಾನೀಯ ಮಜ್ಜಯಿತ್ವಾ ಜಘಾನ ತಂ ।**
**ಆಕ್ರಮ್ಯ ತಂ ಮಹಾಕಾಯಂ ಮಹತಾ ಕೂರ್ಮವರ್ಷ್ಮಣಾ ॥ ೧೦ ॥**

**ಏವಂ ಸ ಕೂರ್ಮೇಣ ಜಲೇ ಪ್ರಸಹ್ಯ**
**ದೇವೇಶ್ವರಸ್ಯಾಪ್ರತಿಮಸ್ಯ ಶತ್ರುಃ ।**
**ನಿಪಾತಿತಃ ಸರ್ವಸುರಪ್ರಧಾನೈಃ**
**ಸರ್ವೇಶ್ವರೇಣಾಪ್ರತಿಮೇನ ತೇನ ॥ ೧೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಚತುರ್ಥತಾಮಸಮನ್ವಂತರವರ್ಣನಂನಾಮೈ ಕೋನಾಶೀತ್ಯಧಿಕ ಶತತಮೋಽಧ್ಯಾಯಃ**

---

ದುರ್ಬುದ್ಧಿಯುಳ್ಳ ಭೀಮರಥನು ಕುತೂಹಲದಿಂದ ಆ ಆಮೆಯ ಬೆನ್ನಿನ ಮೇಲೆ ಹತ್ತಿ ಕುಳಿತುಕೊಂಡನು. ಆ ಕೂಡಲೆ ಕೂರ್ಮರೂಪೀ ಭಗವಾನ್ ವಾಸುದೇವನು ವೇಗ ದಿಂದ ಅವನು ಕೂತಿದ್ದಂತೆಯೇ ಅವನನ್ನು ಬೆನ್ನುಮೇಲೆ ಹೊತ್ತುಕೊಂಡೇ ಪಾತಾಳ ಲೋಕದ ಜಲದಲ್ಲಿ ಮುಳುಗಿಬಿಟ್ಟನು ಅಲ್ಲಿ ಅವನನ್ನು ಮುಳುಗಿಸಿ ಅವನನ್ನು ಮೆಟ್ಟಿ ಸಂಹಾರಮಾಡಿಬಿಟ್ಟನು. ಈ ರೀತಿಯಾಗಿ ದೇವಕಂಟಕನಾದ ಆ ಭೀಮರಥ ನನ್ನು ಪರಮಾತ್ಮನು ಕೂರ್ಮಾವತಾರಮಾಡಿ ನೀರಿನಲ್ಲಿ ಮುಳುಗಿಸಿ ಕೊಂದುಬಿಟ್ಟನು. ಕೇಳಯ್ಯ, ದೇವೇಂದ್ರ !

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ನಾಲ್ಕನೆಯ ತಾಮಸಮನ್ವಂತರವೆಂಬ ಮನುವಿನ ವರ್ಣನಾತ್ಮಕನಾದ ನೂರೆಪ್ಪತ್ತೊಂಭತ್ತನೇ ಅಧ್ಯಾಯವು ಮುಗಿದುದು.



ಶ್ರೀಃ

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಅಶೀತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ರೈವತಸ್ಯ ಮನೋಃ ಪುತ್ರಾನ್ಪಂಚಮಸ್ಯ ನಿಬೋಧ ಮೇ ।
ಮಹಾಪುರಾಣಃ ಸಂಭಾವ್ಯಃ ಪ್ರತ್ಯಂಗಃ ಪರಹಾ ಶುಚಿಃ ॥ ೧ ॥

ಜಲಬಿಂದುರ್ನಿರಾಮಿತ್ರಃ ಕೇತುಶೃಂಗೋ ದೃಢವ್ರತಃ ।
ರೈವತಸ್ಯ ಮನೋಃ ಪುತ್ರಾ ಋಷಯಸ್ತಸ್ಯ ವಚ್ಮಿ ತೇ ॥ ೨ ॥

ವೇದಶ್ರುತಿರ್ವೇದಬಾಹುರೂರ್ಧ್ವಬಾಹುರ್ಯಜುಸ್ತಥಾ ।
ಹಿರಣ್ಯರೋಮಾ ಪರ್ಜನ್ಯಃ ಸತ್ಯನೇತ್ರಸ್ತಥೈವ ಚ ॥ ೩ ॥

---

### ನೂರೆಂಭತ್ತನೆಯ ಅಧ್ಯಾಯವು.

೧-೮. ಐದನೆಯ ರೈವತಮನುವಿನ ಮಕ್ಕಳ ಹೆಸರನ್ನು ಹೇಳುತ್ತೇನೆ, ಕೇಳು. ಮಹಾಪುರಾಣ, ಸಂಭಾವ್ಯ, ಪ್ರತ್ಯಂಗ, ಪರಹಾ, ಶುಚಿ, ಜಲಬಿಂದು, ನಿರಾಮಿತ್ರ, ಕೇತುಶೃಂಗ, ದೃಢವ್ರತ ಇವರೆಲ್ಲರೂ ರೈವತಮನುವಿನ ಪುತ್ರರು. ಆಮೇಲೆ ಆ ರೈವತಮನುವಿನ ಪುತ್ರರಾದ ಸಪ್ತಋಷಿಗಳ ಹೆಸರನ್ನು ಹೇಳುತ್ತೇನೆ, ಕೇಳು. ವೇದಶ್ರುತಿ, ವೇದಬಾಹು, ಊರ್ಧ್ವಬಾಹು, ಯಜು, ಹಿರಣ್ಯರೋಮ, ಪರ್ಜನ್ಯ, ಸತ್ಯನೇತ್ರ, ಅಭೂತಜರ, ಇವರೇ ಆ ಋಷಿಗಳು. ದೇವತಾಗಣಗಳಾವುವೆಂದರೆ — ಸುಮೇಧಸರು, ವೈಕುಂಠರು, ಅಮೃತರು ಇತ್ಯಾದಿ ನಾಲ್ಕು ಗಣ, ಒಂದೊಂದು ಗಣಕ್ಕೆ ಹದಿನಾಲ್ಕು ಮಂದಿ ದೇವತೆಗಳು, ಅವರುಗಳಿಗೆಲ್ಲಾ ಯಜಮಾನನು ವಿಭುವೆಂಬ ಹೆಸರಿನ ಇಂದ್ರನು ಅವನು ಮಹಾಬಲಪರಾಕ್ರಮಶಾಲಿಯಾಗಿದ್ದಾಗ್ಯೂ ಕೂಡ ಅವನಿಗೆ ಅನೇಕ ಭಯಂಕರ ರಾಕ್ಷಸರು ದಾಯಾದಿಗಳಾಗಿದ್ದರು. ಅವರುಗಳ

ಆಭೂತರಾಜಸಶ್ಚೈವ ತಥಾ ದೇವಾಃ ಸುಮೇಧಸಃ ।
ವೈಕುಂಠಾಶ್ಚಾಮೃತಾಶ್ಚೈವ ಚತ್ವಾರೋ ದೇವತಾಗಣಾಃ ॥ ೪ ॥

ಏಕೈಕಸ್ಮಿನ್ಗಣೇ ದೇವಾಃ ಕಥಿತಾಸ್ತು ಚತುರ್ದಶ ।
ತೇಷಾಮಿಂದ್ರೋ ವಿಭುರ್ನಾಮ ಲೋಕೇ ವಿಖ್ಯಾತವಿಕ್ರಮಃ ॥ ೫ ॥

ಆಸಂಸ್ತಸ್ಯಾಸುರಾ ಘೋರಾಸ್ತದಾ ದಾಯಾದಬಾಂಧವಾಃ ।
ತೇಷಾಮಾಸೀನ್ಮಹಾತೇಜಾಃ ಶಂಭುರ್ನಾಮ ಮಹೇಶ್ವರಃ ॥ ೬ ॥

ಬ್ರಹ್ಮಲೋಕೇನ ಮರಣಂ ವೃತಂ ಯೇನ ಪಿತಾಮಹಾತ್ ।
ಸ ಕದಾಚಿನ್ಮಹಾಕಾಯಂ ಸಮುದ್ರಜಲಚಾರಿಣಂ ॥ ೭ ॥

ಹಂಸಂ ದೃಷ್ಟ್ವೈವ ಜಗ್ರಾಹ ತಂಚಾರೋಹತಿ ದುರ್ಮತಿಃ ।
ಆರೂಢಮಾತ್ರಮಾದಾಯ ಬ್ರಹ್ಮಲೋಕಂ ಜಗಾಮ ಸಃ ।
ಹಂಸರೂಪೇಣ ತತ್ರೈವ ಜಘಾನ ಭಗವಾನ್ಹರಿಃ ॥ ೮ ॥

ಏವಂ ಸ ಹಂಸೇನ ಹತೋ ಮಹಾತ್ಮಾ
ಸರ್ವೇಶ್ವರೇಣಾಪ್ರತಿಮೇನ ತೇನ ।

---

ಗೆಲ್ಲಾ ಶಂಬುವೆಂಬ ರಾಕ್ಷಸನೇ ರಾಜನಾಗಿದ್ದನು ಅವನು ತನಗೆ ಬ್ರಹ್ಮಲೋಕದಲ್ಲಿ ಮರಣವಾಗಬೇಕೇ ಹೊರತು ಇನ್ನಾವ ಲೋಕದಲ್ಲೂ ಮರಣವಾಗಕೂಡದೆಂದು ಬ್ರಹ್ಮನಿಂದ ವರವನ್ನು ಪಡೆದಿದ್ದನು. ಈ ವರಬಲದಿಂದ ಲೋಕಹಿಂಸಕನಾಗಿದ್ದ ಆ ಶಂಭುವನ್ನು ಸಂಹರಿಸಲು ಸಮಯವನ್ನು ನಿರೀಕ್ಷಿಸುತ್ತಾ ಸಮುದ್ರದೊಳಗೆ ಒಂದು ಹಂಸವಾಗಿ ಶ್ರೀಮನ್ಮಹಾವಿಷ್ಣುವು ಸಂಚರಿಸುತ್ತಿದ್ದನು ಮಹಾಪರ್ವತದಂತ ಸಮುದ್ರದಲ್ಲಿ ಸಂಚರಿಸುತ್ತಿದ್ದ ಆ ಮಹಾಹಂಸವನ್ನು ನೋಡಿ ಶಂಭುವು ಸಮುದ್ರಕ್ಕೆ ಹಾರಿ ಆ ಹಂಸವನ್ನು ಹಿಡಿದು ಅದರ ಮೇಲೆ ಕುಳಿತುಕೊಂಡನು ಮತ್ತು ಅದನ್ನು ಹಿಂಸಿಸತೊಡಗಿದನು ಹಂಸಾವತಾರವಂ ಧರಿಸಿದ್ದ ಮಹಾ ವಿಷ್ಣುವು ಅವನನ್ನು ಬೆನ್ನಿನಮೇಲೆ ಹೊತ್ತುಕೊಂಡೇ ಬ್ರಹ್ಮಲೋಕಕ್ಕೆ ಹಾರಿಹೋದನು ಮತ್ತು ಆ ಬ್ರಹ್ಮಲೋಕದಲ್ಲೇ ಅವನನ್ನು ಕೊಕ್ಕುಗಳಿಂದ ಕುಕ್ಕಿ ಕೊಂದುಬಿಟ್ಟನು ಈರೀತಿ ಅಜೇಯನಾದ ಆ ಶಂಭುದೈತ್ಯನು ಪರ್ವತದಂತೆ ಮಹೋನ್ನತವಾದ ದೇಹವನ್ನು

ಮಹಾಬಲಃ ಪರ್ವತಮಾತ್ರಕಾಯಃ
ಸುರಾಂತಕಾರೀ ಸಮರೇಷ್ವಜೇಯಃ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಇಂದ್ರಶಾಂಬರಾಯಣೀಯ ಸಂವಾದೇ
ಪಂಚಮರೈವತಮನ್ವಂತರವರ್ಣನನ್ನಾಮಾಶೀತ್ಯಧಿಕ
ಶತತಮೋಽಧ್ಯಾಯಃ

ಪರಿಸಿದ್ದಾಗ್ಯೂ, ದೇವತೆಗಳನ್ನು ಜಯಿಸಿದವನಾದಾಗ್ಯೂ ಅಪ್ರತಿಮ ಪರಾಕ್ರಮಿಯಾದ ಹಂಸರೂಪೀ ಪರಮಾತ್ಮನಿಂದ ಬ್ರಹ್ಮಲೋಕದಲ್ಲಿ ಹತನಾದನು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಐದನೆಯ ಮನ್ವಂತರ
ವರ್ಣನೆಯೆಂಬ ಹೆಸರಿನ ಒಂದು ನೂರೆಂಭತ್ತನೇ
ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ
## ॥ ಏಕಾಶೀತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ಚಾಕ್ಷುಷಸ್ಯ ಮನೋಃ ಪುತ್ರಾನ್ಷಷ್ಠಸ್ಯ ಶೃಣು ವಾಸವ ।
ಊರುಃ ಪೂರುಃ ಶತದ್ಯುಮ್ನಃ ತಪಸ್ವೀ ಸತ್ಯವಾನ್ಧೃತಿಃ ॥ ೧ ॥

ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚ ತಥಾನಘ ।
ಹವಿಷ್ಮಾನುನ್ನತಃ ಶ್ರೀಮಾನ್ಸುಧಾಮಾ ವಿಜಯಸ್ತಥಾ ॥ ೨ ॥

ಅಭಿಮಾನಃ ಸಹಿಷ್ಣುಶ್ಚ ಮಧುಶ್ರೀಋಷಯಃ ಸ್ಮೃತಾಃ ।
ಆಧ್ಯಾಃ ಪ್ರಸೂತಾ ಭಾವ್ಯಾಶ್ಚ ಲೇಖಾಶ್ಚ ಪೃಥುಕಾಸ್ತಥಾ ॥ ೩ ॥

### ಎಂಭತ್ತೊಂದನೆಯ ಅಧ್ಯಾಯವು.

೧-೧೧ ಶಂಬರಾಯಣಿಯು ಇಂದ್ರನನ್ನು ಕುರಿತು ಮತ್ತೂ ಹೇಳುತ್ತಾಳೆ,- ಎಲೈ ಇಂದ್ರನೇ ! ಆರನೆಯ ಚಾಕ್ಷುಷಮನುವಿನ ಮಕ್ಕಳ ಹೆಸರನ್ನು ಹೇಳುತ್ತೇನೆ ಕೇಳು ಊರು, ಪೂರು, ಶತದ್ಯುಮ್ನ, ತಪಸ್ವೀ, ಸತ್ಯವಂತ, ಧೃತಿ, ಅಗ್ನಿಸ್ತುತ, ಅತಿರಾತ್ರ, ಸುದ್ಯುಮ್ನ, ಹವಿಷ್ಮಂತ, ಉನ್ನತ, ಸುಧಾಮಾ. ವಿಜಯ, ಇವರುಗಳೇ ಆ ಮನುವಿನ ಪುತ್ರರುಗಳು ಇನ್ನು ಆ ಮನುವಿನ ಋಷಿಸಂತಾನವನ್ನು ಹೇಳುತ್ತೇನೆ ಕೇಳು ಅಭಿಮಾನ, ಸಹಿಷ್ಣು, ಮಧುಶ್ರೀ ಎಂಬ ಹೆಸರಿನ ಋಷಿಗಳೇ ಅವರು ಇವಲ್ಲದೆ ಐದು ದೇವತಾ ಗಣಗಳಿವೆ ಆ ದೇವಗಣಗಳ ಹೆಸರನ್ನು ಹೇಳುತ್ತೇನೆ ಕೇಳು ಆಧ್ಯರು, ಪ್ರಸೂತರು, ಭಾವ್ಯರು, ಲೇಖರು, ಪೃಥುಕರು, ಅಷ್ಟಕರು, ಇವರೇ ದೇವತಾ ಗಣಗಳು ಈ ದೇವಲೋಕವಾಸಿಗಳೆಲ್ಲರಿಗೂ ಮಹಾಪ್ರತಾಪಶಾಲಿಯಾದ ಮನೋ

ಅಷ್ಟಕಾಶ್ಚ ಗಣಾಃ ಪಂಚ ತದಾ ಪ್ರೋಕ್ತಾ ದಿವೌಕಸಾಂ ।
ತೇಷಾಂ ಮನೋಜವೋ ನಾಮ ಬಭೂವೇಂದ್ರಃ ಪ್ರತಾಪವಾನ್ ॥ ೪ ॥

ಆಸಂಸ್ತಸ್ಯಾಸುರಾಘೋರಾಸ್ತದಾ ದಾಯಾದಬಾಂಧವಾಃ ।
ಯೇಷಾಂ ಬಭೂವ ನೃಪತಿರ್ಮಹಾಮಾಲೋ ಬಲಾಧಿಕಃ ॥ ೫ ॥

ಸ ಕದಾಚಿದ್ವನಂ ಯಾತೋ ಮೃಗಯಾಂ ಪಾಪನಿಶ್ಚಯಃ ।
ತತ್ರ ಚಂದ್ರಾಂಶುಸಂಕಾಶಂ ದದರ್ಶಾಶ್ವಂ ಮನೋಹರಂ ॥ ೬ ॥

ತಮಾರುರೋಹ ದುರ್ಬುದ್ಧಿರ್ಮೃಗಘಾತಚಿಕೀರ್ಷಯಾ ।
ತಮಾರೂಢಂ ಸಮಾದಾಯ ತದಾ ವೇಗಾತ್ತುರಂಗಮಃ ॥ ೭ ॥

ಗತ್ವಾ ಪಾರೇ ಸಮುದ್ರಸ್ಯ ಚಿಕ್ಷೇಪೋಪರಿ ದುರ್ಮತಿಂ ।
ಕ್ಷಿಪ್ರಮಾತ್ರಃ ಸ ದುರ್ಬುದ್ಧಿಃ ಪವನೇನಾಪವಾಹಿತಃ ॥ ೮ ॥

ಅನಾಸಾದಿತತೋಯಶ್ಚ ಪವನೇನ ಸ ತೂಹ್ಯತೇ ।
ಅದ್ಯಾಪಿ ಸುಮಹಾತೇಜಾ ಲೋಕಾ ಲೋಕಸ್ಯ ಬಾಹ್ಯತಃ ॥ ೯ ॥

---

ಜವನೆಂಬ ಇಂದ್ರನು ರಾಜನಾಗಿದ್ದನು ಈ ದೇವೇಂದ್ರನಿಗೆ ಬಹಳ ಬಯಂಕರ ಬಲಶಾಲಿಗಳಾದ ಅನೇಕವಂದಿ ರಾಕ್ಷಸರು ದಾಯಾದಿಗಳಾಗಿದ್ದರು ಈ ರಾಕ್ಷಸರುಗಳೆಲ್ಲರಿಗೂ ಮಹಾಬಲಶಾಲಿಯಾದ ಮಹಾಮಾಲನೆಂಬ ರಾಕ್ಷಸನು ದೊರೆಯಾಗಿದ್ದನು. ಅವನು ಒಂದಾನೊಂದು ಸಮಯದಲ್ಲಿ ಬೇಟೆಯನ್ನಾಡುವ ನೆಪದಿಂದ ಕಾಡಿಗೆ ಹೋದನು. ಅಲ್ಲಿ ಚಂದ್ರನಂತೆ ಪ್ರಕಾಶವಾಗಿದ್ದ ಒಂದು ಕುದುರೆಯನ್ನು ಕಂಡನು. ಅದರಮೇಲೆ ಕುಳಿತುಕೊಂಡು ಬೇಟೆಯಾಡಬೇಕೆಂದು ಅವನಿಗೆ ತೋರಲು ಅದರ ಮೇಲೆ ಒಡನೆಯೇ ಹತ್ತಿ ಕುಳಿತುಬಿಟ್ಟನು. ತನ್ನಮೇಲೆ ಕುಳಿತ ರಾಜನೊಡನೆ ಆ ವೇಗವಾದ ಆ ಅಶ್ವವು ಮೇಲಕ್ಕೆ ಹಾರಿ ಅವನನ್ನು ಸಮುದ್ರದಲ್ಲಿ ಕೆಡವಿಬಿಟ್ಟಿತು. ಆ ದೊರೆಯು ಸಮುದ್ರಜಲದಲ್ಲಿ ಬಿದ್ದೊಡನೆ ಅವನು ಸ್ವಲ್ಪವೂ ನೀರಿನಲ್ಲಿ ನೆನೆಯದಂತೆ ಸುಂಟರಗಾಳಿಯು ಬಂದು ಅವನನ್ನು ಹಾರಿಸಿಕೊಂಡು ಸಮುದ್ರ ದಡಕ್ಕೆ ತಂದು ಹಾಕಿತು ಅವನು ಬ್ರಹ್ಮನಿಂದ ಮರಣವೇ ಬರಕೂಡದೆಂದು ವರವನ್ನು ಪಡೆದಿದ್ದನಾದುದರಿಂದ ಸಾಯದೆ ಬದುಕಿದನು ಲೋಕಾಲೋಕಪರ್ವತದ ಆಚೆ ಈಗಲೂ ಅವನು ಸಾಯದೇ ಸುತ್ತಾಡುತ್ತಲೇ ಇದಾನೆ ವಾಯುಮಾರ್ಗದಲ್ಲಿಯೇ

ಅಮೃತ್ಯುವರದಾನೇನ ಸ ತು ಪಾಪಃ ಸ್ವಯಂಭುವಃ ।
ವಾಯುಮಾರ್ಗಂ ಸಮಾಶ್ರಿತ್ಯ ನ ತು ಪ್ರಾಣೈರ್ವಿಯುಜ್ಯತೇ ॥ ೧೦ ॥

ಏವಂ ಸ ಘೋರೋ ವರದಾನದರ್ಪಾ-
ದಮೃತ್ಯುರಸ್ತೀತಿ ಕೃತಾಪರಾಧಃ ।
ದೇವದ್ವಿಜಾನಾಂ ಹಯರೂಪಧಾರೀ
ಚಿಕ್ಷೇಪ ವಿಷ್ಣುಃ ಪವನಪ್ರವಾಹೇ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಷಷ್ಠಚಾಕ್ಷುಷಮನ್ವಂತರವರ್ಣನಂನಾಮೈಕಾ
ಶೀತ್ಯಧಿಕ ಶತತಮೋಽಧ್ಯಾಯಃ.

---

ಈಗಲೂ ಅವನ ಸಂಚಾರವುಂಟು ದೇವಬ್ರಾಹ್ಮಣರನ್ನು ಹಿಂಸಿಸುತ್ತಿದ್ದ ಈ ರಾಕ್ಷಸನು ತುರುಗರೂಪೀ ಮಹಾವಿಷ್ಣುವಿನಿಂದ ಲೋಕಾಲೋಕಪರ್ವತದ ಹೊರಕ್ಕೆ ತಳ್ಳಲ್ಪಟ್ಟು ವಾಯುಮಾರ್ಗದಲ್ಲೇ ಸಂಚರಿಸುತ್ತಾ ಬ್ರಹ್ಮವರಬಲದಿಂದ ಜೀವಿಸಿಕೊಂಡಿದಾನ ಕೇಳಿದೆಯಾ ಇಂದ್ರ, ಎಂದು ಶಂಬರಾಮಣಿಯು ಆರನೇ ಮನ್ವಂತರ ಚರಿತ್ರೆಯನ್ನು ವಿವರಿಸಿದಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಆರನೆಯ ಚಾಕ್ಷುಷಮನ್ವಂತರವರ್ಣನೆಯೆಂಬ
ಹೆಸರಿನ ಒಂದುನೂರೆಂಭತ್ತೊಂದನೆಯ ಅಧ್ಯಾಯವು ಮುಗಿದುದು.



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ದ್ವ್ಯಶೀತ್ಯಧಿಕಶತತಮೋऽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ಅಥಾನ್ಯಸ್ಯ ಭವಿಷ್ಯಸ್ಯ ಮನೋರ್ವೈವಸ್ವತಸ್ಯ ಚ ।
ಸಪ್ತಮಸ್ಯ ಪ್ರವಕ್ಷ್ಯಾಮಿ ತವ ಪುತ್ರಾನ್ಯಶಸ್ವಿನಃ ॥ ೧ ॥

ಇಕ್ಷ್ವಾಕುರಥ ನಾಭಾಗೋ ವಿಷ್ಣುಃ ಶರ್ಯಾತಿರೇವ ಚ ।
ಅವಧ್ಯತುಸ್ತಥಾ ಪಾಂಶುರ್ಮಹಾತ್ಮಾ ದಿಷ್ಟ ಏವ ಚ ॥ ೨ ॥

ಕರೂಷಶ್ಚ ಪೃಥುಧ್ರಶ್ಚ ಸುದ್ಯುಮ್ನಶ್ಚ ಮನೋಃ ಸುತಾಃ ।
ಅತ್ರಿರ್ವಸಿಷ್ಠೋ ಭಗವಾನ್ ಜಮದಗ್ನಿಶ್ಚ ಕಶ್ಯಪಃ ॥ ೩ ॥

---

### ಎಂಭತ್ತೆರಡನೆಯ ಅಧ್ಯಾಯವು.

ಇನ್ನು ಮುಂದಕ್ಕೆ ಶಾಂಬರಾಯಣಿಯು ಸಪ್ತಮನ್ವಂತರದ ಚರಿತ್ರೆಯನ್ನು ಇಂದ್ರನೊಡನೆ ಹೇಳುತ್ತಾಳೆ

೧ ಇನ್ನು ಮುಂದೆ ಏಳನೆಯ ವೈವಸ್ವತಮನ್ವಂತರದ ವಿಷಯವನ್ನು ಹೇಳುತ್ತೇನೆ ಆ ಮನುವಿನ ಉತ್ತಮ ಪುತ್ರರ ಹೆಸರುಗಳನ್ನೀಗ ಹೇಳುತ್ತೇನೆ

೨-೮ ಇಕ್ಷ್ವಾಕು, ನಾಭಾಗ, ವಿಷ್ಣು, ಶರ್ಯಾತಿ, ಅವಧ್ಯತ್ಯರು, ಪ್ರಾಂಶು ದಿಷ್ಟ, ಕರೂಷ, ಪೃಥು, ಇವರೇ ವೈವಸ್ವತಮನು ಪುತ್ರರು ಇನ್ನು ಸಪ್ತಋಷಿಗಳ ಹೆಸರುಗಳನ್ನು ಹೇಳುತ್ತೇನೆ ಕೇಳು –ಅತ್ರಿ, ವಸಿಷ್ಠ, ಜಮದಗ್ನಿ, ಕಶ್ಯಪ, ಗೌತಮ, ಭರದ್ವಾಜ, ವಿಶ್ವಾಮಿತ್ರ, ಇವರೇ ಸಪ್ತಋಷಿಗಳು ನಲವತ್ತೊಂಭತ್ತು ದೇವತಾ ಗಣಗಳು ಈ ವೈವಸ್ವತಮನ್ವಂತರದಲ್ಲಿ ಪ್ರಸಿದ್ಧವಾಗಿ ಮರುದೇವತೆಗಳೆಂದು ಪ್ರಸಿದ್ಧ

ಗೌತಮಶ್ಚ ಭರದ್ವಾಜೋ ವಿಶ್ವಾಮಿತ್ರೋಽಥ ಸಪ್ತಮಃ ।
ದೇವಾಶ್ಚೈಕೋನಪಂಚಾಶನ್ಮರುತಃ ಪರಿಕೀರ್ತಿತಾಃ ॥ ೪ ॥
ದ್ವಾವಶ್ವಿನೌ ವಿನಿರ್ದಿಷ್ಟೌ ವಿಶ್ವೇದೇವಸ್ತಥಾ ದಶ ।
ದಶೈವಾಂಗಿರಸೋ ದೇವಾ ಹ್ಯೇವಂ ದೇವಗಣಾ ನವ ॥ ೫ ॥
ಯೇಷಾಂ ಶಕ್ರಸ್ತು ವೋಽಜಂಬೀ ? ನಾಮ್ನಾ ಶತ್ರುಕ್ಷಯಂಕರಃ ।
ಘೋರಾಸ್ತಥಾಪಿ ಯೇ ತ್ವಾಸನ್ ದೈತ್ಯಾ ಪ ಯಾದಬಾಂಧವಾಃ ॥ ೬ ॥
ತೇಷಾಂ ಬಭೂವ ನೃಪತಿರ್ಹಿರಣ್ಯಾಕ್ಷೋ ಮಹಾಬಲಃ ।
ನೃವರಾಹೇಣ ವಪುಷಾ ತಂ ಜಘಾನ ಹರಿಃ ಪುರಾ ॥ ೭ ॥

ದೈತ್ಯೇಶ್ವರಂ ತಂ ಸುರಸಂಘಭೀಮಂ
ಮಹಾಬಲಂ ಪರ್ವತಮಾತ್ರಕಾಯಂ ।
ಜಘಾನ ಚಕ್ರೇಣ ಪ್ರಸಹ್ಯ ರೂಪಂ ।
ಸತಂ ಸಮಾಸ್ಥಾಯ ವರಾಹಮೀಷಣಂ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಸಪ್ತಮವೈವಸ್ವತಮನ್ವಂತರವರ್ಣನಂನಾಮ
ದ್ವ್ಯಶೀತ್ಯಧಿಕ ಶತತಮೋಽಧ್ಯಾಯಃ

ರಾಗಿರುವರು. ಮತ್ತೆ ಇಬ್ಬರು ಅಶ್ವಿನಿ ದೇವತೆಗಳು, ಹತ್ತುಮಂದಿ ವಿಶ್ವೇದೇವತೆಗಳು, ಹತ್ತುಮಂದಿ ಆಂಗೀರಸರು, ದೇವತೆಗಳು ಹತ್ತುಮಂದಿ. ಈ ಸಕಲ ದೇವಗಣಗಳಿಗೂ ಒಡೆಯನಾದ ಇಂದ್ರನಿಗೆ ವೋಜಂಬಿಯೆಂದು ಹೆಸರು. ಇನ್ನು ಜನ ದೇವತೆಗಳಿಗೂ ಭಯಂಕರ ಬಲಶಾಲಿಗಳಾದ ಅನೇಕ ರಾಕ್ಷಸ ದಾಯಾದಿಗಳಿರುತ್ತಾರೆ. ಇವರಿಗೆಲ್ಲರಿಗೂ ಹಿರಣ್ಯಾಕ್ಷನು ರಾಜನಾಗಿ ದೇವಬ್ರಾಹ್ಮಣ ಹಿಂಸಕನಾಗಿ ಲೋಕವನ್ನು ಬಾಧಿಸುತ್ತಿರುತ್ತಾನೆ ಆಗ ಭಗವಾನ್ ಮಹಾವಿಷ್ಣುವು ವರಾಹಾವತಾರ ಮಾಡಿ ಹಿರಣ್ಯಾಕ್ಷನನ್ನು ಸಂಹರಿಸಿ ಲೋಕವನ್ನು ಕಾಪಾಡಿದನು ಈರೀತಿ ಮಹಾಬಲಶಾಲಿಯೂ ಪರ್ವತದಂತೆ ಮಹಾಶರೀರವುಳ್ಳವನಾಗಿಯೂ ಇದ್ದ ದೇವವಿರೋಧಿಯಾದ ಆ ದೈತ್ಯರಾಜನನ್ನು ಮಹಾವಿಷ್ಣುವು ವರಾಹಾವತಾರಮಾಡಿ ಕೊಂದು ಅವನಿಂದ ಜಲದಲ್ಲಿ ಮುಳುಗಿಸಲ್ಪಟ್ಟಿದ್ದ ಭೂಮಿಯನ್ನು ಮೇಲಕ್ಕೆತ್ತಿ ಉದ್ಧಾರಮಾಡಿದನು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದರೂಪವಾದ ಸಪ್ತಮ ವೈವಸ್ವತ
ಮನ್ವಂತರವರ್ಣನೆಯೆಂಬ ಹೆಸರಿನ ನೂರೆಂಭತ್ತೆರಡನೇ
ಅಧ್ಯಾಯವು ಮುಗಿದುದು

ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ತ್ರ್ಯಶೀತ್ಯಧಿಕಶತತಮೋಽಧ್ಯಾಯಃ ॥

॥ ಶಕ್ರ ಉವಾಚ ॥

ಅಸ್ಮಿನ್ಕಲ್ಪೇ ಮಹಾಭಾಗೇ ಭವಿಷ್ಯಾ ಮನವಸ್ತು ಯೇ ।
ತೇಷಾಂ ಪುತ್ರಾನ್ನೃಷೀನ್ ದೇವಾಂಛಕ್ರಾನ್ದಾಯಾದಬಾಂಧವಾನ್ ॥ ೧ ॥

ತಸ್ಯ ಘಾತಂ ತಥಾ ಕೃಷ್ಣಾತ್ಸರ್ವಮೇತತ್ಪ್ರಕೀರ್ತಯ ।
ಸರ್ವಜ್ಞಕಲ್ಪಾ ಭವತೀ ದಿವ್ಯಜ್ಞಾನಾ ಮತಾ ಮಮ ॥ ೨ ॥

॥ ಶಾಂಬರಾಯಣ್ಯುವಾಚ ॥

ಅಷ್ಟಮಸ್ಯ ಭವಿಷ್ಯಸ್ಯ ಸಾವರ್ಣಸ್ಯ ಮನೋಃ ಸುತಾನ್ ।
ಕಥಯಿಷ್ಯಾಮಿ ತೇ ಶಕ್ರ ಮಹಾಬಲಪರಾಕ್ರಮಾನ್ ॥ ೩ ॥

### ನೂರೆಂಭತ್ತಮೂರನೆಯ ಅಧ್ಯಾಯವು.

೧-೨ ಇಂದ್ರನು ಶಾಂಬರಾಯಣಿಯನ್ನು ಕುರಿತು ಪ್ರಶ್ನೆ ಮಾಡುತ್ತಾನೆ - ಅಮ್ಮಾ ! ಶಾಂಬರಾಯಣಿ ! ನೀನು ಮಹಾತ್ಮಳಮ್ಮ. ಮತ್ತು ನೀನು ಸರ್ವಜ್ಞಳಾಗಿ ಭವಿಷ್ಯದ್ವೃತ್ತಾಂತವನ್ನೆಲ್ಲಾ ಬಲ್ಲವಳಾಗಿರುವಿಯಮ್ಮ ನಿನ್ನ ವಿಷಯದಲ್ಲಿ ನನಗೆ ಬಹಳ ಪೂಜ್ಯಬುದ್ಧಿಯುಂಟಾಗಿದೆ ಇದುವರಿಗೆ ನೀನು ಏಳು ಮನ್ವಂತರಗಳ ವಿಷಯುವನ್ನೂ ನನಗೆ ತಿಳಿಸಿರುತ್ತೀಯೆ. ಇದರಂತೆ ಮುಂದೆ ಬರುವ ಮನ್ವಂತರಗಳ ಚರಿತ್ರೆಯನ್ನೂ ಅಂದರೆ ಆಯಾ ಮನುಗಳ ಮಕ್ಕಳನ್ನೂ, ಋಷಿಗಳನ್ನೂ, ಇಂದ್ರರನ್ನೂ, ಅವರ ದಾಯಾದಿಗಳಾದ ರಾಕ್ಷಸರನ್ನೂ, ಅವರನ್ನು ಸಂಹರಿಸಲಿಕ್ಕಾಗಿ ಮಹಾವಿಷ್ಣುವು ಮಾಡಿದ ಅವತಾರ ಕಥೆಗಳನ್ನೂ ದಯಮಾಡಿ ತಿಳಿಸಮ್ಮ, ತಾಯಿ !

೩ ಶಾಂಬರಾಯಣಿಯು ಇಂದ್ರನನ್ನು ಕುರಿತು ಹೇಳುತ್ತಾಳೆ,—ಎಲೈ

ವಿಜಯುಶ್ಚಾವರೀಂವಾಂಶ್ಚ ನಿರ್ದೋಹಸ್ಸತ್ಯವಾಕ್ಕೃತಿಃ ।
ಚರಿಷ್ಣುಶ್ಚಾಪ್ಯಧೃಷ್ಣುಶ್ಚ ವಾಚಃ ಸಮತಿರೇವ ಚ ॥ ೪ ॥

ಸಾವರ್ಣಸ್ಯ ಮನೋಃ ಪುತ್ರಾನ್ನೃಷೀಂಶ್ಚೈವ ನಿಬೋಧ ಮೇ ।
ಅಶ್ವತ್ಥಾಮಾ ಕೃಪೋ ವ್ಯಾಸೋ ಗಾಲವೋ ದೀಪ್ತಿಮಾನಥ ॥ ೫ ॥

ಋಷ್ಯಶೃಂಗಸ್ತಥಾ ರಾಮ ಋಷಯಃ ಪರಿಕೀರ್ತಿತಾಃ ।
ಸುತಪಾ ಅಮೃತಾಭಾಶ್ಚ ಆತ್ರೇಯಾಶ್ಚ ಗಣಾಸ್ತ್ರಯಃ ॥ ೬ ॥

ಸರ್ವೇ ವಿಂಶತಿಭಿರ್ದೇವಗಣೈರ್ಯುಕ್ತಾ ಮಹಾತ್ಮನಾಂ ।
ಯೇಷಾಮಿಂದ್ರೋ ಭವಿಷ್ಯಸ್ತು ಬಲಿರ್ದಾನವಸತ್ತಮಃ ॥ ೭ ॥

ತ್ವತ್ಕೃತೇ ದೇವದೇವೇನ ಬದ್ಧೋ ಯಸ್ತ್ರಿದಶೇಶ್ವರಃ ।
ವಾಯಾದಾ ಬಾಂಧವಾಸ್ತಸ್ಯ ನ ಭವಿಷ್ಯಂತಿ ವಾಸವ ॥ ೮ ॥

ಶಕ್ರತ್ವಂ ತೇನ ಕರ್ತವ್ಯಂ ಮನ್ವಂತರಮಕಂಟಕಂ ।
ದೇವದೇವಕರನ್ಯಸ್ತಂ ದಾನಮೇತನ್ಮಹಾಸುರಃ ॥ ೯ ॥

---

ದೇವೇಂದ್ರನೇ ! ಮುಂದೆ ಬರಲಿರುವ ಎಂಟನೆಯ ಸಾವರ್ಣನೆಂಬ ಮನುವಿನ ಮಹಾ ಪರಾಕ್ರಮಶಾಲಿಗಳಾದ ಮಕ್ಕಳ ಹೆಸರುಗಳನ್ನು ಹೇಳುತ್ತೇನೆ, ಕೇಳು.

೪-೧೩ ವಿಜಯ, ವರೀವಂತ, ನಿರ್ದೋಹ, ಸತ್ಯವಾಕ್, ಕೃತೀ, ಚರಿಷ್ಣು, ಅಧೃಷ್ಣು, ವಾಚ, ಸಮತಿ, ಇವರೆಲ್ಲರೂ ಸಾವರ್ಣಮನುವಿನ ಮಕ್ಕಳು ಇನ್ನು ಋಷಿಗಳ ಹೆಸರನ್ನು ವಿವರಿಸುತ್ತೇನೆ ಕೇಳು. ಅಶ್ವತ್ಥಾಮ, ಕೃಪ, ವ್ಯಾಸ, ಗಾಲವ, ದೀಪ್ತಿಮಾನ್, ಋಷ್ಯಶೃಂಗ, ಇವರೇ ಸಾವರ್ಣಮನ್ವಂತರದ ಋಷಿಗಳು ಸುತಪ್ಪರೂ ಅಮೃತರೂ, ಆತ್ರೇಯರೂ ಸೇರಿ ಮೂರು ದೇವಗಣಗಳು. ಈ ಮೂವರೂ ಇಪ್ಪತ್ತು ದೇವಗಣಗಳಿಂದೊಡಗೂಡಿರುವರು ಇವರೆಲ್ಲರಿಗೂ ಇಂದ್ರನಾದವನು ದಾನವಶ್ರೇಷ್ಠನಾದ ಬಲಿಚಕ್ರವರ್ತಿಯೆಂಬುದನ್ನು ಜ್ಞಾಪಕದಲ್ಲಿಡು ಇಂದ್ರ ! ಈ ಬಲಿಯ ವಿಚಾರ ನಿನಗೆ ನೆನಪಿದೆಯೋ ? ಅದನ್ನು ಈಗ ಸ್ವಲ್ಪ ನಾನು ನಿನ್ನ ಜ್ಞಾಪಕಕ್ಕೆ ತರುತ್ತೇನೆ ಕೇಳು. ಮಹಾವಿಷ್ಣುವು ನಿನ್ನ ಉದ್ಧಾರಕ್ಕಾಗಿ ಬಲಿಚಕ್ರವರ್ತಿಯು ಯಜ್ಞಮಾಡುವ ಕಾಲದಲ್ಲಿ ಮೂರುಹೆಜ್ಜೆ ದಾನವನ್ನು ಕೇಳಿ, ಅದರಂತೆ ಮೂರುಹೆಜ್ಜೆ ಅಳೆದಾಗ ಬಲಿಯ ಭಕ್ತಿಯನ್ನು ನೋಡಿ ಮೆಚ್ಚಿ ಅವನ ಮನೆ ಬಾಗಿಲನ್ನು ಕಾಯಲು ಒಪ್ಪಿ

ತ್ರೈಲೋಕ್ಯರಾಜಾ ಭವತಿ ಸಾವರ್ಣಸ್ಯಾಂತರೇ ಮನೋಃ ।
ತಸ್ಮಿನ್ಮನ್ವಂತರೇ ಪ್ರಾಪ್ತೇ ಹಿಮಶೈಲಾಲಯೋ ಬಲೀ ॥ ೧೦ ॥

ಭವಿಷ್ಯತಿ ದುರಾಚಾರೋ ನಾನೋಲೋ ನಾಮ ರಾಕ್ಷಸಃ ।
ಬ್ರಹ್ಮಲಬ್ಧವರೋ ರೌದ್ರಸ್ತ್ರೈಲೋಕ್ಯೋತ್ಸಾದನೇ ರತಃ ॥ ೧೧ ॥

ತಂ ವಧಿಷ್ಯತಿ ಧರ್ಮಾತ್ಮಾ ವಿಷ್ಣುರ್ಗರುಡವಾಹನಃ ।
ಚಕ್ರೇಣ ಶತಧಾರೇಣ ಜಗತಾಂ ಹಿತಕಾಮ್ಯಯಾ ॥ ೧೨ ॥

ದಂಷ್ಟ್ರಾಕರಾಲಂ ವಿಕಟೋಗ್ರವೇಷಂ
ನೀಲಾಂಜನಾಭಂ ಭಯದಂ ತ್ರಿಲೋಕೇ ।

---

ಕೊಂದನಯ್ಯ. ಆಗ ಅವನಿಗೆ ಇಂದ್ರಪಟ್ಟವನ್ನನುಗ್ರಹಿಸಿರುವುದರಿಂದ ಸಾವರ್ಣ ಮನ್ವಂತರದಲ್ಲಿ ಇಂದ್ರಪಟ್ಟವು ಬಲಿಚಕ್ರವರ್ತಿಗೆ ದೊರೆಯುವುದೆಂದು ತಿಳಿ. ಇಂದ್ರ! ಎಲ್ಲ ಇಂದ್ರರಿಗೂ ದಾಯಾದಿಗಳುಂಟೆಂದು ನಾನು ಇದುವರೆಗೆ ಹೇಳಿರುವೆನಷ್ಟೆ. ಈ ಬಲಿಗೆ ಮಾತ್ರ ದಾಯಾದಿಗಳ ಪಸರೇ ಇರುವುದಿಲ್ಲ. ಈ ಮನ್ವಂತರ ಕಳೆಯುವ ವರೆಗೂ ಅವನು ಇಂದ್ರಭೋಗವನ್ನನುಭವಿಸುವನು. ಅವನಿಗೆ ದಾಯಾದಿಗಳಾಗಲೀ ಶತ್ರುಗಳಾಗಲೀ ಇರುವುದೇ ಇಲ್ಲ. ಭಗವಂತನಾದ ಮಹಾವಿಷ್ಣುವಿಗೆ ದಾನ ಕೊಟ್ಟ ವರಫಲವಾಗಿ ಒಂದು ಮನ್ವಂತರ ಪೂರ್ತಿಯಾಗಿ ಬಲಿಯು ಇಂದ್ರಪದವಿಯನ್ನನು ಭವಿಸುವುದರಿಂದ ಬಲೀಂದ್ರನೆಂದು ಪ್ರಸಿದ್ಧನಾಗಿದಾನೆ. ಈ ಬಲಿಚಕ್ರವರ್ತಿಯು ಇಂದ್ರಭೋಗವನ್ನನುಭವಿಸಿದಬಳಿಕ ಹಿಮಾಲಯದ ತಪ್ಪಲಿನಲ್ಲಿ ನಾನೋಲನೆಂಬ ರಾಕ್ಷಸನಾಗಿ ಹುಟ್ಟಿ ಬಹಳ ದುರಾಚಾರಿಯಾಗುತ್ತಾನಲ್ಲದೆ ಬ್ರಹ್ಮನಿಂದ ವರವನ್ನು ಪಡೆದುಕೊಂಡು ಆಗ ದೇವಬ್ರಾಹ್ಮಣರನ್ನು ಬಾಧೆಪಡಿಸಲಾರಂಭಿಸುತ್ತಾನೆ. ಆಗ ಮಹಾವಿಷ್ಣುವು ಗರುಡವಾಹನನಾಗಿ ಬಂದು ಲೋಕಸಂರಕ್ಷಣಾರ್ಥವಾಗಿ ಒಂದು ನೂರು ಚೂಪಾದ ಅಲುಗುಳ್ಳ ಚಕ್ರಾಯುಧದಿಂದ ಭಯಂಕರವಾದ ವೇಷವನ್ನು

**ಚಕ್ರೇಣ ದೇವಃ ಪ್ರವಿದಾರ್ಯ ಕರ್ತಾ**
**ಲೋಕಂ ಸಮಗ್ರಂ ಭಯವಿಪ್ರಯುಕ್ತಂ** ॥ ೧೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇಽಷ್ಟಮಸಾವರ್ಣಿಮನ್ವಂತರವರ್ಣನಂನಾಮ ತ್ರ್ಯಶೀತ್ಯಧಿಕ ಶತತಮೋಽಧ್ಯಾಯಃ.**

---

ಧರಿಸಿ ಆದುರಾಚಾರಿಯನ್ನು ಸಂಹರಿಸಿ ಲೋಕಸಂರಕ್ಷಣೆ ಮಾಡುತ್ತಾನೆ ಕೇಳಿದೆಯಾ ಇಂದ್ರ, ಎಂದು ಶಾಂಬರಾಯಣಿಯು ಇಂದ್ರನಿಗೆ ಹೇಳಿದಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದ ಮಾರ್ಕಂಡೇಯ ವಜ್ರಸಂವಾದರೂಪವಾದ ಶಕ್ರ ಶಾಂಬರಾಯಣೀ ಸಂವಾದರೂಪದಲ್ಲಿ ಎಂಟನೇ ಸಾವರ್ಣಿಕ ಮನ್ವಂತರ ವರ್ಣನೆಯೆಂಬ ಹೆಸರಿನ ಒಂದು ನೂರ ಎಂಭತ್ತ ಮೂರನೆಯ ಅಧ್ಯಾಯವು ಮುಗಿದುವು



॥ ಶ್ರೀಃ ॥

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ಚತುಸ್ಸಪ್ತತ್ಯಧಿಕಶತತಮೋಽಧ್ಯಾಯಃ ॥

---

॥ ಶಾಂಬರಾಯಣ್ಯುವಾಚ ॥

ಬ್ರಹ್ಮಪುತ್ರಸ್ಯ ತು ಮನೋರ್ನವಮಸ್ಯ ಸುತಾಂಛೃಣು ।
ಧೃತಿಕೇತುರ್ದೀಪ್ತಿಕೇತುಃ ಪಂಚಹಸ್ತೋ ನಿರಾಕೃತಿಃ ॥ ೧ ॥

ಪೃಥಶ್ರವಾ ಬೃಹದ್ಯುಮ್ನ ಋಚೀಕೋ ಬೃಹತಾಂ ಗಣಃ ।
ಬ್ರಹ್ಮಪುತ್ರಸ್ಯ ತೇ ಪುತ್ರಾ ಋಷಯಶ್ಚ ನಿಬೋಧ ಮೇ ॥ ೨ ॥

ಮೇಧಾತಿಥಿರ್ದ್ಯುತಿಶ್ಚೈವ ಸವನೋ ವಸುರೇವ ಚ ।
ಜ್ಯೋತಿಷ್ಮಾನ್ಹವ್ಯಸತ್ವಾ ಚ ಋಷಯಃ ಪರಿಕೀರ್ತಿತಾಃ ॥ ೩ ॥

---

## ನೂರ ಎಂಭತ್ತನಾಲ್ಕನೆಯ ಅಧ್ಯಾಯವು.

೧-೨ ಶಾಂಬರಾಯಣಿಯು ಇಂದ್ರನೊಡನೆ ಹೇಳುತ್ತಾಳೆ —ಒಂಭತ್ತನೆಯ ಮನುವಾದ ಬ್ರಹ್ಮಪುತ್ರನ ಮಕ್ಕಳ ಹೆಸರನ್ನು ಹೇಳುತ್ತೇನೆ, ಕೇಳು ಧೃತಿಕೇತು, ದೀಪ್ತಿಕೇತು, ಪಂಚಹಸ್ತ, ನಿರಾಕೃತಿ, ಪೃಥುಶ್ರವಾ, ಬ್ರಹದ್ಯುಮ್ನ, ಋಚೀಕ, ಇವರೇ ಆ ಮನುಪುತ್ರರು. ಇನ್ನು ಋಷಿಗಳ ಹಸರನ್ನು ಹೇಳುತ್ತೇನೆ

೩ ಮೇಧಾತಿಥಿ, ದ್ಯುತಿ, ಸವನ, ವಸು, ಜ್ಯೋತಿಷ್ಮಂತ, ಹವ್ಯಸತ್ವ, ಇವರೇ ಬ್ರಹ್ಮಪುತ್ರ ಮನ್ವಂತರದ ಋಷಿಗಳು

ಪಾರಾ ಮರೀಚಿಗರ್ಭಾಶ್ಚ ಸ್ವಧರ್ಮಾಣಶ್ಚ ತೇ ತ್ರಯಃ ।
ಗಣಾ ದ್ವಾದಶಕಾಃ ಪ್ರೋಕ್ತಾ ಯೇಷಾಮಿಂದ್ರೋ ಭವಿಷ್ಯತಿ ॥ ೪ ॥

ವಿಭುರ್ನಾಮ ಮಹಾತೇಜಾಃ ಸರ್ವದೇವೇಶ್ವರೋ ಬಲೀ ।
ದಾಯಾದಾ ಬಾಂಧವಾಸ್ತಸ್ಯ ಯೇ ಭವಿಷ್ಯಂತಿ ಧಾರ್ಮಿಕಾಃ ॥ ೫ ॥

ಕಾಲಕಕ್ಷ ಇತಿ ಖ್ಯಾತಸ್ತೇಷಾಂ ರಾಜಾ ಭವಿಷ್ಯತಿ ।
ತಸ್ಮಿನ್ಮನ್ವಂತರೇ ರಾಜಾ ವಸುನಾಭೋ ಭವಿಷ್ಯತಿ ॥ ೬ ॥

ಪುತ್ರಸ್ತು ಭವಿತಾ ತಸ್ಯ ವಾಸುದೇವೋ ಮಹೀಪತಿಃ ।
ಚಕ್ರವರ್ತೀ ಮಹಾತೇಜಾಃ ಪದ್ಮನಾಭ ಇತಿ ಶ್ರುತಃ ॥ ೭ ॥

ದೇವಾಸುರೇ ತು ಸಂಗ್ರಾಮೇ ಕಾಲಕಾಕ್ಷಂ ರಣೋತ್ಕಟಂ ।
ನರವಧ್ಯಂ ಮಹಾತೇಜಾಃ ಪದ್ಮನಾಭೋ ವಧಿಷ್ಯತಿ ॥ ೮ ॥

ಶರೇಣ ಜಾಂಬೂನದಭೂಷಿತೇನ
ಬ್ರಹ್ಮಾಸ್ತ್ರಯುಕ್ತೇನ ರಣಪ್ರಚಂಡಂ ।

---

೪-೯ ಬಳಿಕ ಆ ಮನ್ವಂತರದ ದೇವಗಣಗಳ ಹೆಸರನ್ನು ಹೇಳುವೆನು ಪಾರರು, ಮರೀಚಿಗರ್ಭರುಗಳು, ಸ್ವಧರ್ಮಾಣರು, ಈರೀತಿ ಮೂರು ಗಣಗಳಲ್ಲದೆ ಇನ್ನೂ ಹನ್ನೆರಡು ದೇವಗಣಗಳುಂಟು ಅವರುಗಳಿಗೆಲ್ಲರಿಗೂ ವಿಭುವೆಂಬುವನು ಇಂದ್ರನಾಗುತ್ತಾನೆ ಇವನು ಸಕಲ ದೇವೇಶ್ವರನಾಗಿ ಬಲಿಷ್ಠನಾಗಿರುತ್ತಾನೆ ಇವನಿಗೆ ಅನೇಕ ಮಂದಿ ದಾಯಾದರಾಗುವರು. ಆದರೆ ಅವರೆಲ್ಲರೂ ಮಹಾಧರ್ಮಾತ್ಮರಾಗಿ ಇರುತ್ತಾರೆ ಅವರೆಲ್ಲರಿಗೂ ಕಾಲಕಕ್ಷನೆಂಬ ರಾಕ್ಷಸನು ದೊರೆಯಾಗುತ್ತಾನೆ ಆ ಮನ್ವಂತರದಲ್ಲಿ ವಸುನಾಭನೆಂಬ ಮತ್ತೊಬ್ಬ ದೊರೆಯಿರುತ್ತಾನೆ. ಅವನ ಮಗ ವಾಸುದೇವ ಇವನೂ ಸಹ ಪ್ರಸಿದ್ಧ ದೊರೆಯಾಗುವನು. ಆಗ ಮಹಾಪರಾಕ್ರಮ ಶಾಲಿಯಾದ ಪದ್ಮನಾಭನೆಂಬುವನು ಚಕ್ರವರ್ತಿಯಾಗುವನು. ಇವರೆಲ್ಲರಿಗೂ ಕಾಲ ಕಕ್ಷ ರಾಕ್ಷಸನಿಗೂ, ಪದ್ಮನಾಭನಿಗೂ ಭಾರೀ ಯುದ್ಧ ನಡೆಯುತ್ತದ ಈ ಭವಿಷ್ಯ

ಹತ್ವಾಽಸುರಂ ಕಾಲಸಮಪ್ರಭಾವಂ
ರಾಜಾ ಸ ಲೋಕಸ್ಯ ಭಯಂ ನಿಹಂತಾ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ತ್ರಯೋದಶರೌಚ್ಯಮನ್ವಂತರವರ್ಣನಂ
ನಾಮ ಚತುರಶೀತ್ಯಧಿಕ ಶತತಮೋಽಧ್ಯಾಯಃ



ಯುದ್ಧಪ್ರಸಂಗದಲ್ಲಿ ಮಹಾನುಭಾವನಾದ ಭಗವಂತನು ಪದ್ಮನಾಭ ರೂಪದಿಂದವತರಿಸಿ ಕಾಲಕನ್ಯಾದಿ ರಾಕ್ಷಸರನ್ನು ಗೆದ್ದು ಲೋಕಕ್ಕೆ ಸಂಭವಿಸಿದ ಭಯವನ್ನು ಪರಿಹಾರ ಮಾಡುತ್ತಾನೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪನಾದ ಒಂಭತ್ತನೆಯದಾದ ಬ್ರಹ್ಮಪುತ್ರ
ಮನ್ವಂತರ ವರ್ಣನೆಯೆಂಬ ಹೆಸರಿನ ಒಂದು
ನೂರೆಂಭತ್ತ ನಾಲ್ಕನೇ ಅಧ್ಯಾಯವು
ಮುಗಿದುದು



॥ ಶ್ರೀಃ ॥

---

## ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಪಂಚಾಶೀತ್ಯಧಿಕಶತತಮೋಽಧ್ಯಾಯಃ ॥

---

॥ ಶಾಂಬರಾಯಣ್ಯುವಾಚ ॥

ಧರ್ಮಪುತ್ರಸ್ಯ ತು ಮನೋರ್ದಶಮಸ್ಯ ಸುತಾಂಚ್ಛೃಣು ।
ಸುಕ್ಷೇತ್ರ ಉತ್ತಮೌಜಾಶ್ಚ ಭೂರಿಶೋಣಶ್ಚ ವೀರ್ಯವಾನ್ ॥ ೧ ॥

ಶತಾನೀಕೋ ನಿಮಿರ್ಮಿತ್ರೋ ವೃಷಸೇನೋ ಜಯದ್ರಥಃ ।
ಭೂರಿದ್ಯುಮ್ನಃ ಸುವರ್ಮಾ ಚ ಧರ್ಮಪುತ್ರಮನೋಃ ಸುತಾಃ ॥ ೨ ॥

ಆಪೋಮೂರ್ತಿರ್ಹವಿಷ್ಮಾಂಶ್ಚ ಸತ್ಪತಿಶ್ಚಾವ್ಯಯಸ್ತಥಾ ।
ನಾಭಾಗಃ ಪ್ರಮಿತಶ್ಚೈವ ಸೌರಭಾ ಋಷಯಸ್ತ್ವಥಾ ॥ ೩ ॥

---

### ನೂರ ಎಂಭತ್ತೈದನೆಯ ಅಧ್ಯಾಯವು.

೧-೨ ಶಾಂಬರಾಯಣಿಯು ಇಂದ್ರನೊಡನೆ ಹೇಳುತ್ತಾಳೆ —ಹತ್ತನೆಯ ಮನುವಿಗೆ ಧರ್ಮಪುತ್ರನೆಂದು ಹೆಸರು ಆ ಮನುವಿನ ಮಕ್ಕಳುಗಳ ಹೆಸರನ್ನು ಹೇಳುತ್ತೇನೆ, ಕೇಳು. ಸುಕ್ಷೇತ್ರ, ಉತ್ತಮೌಜ, ಭೂರಿಶೋಣ, ಶತಾನೀಕ, ನಿಮಿಮಿತ್ರ, ವೃಷಸೇನ, ಜಯದ್ರಥ, ಭೂರಿದ್ಯುಮ್ನ, ಸುವರ್ಮ ಇವರಿಷ್ಟು ಮಂದಿಯೂ ಧರ್ಮಪುತ್ರ ಮನುವಿನ ಮಕ್ಕಳು.

೩. ಮತ್ತು ಆ ಮುಂದೆ ಬರುವ ಹತ್ತನೆಯ ಮನ್ವಂತರದ ಋಷಿಗಳ ಹೆಸರು

ಪ್ರಾಣಾಖ್ಯಾಃ ಶತಸಂಖ್ಯಾಶ್ಚ ದೇವತಾನಾಂ ಗಣಾಸ್ತಥಾ ।
ಭವಿತಾ ತಸ್ಯ ಭವಿತಾ ಶಾಂತಿರಿಂದ್ರಃ ಪ್ರತಾಪವಾನ್ ॥ ೪ ॥

ದಾಯಾದಾ ಬಾಂಧವಾಸ್ತಸ್ಯ ಭವಿಷ್ಯಂತ್ಯಸುರಾಶ್ಚ ಯೇ ।
ತೇಷಾಂ ಚ ಭವಿತಾ ರಾಜಾ ವಾಲೀ ನಾಮ ಮಹಾಸುರಃ ॥ ೫ ॥

ದ್ಯೋತಯಿಷ್ಯತಿ ತಂ ವಿಷ್ಣುರ್ಗದಯಾ ಭೀಮವೇಗಯಾ ।
ದೇವಾಸುರೇ ತು ಸಂಗ್ರಾಮೇ ದೇವಾನಾಂ ಹಿತಕಾಮ್ಯಯಾ ॥ ೬ ॥

ಗದಾನಿಪಾತಾಭಿಹತೇ ಸುರೇಂದ್ರೇ
ಮಹಾಬಲೇ ದೇವವರೇಣ ತೇನ ।

ಗಳೇನೆಂದರೆ —ಅಪೋಮೂರ್ತಿ, ಹವಿಷ್ಮಂತ, ಸತ್ಪತಿ, ಅವ್ಯಯ, ನಾಭಾಗ, ಪ್ರವಿತ, ಸೌಭರ, ಇವರೇ ಆ ಋಷಿಗಳು.

೪. ಆ ಮನುವಿನ ಕಾಲದಲ್ಲಿ ಪ್ರಾಣರೇ ಮೊದಲಾದ ದೇವತಾಗಣರು ದೇವ ಲೋಕದಲ್ಲಿ ರಾರಾಜಿಸುವರು ಅವರುಗಳಿಗೆಲ್ಲಾ ಒಡೆಯನಾದ ಇಂದ್ರನಾರೆಂದರೆ, ಮಹಾಪ್ರತಾಪಶಾಲಿಯಾದ ಶಾಂತಿಯೆಂಬುವನೆಂದು ತಿಳಿ

೫. ದೇವತೆಗಳ ಸಂಖ್ಯೆ ಹೆಚ್ಚಿದಂತೆ ಅವರ ದಾಯಾದಿಗಳಾದ ರಾಕ್ಷಸರ ಸಂಖ್ಯೆಯೂ ಸಹ ಆ ಕಾಲಕ್ಕೆ ಅಪರಿಮಿತವಾಗಿ ಬೆಳೆಯುವುದು ಆ ಮುಂದ ಆ ಮನ್ವಂತರದಲ್ಲಿ ದೇವತೆಗಳ ಜ್ಞಾತಿಗಳಿಗೆಲ್ಲಾ ವಾಲಿಯೆಂಬ ಮಹಾಸುರನು ರಾಜನಾಗಿ ರಾಜ್ಯವಾಳುವನು.

೬-೭. ಈ ವಾಲೀನಾಮಕ ಮಹಾಸುರನು ಲೋಕಕಂಟನಾಗಿ ಪರಿಣಮಿಸಿದ ಕಾಲದಲ್ಲಿ ದೇವತೆಗಳ ಸಹಾಯಕ್ಕಾಗಿ ಮಹಾವಿಷ್ಣುವು ದೇವಾಸುರ ಸಂಗ್ರಾಮದಲ್ಲಿ

ತ್ರೈಲೋಕ್ಯಮೇತದ್ಭವಿತಾ ಸಮಗ್ರಂ
ವಿನಷ್ಟದೋಷಂ ಸುರವಿಪ್ರಜುಷ್ಟಂ ॥ ೭ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ಶಕ್ರಶಾಂಬರಾಯಣೀ ಸಂವಾದೇ ದಶಮಧರ್ಮಪುತ್ರಮನ್ವಂತರವರ್ಣನಂನಾಮ ಪಂಚಾಶೀತ್ಯಧಿಕ ಶತತಮೋಽಧ್ಯಾಯಃ**

---

ಆ ವಾಲಿಯನ್ನು ತನ್ನ ಕೌಮೋದಕೀನಾಮಕ ಗದೆಯಿಂದ ಸದೆಬಡಿದು ಕೊಂದು ಮೂರು ಲೋಕದ ಕಷ್ಟವನ್ನೂ ತಪ್ಪಿಸುತ್ತಾನೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಹತ್ತನೆಯ ಧರ್ಮಪುತ್ರ ಮನ್ವಂತರ ವರ್ಣನವೆಂಬ ಹೆಸರಿನ ಒಂದು ನೂರೆಂಭತ್ತೈದನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಷಡಶೀತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ರುದ್ರಪುತ್ರಸ್ಯ ತೇ ಪುತ್ರಾನ್ವಕ್ಷ್ಯಾಮ್ಯೇಕಾದಶಸ್ಯ ತು ।
ಧರ್ಮನಿತ್ಯಾನ್ಮಹಾಭಾಗಾಂಸ್ತ್ರೈಲೋಕ್ಯಸ್ಯ ಪರಾಯಣಾನ್ ॥ ೧ ॥

ಸರ್ವತರ್ಗಃ ಸುಶರ್ಮಾ ಚ ಸೇನಾನೀಕಃ ಪುರೋದ್ಧತಃ ।
ಕ್ಷೇಮಧನ್ವಾ ದೃಢೇಂದ್ರಶ್ಚ ಚಾದರ್ಶಃ ಪುಂಡ್ರಕಸ್ತಥಾ ॥ ೨ ॥

### ನೂರ ಎಂಭತ್ತಾರನೆಯ ಅಧ್ಯಾಯವು

೧ ಇಂದ್ರನನ್ನು ಕುರಿತು ಶಾಂಬರಾಯಣಿಯು ಮತ್ತೂ ಹೇಳಿದವೇನೆಂದರೆ ಎಲೈ ದೇವೇಂದ್ರನೆ! ಮುಂದಿನ ಹನ್ನೊಂದನೆಯ ಮನುವಿನ ವೃತ್ತಾಂತವನ್ನು ಹೇಳುವೆನು, ಕೇಳು ಹನ್ನೊಂದನೆಯ ಮನುವಿಗೆ ರುದ್ರಪುತ್ರನೆಂದು ಹೆಸರು, ಆತನ ಮಕ್ಕಳು ಎಂತಹ ಮಹಾತ್ಮರು, ಬಲ್ಲೆಯಾ! ಧರ್ಮನಿತ್ಯರು, ಮಹಾನುಭಾವರು, ತ್ರಿಲೋಕ ರಕ್ಷಣೆಯಲ್ಲೂ, ಹಿತದಲ್ಲೂ ಸರ್ವದಾ ಆಸಕ್ತರಾದ ಆ ಪುಣ್ಯಾತ್ಮರ ಪ್ರಾತಃಸ್ಮರಣೀಯವಾದ ಹೆಸರುಗಳನ್ನು ಈಗ ಹೇಳುತ್ತೇನೆ, ಕೇಳು.

೨-೪ ಸರ್ವತರ್ಗ, ಸುಶರ್ಮ, ಸೇನಾನೀಕ, ಪುರೋದ್ಧತ, ಕ್ಷೇಮಧನ್ವಾ, ದೃಢೇಂದ್ರ, ಆದರ್ಶ, ಪುಂಡ್ರಕ, ಇವರಿಷ್ಟು ಮಂದಿಯೂ ಮನುಪುತ್ರರು ಇನ್ನು

ಮನುಪುತ್ರಾಃ ಸ್ಮೃತಾ ಹ್ಯೇತೇ ಋಷಯಶ್ಚ ನಿಬೋಧ ಮೇ ।
ಹವಿಷ್ಮಾಂಶ್ಚ ವಪುಷ್ಮಾಂಶ್ಚ ವರುಣಾಬ್ಧಿಶ್ಚ ನಿಸ್ತರಃ ॥ ೩ ॥

ವಿಷ್ಣುಶ್ಚೈವಾಗ್ನಿತೇಜಾಶ್ಚ ಋಷಯಃ ಸಪ್ತ ಕೀರ್ತಿತಾಃ ।
ನಿರ್ಮಧ್ಯಾರಥಯಶ್ಚೈವ ಕಾಮಗಾಶ್ಚ ಗಣಾಸ್ತ್ರಯಃ ॥ ೪ ॥

ತ್ರಿಂಶತ್ತ್ರಿಂಶತ್ತಥಾ ದೇವಾ ಏಕೈಕಸ್ಮಿನ್ಗಣೇ ಸ್ಮೃತಾಃ ।
ತೇಷಾಮಿಂದ್ರೋ ವೃಷೋ ನಾಮ ಭವಿಷ್ಯತಿ ಮಹಾಬಲಃ ॥ ೫ ॥

ದಾಯಾದಾ ಬಾಂಧವಾಶ್ಚೈವ ಭವಿಷ್ಯಂತಿ ಸುರಾಶ್ಚ ಯೇ ।
ತೇಷಾಂ ತು ಭವಿತಾ ರಾಜಾ ದಶಗ್ರೀವಃ ಪ್ರತಾಪವಾನ್ ॥ ೬ ॥

ಘಾತಯಿಷ್ಯತಿ ತಂ ವಿಷ್ಣುಸ್ತ್ರೈಣಂ ರೂಪಮುಪಾಶ್ರಿತಃ ।
ಶೂಲಾಗ್ರೇಣ ವಿನಿರ್ಭಿದ್ಯ ರಣೇ ದೇವಾಸುರೇ ತದಾ ॥ ೭ ॥

ತಮವಧ್ಯಂ ದುರಾಧರ್ಷಂ ಪುರುಷಾಣಾಂ ಸ್ವಯಂಭುವಾ ।
ಗತಂ ತಪಃ ಪ್ರಭಾವೇ ಸಾ ವಿಷ್ಣುಸ್ತಂ ಘಾತಯಿಷ್ಯತಿ ॥ ೮ ॥

---

ಋಷಿಗಳ ಹೆಸರುಗಳನ್ನು ಕೇಳು ಹವಿಷ್ಮಂತ, ವಪುಷ್ಮಂತ, ವರುಣಾಬ್ಧಿ, ನಿಸ್ತರ, ವಿಷ್ಣು, ಅಗ್ನಿನೇತ್ರ, ಇವರುಗಳೇ ಆಗಿನ ಋಷಿಗಳು, ಆ ಕಾಲದ ದೇವಗಣಗಳಾರೆಂಬುವನ್ನು ಕೇಳು ನಿರ್ಮಧ್ಯರು, ರಥಿಗಳು, ಕಾಮಗರು—ಈ ಒಂದೊಂದು ಗಣಕ್ಕೂ ಮೂವತ್ತು ಮೂವತ್ತು ಉಪಗಣಗಳಿವೆಯೆಂದು ತಿಳಿದುಕೋ

೫-೮ ದೇವಗಣಗಳಿಗೆಲ್ಲಾ ಒಡೆಯನಾದ ಇಂದ್ರನಿಗೆ ವೃಷನೆಂದು ಹೆಸರು ಈ ದೇವತೆಗಳಿಗೆ ದಾಯಾದಬಾಂಧವರಾದ ರಾಕ್ಷಸರ ಒಡೆಯನು ದಶಗ್ರೀವ ಆ ದಶಗ್ರೀವನನ್ನು ಮಹಾವಿಷ್ಣುವು ಹೆಂಗಸಿನ ರೂಪವನ್ನು ಧರಿಸಿ ದೇವಾಸುರರ ಯುದ್ಧದಲ್ಲಿ ಶೂಲದ ತುದಿಯಿಂದ ಚುಚ್ಚಿಕೊಲ್ಲುತ್ತಾನೆ ಈ ದಶಗ್ರೀವನು ಗಂಡಸರಿಂದ ಮರಣವಾಗಬಾರದೆಂದು ಬ್ರಹ್ಮನಿಂದ ವರವನ್ನು ಪಡೆಯುವವನಾದುದರಿಂದ

ನೀಲೋತ್ಪಲಾಭಂ ತಪನೀಯವರ್ಣಂ
ಸುವೃತ್ತಜಾನೂರುಯುಗಂ ಸ್ವರೂಪಂ ।
ರೂಪಂ ಸ್ತ್ರಿಯಾಶ್ಚಾರುತರಂ ಸ ಕೃತ್ವಾ
ಸುರಾರಿಮುಗ್ರಂ ಸಹಸಾ ರಿಹಂತಾ　॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರ ಶಾಂಬರಾಯಣೀಸಂವಾದೇ ಏಕಾದಶ
ಮನ್ವಂತರ ವರ್ಣನಂ ನಾಮ ಷಡಶೀತ್ಯಧಿಕ ಶತತಮೋಽಧ್ಯಾಯಃ

---

ಮಹಾವಿಷ್ಣುವು ಪರಮಸುಂದರವಾದ ಹೆಂಗಸಿನ ಆಕಾರದಿಂದ ಅವನನ್ನು ಕೊಲ್ಲುತ್ತಾನೆ

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಶಕ್ರಶಾಂಬರಾಯಣೀ ಸಂವಾದ
ರೂಪವಾದ ಏಕಾದಶ ಮನ್ವಂತರ ವರ್ಣನವೆಂಬ
ಹೆಸರಿನ ಒಂದು ನೂರೆಂಭತ್ತಾರನೆಯ
ಅಧ್ಯಾಯ ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಸಪ್ತಾಶೀತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ಮನೋಸ್ತ್ವಂ ದಕ್ಷಪುತ್ರಸ್ಯ ದ್ವಾದಶಸ್ಯಾತ್ಮಜಾಂ ಛೃಣು ।
ದೇವವಾನುಪದೇವಶ್ಚ ದೇವಶ್ರೇಷ್ಠೋ ವಿದೂರಥಃ ॥ ೧ ॥

ಮಿತ್ರವಾನ್ಮಿತ್ರದೇವಶ್ಚ ಮಿತ್ರಸೇನಶ್ಚ ವೀರ್ಯವಾನ್ ।
ಮಿತ್ರಬಾಹುಃ ಸುವರ್ಚಾಶ್ಚ ದಕ್ಷಪುತ್ರಮನೋಃ ಸುತಾಃ ॥ ೨ ॥

ಸತ್ತಮೋದ್ಯೌದ್ಯುತಿಶ್ಚೈವ ತಪನಃ ಸುತಪಾಸ್ತಥಾ ।
ತಪೋರತಿಸ್ತಪಸ್ವೀ ಚ ಋಷಯಃ ಸಪ್ತ ಕೀರ್ತಿತಾಃ ॥ ೩ ॥

### ನೂರ ಎಂಭತ್ತೇಳನೆಯ ಅಧ್ಯಾಯವು.

೧-೨ ಶಾಂಬರಾಯಣಿಯು ಇಂದ್ರನೊಡನೆ ಹೇಳುತ್ತಾಳೆ — ಎಲೈ ಇಂದ್ರನೇ! ಹನ್ನೆರಡನೆಯ ಮನುವಾದ ದಕ್ಷಪುತ್ರನೆಂಬ ಮನುವಿನ ಮಕ್ಕಳ ಹೆಸರನ್ನು ಹೇಳುತ್ತೇನೆ, ಕೇಳು, ದೇವವಂತ, ಉಪದೇವ, ದೇವಶ್ರೇಷ್ಠ, ವಿದೂರಥ, ಮಿತ್ರವಂತ, ಮಿತ್ರದೇವ, ಮಿತ್ರಸೇನ, ಮಿತ್ರಬಾಹು, ಸುವರ್ಚ, ಇವರೆಲ್ಲರೂ ದಕ್ಷಪುತ್ರ ಮನುವಿನ ಮಕ್ಕಳು

೩-೪ ದಕ್ಷಪುತ್ರ ಮನುವಿನಕಾಲದ ಮಹರ್ಷಿಗಳ ಹೆಸರನ್ನು ಹೇಳುತ್ತೇನೆ, ಕೇಳು ಸತ್ತಮ, ದ್ಯೌ, ದ್ಯುತಿ, ತಪನ, ಸುತಪ, ತಪೋರತಿ, ತಪಸ್ವೀ ಈ ಏಳು

ಸುಶರ್ಮಾಣಃ ಸುತಪಸೋ ಹರಿತಾ ರೋಹಿತಸ್ತಥಾ ।
ಸುತಾರಾಖ್ಯಾ ಗಣಾಃ ಪಂಚ ಪ್ರತ್ಯೇಕಂ ದಶಕೋ ಗಣಃ ॥ ೪ ॥

ಋತಧಾಮಾ ಚ ಧರ್ಮಾತ್ಮಾ ತೇಷಾಮಿಂದ್ರಃ ಪ್ರತಾಪವಾನ್ ।
ದಾಯಾದಬಾಂಧವಾಸ್ತಸ್ಯ ಭವಿಷ್ಯಂತ್ಯಸುರಾಶ್ಚ ಯೇ ॥ ೫ ॥

ತೇಷಾಂ ಚ ಭವಿತಾ ರಾಜಾ ನರಕೋ ನಾಮ ನಾಮತಃ ।
ಸ್ತ್ರೀಪುಂಸೋಃ ಸತ್ವವಧ್ಯಶ್ಚ ವರದಾನಾತ್ಸ್ವಯಂಭುವಃ ॥ ೬ ॥

ಹರಿರ್ನಪುಂಸಕೋ ಭೂತ್ವಾ ಘಾತಯಿಷ್ಯತಿ ತಂ ತದಾ ॥ ೭ ॥

ದೇವಾಂತಕಂ ಕಾಲಸಮಪ್ರಭಾವಂ
ಮಹಾಸುರಂ ಕ್ಲೀಬವಪುರ್ಮಹಾತ್ಮಾ ।

---

ಮುಂದಿಯೂ ಆ ಮನುವಿನ ಕಾಲದ ಋಷಿಪ್ರವರರು ಆ ಕಾಲದ ದೇವಗಣಗಳು ಐದು ಸುಶರ್ಮಾಣರು, ಸುತಪಸರು, ಹರಿತರು, ರೋಹಿತರು, ಸುತಾರರೆಂದು ಐದು ದೇವತಾಗಣಗಳು ಆ ಐದಕ್ಕೂ ಬೇರೆಬೇರೆಯಾಗಿ ಹತ್ತು ಹತ್ತು ದೇವಗಣಗಳಾಗುವುವು ಆ ಎಲ್ಲಾ ದೇವತೆಗಳಿಗೂ ಋತಧಾಮನೆಂಬುವನು ರಾಜನಾಗಿ ಇಂದ್ರಪಟ್ಟಕ್ಕೆ ಬರುವನು. ಅವನಿಗೆ ಅನೇಕ ಮಂದಿ ರಾಕ್ಷಸರು ದಾಯಾದಿಗಳಾಗಿರುವರು ಆ ರಾಕ್ಷಸರಿಗೆಲ್ಲಾ ರಾಜನಾಗುವವನಿಗೆ ನರಕಾಸುರನೆಂದು ಹೆಸರು ಅವನು ಗಂಡಸರಿಂದಾಗಲೀ ಹೆಂಗಸರಿಂದಾಗಲೀ ಮರಣವಾಗಕೂಡದೆಂದು ವರವನ್ನು ಬ್ರಹ್ಮನಿಂದ ಪಡೆಯುವವನಾದುದರಿಂದ ಮಹಾವಿಷ್ಣುವು ಆ ನರಕಾಸುರನನ್ನು ನಪುಂಸಕ

**ನಿಹತ್ಯ ತಂ ಲೋಕಮಿದಂ ಸಮಗ್ರಂ**
**ಭೀತ್ಯಾ ವಿಹೀನಂ ಭಗವಾನ್ಸಕರ್ತಾ ॥ ೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ ವಜ್ರಸಂವಾದೇ ದ್ವಾದಶಸ್ಯ ದಕ್ಷಪುತ್ರಸ್ಯ ಮನೋರ್ವಂಶಾನು ಕೀರ್ತನಂನಾಮ ಸಪ್ತಾಶೀತ್ಯಧಿಕ ಶತತಮೋಽಧ್ಯಾಯಃ**

---

ರೂಪದಿಂದ ಅವತರಿಸಿ ಅವನನ್ನು ಸಂಹರಿಸಿ ಲೋಕಕಲ್ಯಾಣವನ್ನುಂಟುಮಾಡುವನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಹನ್ನೆರಡನೆಯ ದಕ್ಷಪುತ್ರ ಮನುವಿನ
ವಂಶಾನುವರ್ಣನವೆಂಬ ಹೆಸರಿನ ಒಂದು
ನೂರೆಂಭತ್ತೇಳನೆಯ ಅಧ್ಯಾಯವು
ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಅಷ್ಟಾಶೀತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ತ್ರಯೋದಶಸ್ಯ ರೌಚ್ಯಸ್ಯ ಮನೋಃ ಪುತ್ರಾನ್ನಿಬೋಧ ಮೇ ।
ಚಿತ್ರಸೇನೋ ವಿಚಿತ್ರಶ್ಚ ನಯೋ ಧರ್ಮಭೃತೋ ಧೃತಿಃ ॥ ೧ ॥

ಸುನೇತ್ರೋ ವೃಕ್ಷವೃದ್ಧಿಶ್ಚ ಸುನಯೋ ಧರ್ಮಯೋ ದೃಢಃ ।
ರೌಚ್ಯಸ್ಯೈತೇ ಮನೋಃ ಪುತ್ರಾಃ ಶೃಣುಷ್ವ ಋಷಯೋ ಮಮ ॥ ೨ ॥

ಧೃತಿಮಾನವ್ಯಯಶ್ಚೈವ ನಿಃಪ್ರಕೋಪೋ ನಿರುತ್ಸುಕಃ ।
ನಿರ್ಮಾಣಸ್ತತ್ತ್ವದರ್ಶೀ ಚ ದವಯಾಯತ ಕೀರ್ತಿತಾಃ ॥ ೩ ॥

---

### ನೂರ ಎಂಭತ್ತೆಂಟನೆಯ ಅಧ್ಯಾಯವು.

೧-೨ ಇಂದ್ರ! ಹದಿಮೂರನೆಯ ರೌಚ್ಯ ಮನುವಿನ ಮಕ್ಕಳ ಹೆಸರನ್ನು ಹೇಳುತ್ತೇನೆ, ಕೇಳು ಚಿತ್ರಸೇನ, ವಿಚಿತ್ರ, ನಯ, ಧರ್ಮಭೃತ, ಧೃತಿ, ಸುನೇತ್ರ, ವೃಕ್ಷವೃದ್ಧಿ, ಸುನಯ, ಧರ್ಮಯ, ದೃಢ ಇವರುಗಳೆಲ್ಲರೂ ರೌಚ್ಯ ಮನುವಿನ ಮಕ್ಕಳು ಇನ್ನು ಋಷಿಗಳ ಹೆಸರನ್ನು ಕೇಳು.

೩-೪ ಧೃತಿಮಂತ, ಅವ್ಯಯ, ನಿಃಪ್ರಕೋಪ, ನಿರುತ್ಸಕ, ನಿರ್ಮಾಣ, ತತ್ವದರ್ಶೀ, ರವ, ಯಾಯತ, ಕೀರ್ತಿತ, ಇವರೆಲ್ಲರೂ ಋಷಿಗಳು ಆ ಕಾಲದ ದೇವತಾಗಣಗಳು ಮೂರು ಸುತ್ರಾಮಾಣರು, ಸುಧರ್ಮಾಣರು, ಶುಭಕರ್ಮಾಣ ರಂದು ಅವರ ಹೆಸರುಗಳು

ಸುತ್ರಾಮಾಣಃ ಸುಧರ್ಮಾಣಃ ಶುಭಕರ್ಮಾಣ ಏವ ಚ ।
ಏತೇ ಶಕ್ರ ತದಾ ಪ್ರೋಕ್ತಾ ದೇವತಾನಾಂ ಗಣಾಸ್ತ್ರಯಃ ॥ ೪ ॥

ಏಕೈಕಸ್ಮಿನ್ಗಣೇ ದೇವಾ ಏಕಾದಶ ತದಾ ಶುಭಾಃ ।
ದೇವೇಂದ್ರಶ್ಚ ತದಾ ತೇಷಾಂ ಭವಿಷ್ಯತಿ ಬೃಹಸ್ಪತಿಃ ॥ ೫ ॥

ದಾಯಾದಾ ಬಾಂಧವಾಸ್ತಸ್ಯ ಯೇ ಭವಿಷ್ಯಂತಿ ವಾಸವ ।
ಟಿಟ್ಟಿಭೋ ನಾಮ ದುಷ್ಟಾತ್ಮಾ ತೇಷಾಂ ರಾಜಾ ಭವಿಷ್ಯತಿ ॥ ೬ ॥

ತಸ್ಯಾಪಿ ಭವಿತಾ ಮೃತ್ಯುರ್ದೇವದೇವಾಜ್ಜನಾರ್ದನಾತ್ ।
ಮಾಯೂರೇಣ ಚ ರೂಪೇಣ ಸತತಂ ಪನ್ನಗಾಶಿನಾ ॥ ೭ ॥

ಸ ತು ದೇವಾಸುರೇ ಯುದ್ಧೇ ಸರ್ಪರೂಪೇಣ ದುರ್ಮತಿಃ ।
ಯುದ್ಧಂ ಕೃತ್ವಾ ನಿರುತ್ಸಾಹಾನ್ಸರ್ವಾನ್ ದೇವಗಣಾಂಸ್ತಥಾ ॥ ೮ ॥

ನಿಷ್ಪ್ರಯತ್ನೇಷು ದೇವೇಷು ಮಾಯೂರಂ ರೂಪಮಾಶ್ರಿತಃ ।
ಘಾತಯಿಷ್ಯತಿ ತಂ ದುಷ್ಟಂ ದೇವದೇವೋ ಜನಾರ್ದನಃ ॥ ೯ ॥

---

೫ ಮೂರು ಗಣಕ್ಕೂ ಒಂದೊಂದಕ್ಕೆ ಹನ್ನೊಂದು ಹನ್ನೊಂದು ಗಣಗಳಾಗುವುವು ಅವರುಗಳಿಗೆಲ್ಲಾ ಬೃಹಸ್ಪತಿಯು ರಾಜನಾಗಿ ದೇವೇಂದ್ರಪಟ್ಟವನ್ನೇರುವನು.

೬-೧೦ ಆ ಬೃಹಸ್ಪತಿನಾಮಕ ಮಹೇಂದ್ರನಿಗೆ ಅನೇಕ ಜನ ರಾಕ್ಷಸರು ದಾಯಾದಿಗಳಾಗಿ ಹಿಂಸಿಸುತ್ತಿರುವರು ಇವರುಗಳ ರಾಜನ ಹೆಸರು ಟಿಟ್ಟಿಭಾಸುರರು ಇವನನ್ನು ಮಹಾವಿಷ್ಣುವು ನವಿಲಿನ ಅವತಾರವನ್ನು ತಾಳಿ ಸಂಹರಿಸುವನು ದೇವತೆಗಳು ಯಾವ ಪ್ರಯತ್ನವೂ ಇಲ್ಲದೆ ಸುಮ್ಮನೆ ಇದ್ದಾಗ ಈ ಟಿಟ್ಟಿಭನು ದೇವತೆಗಳ ಮೇಲೆ ಸರ್ಪರೂಪದಿಂದ ಕೈಮಾಡುವನು ಆಗ ಪರಮಾತ್ಮನು ನವಿಲಿನ

ಮಹಾಕಪಾಲಃ ಸಶಿಖೀ ಮಹಾತ್ಮಾ
ಪ್ರಬುದ್ಧನೀಲೋತ್ಪಲಚಾರುಕಂಠಃ ।
ತಂ ದಾನವಂ ತತ್ರ ರಣೇ ಪ್ರಸಹ್ಯ
ಹತ್ವಾ ತ್ರಿಲೋಕೀಂ ಮುದಿತಾಂ ಹಿ ಕರ್ತಾ ॥ ೧೦ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ
ಮಾರ್ಕಂಡೇಯ ವಜ್ರಸಂವಾದೇ ತ್ರಯೋದಶರೌಚ್ಯ
ಮನ್ವಂತರವರ್ಣನೋನಾಮಾಷ್ಟಾಶೀತ್ಯಧಿಕ
ಶತತಮೋಽಧ್ಯಾಯಃ



ಆಕಾರದಿಂದ ಆ ಸರ್ಪರೂಪೀ ದೈತ್ಯಭಾಸುರನನ್ನು ಕೊಂದು ಮೂರು ಲೋಕವನ್ನೂ ಕಾಪಾಡುವನು.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದ
ರೂಪದಲ್ಲಿ ಹದಿಮೂರನೆಯ ರೌಚ್ಯಮನ್ವಂತರ ವರ್ಣನ
ರೂಪವಾದ ಒಂದುನೂರ ಎಂಭತ್ತೆಂಟನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕೋನ ನವತ್ಯಧಿಕಶತತಮೋಽಧ್ಯಾಯಃ ॥

॥ ಶಾಂಬರಾಯಣ್ಯುವಾಚ ॥

ಚತುರ್ದಶಸ್ಯ ಭೌತ್ಯಸ್ಯ ಶೃಣು ಪುತ್ರಾನ್ಮನೋರ್ಮಮ ।
ತರಂಗಭೀರಹಿರ್ಬುಧ್ನ್ಯಸ್ತರಸ್ವಾನುಗ್ರ ಏವ ಚ ॥ ೧ ॥

ಅಭಿಮಾನೀ ಪ್ರವೀರಶ್ಚ ಜಿಷ್ಣುಃ ಸಂಕ್ರಂದನಸ್ತಥಾ ।
ತೇಜಸ್ವೀ ಸುಲಭಶ್ಚೈವ ಭೌತ್ಯಸ್ಯೈತೇ ಮನೋಃ ಸುತಾಃ ॥ ೨ ॥

ಅಗ್ನೀಧ್ರಶ್ಚಾತಿಬಾಹುಶ್ಚ ಮಾಗಧಶ್ಚ ತಥಾ ಶುಚಿಃ ।
ಅಜಿತೋ ಯುಕ್ತಗೋಶಕ್ಯ ಋಷಯಃ ಸಪ್ತ ಕೀರ್ತಿತಾಃ ॥ ೩ ॥

### ನೂರ ಎಂಭತ್ತೊಂಭತ್ತನೆಯ ಅಧ್ಯಾಯವು.

೧-೨ ಹದಿನಾಲ್ಕನೇ ಮನುವಾದ ಭೌತ್ಯಮನುವಿನ ಮಕ್ಕಳ ಹೆಸರನ್ನು ಹೇಳುತ್ತೇನೆ, ಕೇಳು. ತರಂಗಭಿ, ಅಹಿರ್ಬುಧ್ನ್ಯ, ತರಸ್ವಂತ, ಉಗ್ರ, ಅಭಿಮಾನೀ, ಪ್ರವೀರ, ಜಿಷ್ಣು, ಸಂಕ್ರಂದನ, ತೇಜಸ್ವೀ, ಸುಲಭ, ಇವರೆಲ್ಲರೂ ಭೌತ್ಯಮನುವಿನ ಮಕ್ಕಳು.

೩ ಅಗ್ನೀಧ್ರ, ಅತಿಬಾಹು, ಮಗಧ, ಶುಚಿ, ಅಜಿತ, ಯುಕ್ತಗ, ಶಕ್ಯ, ಈ ಏಳು ಮಂದಿಯೂ ಆ ಮನುವಿನ ಕಾಲದ ಋಷಿಗಳು.

ಚಾಕ್ಷುಷಾಶ್ಚ ಕನಿಷ್ಠಾಶ್ಚ ಪವಿತ್ರಾ ಭಜಿರಾಸ್ತಥಾ ।
ವಯೋವೃದ್ಧಾ ದೇವಗಣಾಃ ಪಂಚ ಪ್ರೋಕ್ತಾಸ್ತು ಸಪ್ತಕಾಃ ॥ ೪ ॥

ತೇಷಾಮಿಂದ್ರಃ ಶುಚಿರ್ನಾಮ ತಸ್ಯ ದಾಯಾದಬಾಂಧವಾಃ ।
ಯೇ ಭವಿಷ್ಯಂತಿ ಭವಿತಾ ರಾಜಾ ತೇಷಾಂ ಮಹಾಸುಖಃ ॥ ೫ ॥

ದಿವ್ಯಂ ವರ್ಷಸಹಸ್ರಂ ತು ಯುದ್ಧಂ ದೇವಾಸುರಂ ತದಾ ।
ಭವಿಷ್ಯತಿ ಮಹಾಘೋರಂ ತಸ್ಯಾಂತೇ ತಂ ಮಹಾಸುರಂ ॥ ೬ ॥

ಆಸ್ಥಿತಂ ತಾಮಸೀಂ ಮಾಯಾಂ ಘಾತಯಿಷ್ಯತಿ ಕೇಶವಃ ।
ಆರೂಢಃ ಕುಂಜರಂ ದಿವ್ಯಂ ಚರತ್ಪರ್ವತಸನ್ನಿಭಂ ॥ ೭ ॥

ಉತ್ಪಾತಪರ್ವತಸಮಂ ಚಕ್ರೇಣ ಮಧುಸೂದನಃ ।
ರಥಸ್ಥಂ ತಂ ಮಹಾದೈತ್ಯಂ ಘಾತಯಿಷ್ಯತಿ ದುರ್ಮತಿಂ ॥ ೮ ॥

೪-೮. ಆಗ್ಯೆ ಇನ್ನೂ ಐದು ದೇವಗಣಗಳಾಗುವುವು ಅವುಗಳ ಹೆಸರುಗಳೇನೆಂದರೆ —ಚಾಕ್ಷುಷರು ಕನಿಷ್ಠರು, ಪವಿತ್ರರು, ಭಜಿರರು, ವಯೋವೃದ್ಧರು ಈ ಐದು ಗಣಗಳಲ್ಲಿ ಒಂದೊಂದಕ್ಕೂ ಏಳೇಳು ಬೇರೆ ಬೇರ ದೇವಗಣಗಳಾಗುವುವು. ಅವರುಗಳಿಗೆಲ್ಲಾ ಒಡೆಯನಾದ ಆ ಕಾಲದ ಇಂದ್ರನಿಗೆ ಶುಚಿಯೆಂದು ಹೆಸರು ಆ ದೇವಗಣಗಳಿಗೂ ಇಂದ್ರನಿಗೂ ಅನೇಕ ಮಂದಿ ರಾಕ್ಷಸ ದಾಯಾದಿಗಳು ಹುಟ್ಟುವರು ಅವರುಗಳ ರಾಜನಿಗೆ ಮಹಾಸುಖಾಸುರನೆಂಬ ಹೆಸರುಂಟಾಗುವುದು ಆಗ ಇವನಿಗೂ, ಇಂದ್ರನಿಗೂ, (ದೇವಾಸುರರಿಗೆ) ದಿವ್ಯ ಸಹಸ್ರ ವರ್ಷಕಾಲ ಘೋರವಾದ ಯುದ್ಧವು ನಡೆಯುವುದು ಕಡೆಗೆ ಆ ಅಜೇಯನಾದ ಮಹಾ ಅಸುರನನ್ನು ಮಹಾ ವಿಷ್ಣುವು ತನ್ನ ತಮೋಮಯವಾದ ಮಾಯಾ ಶರೀರವನ್ನು ಧರಿಸಿ ಪರ್ವತವೇ ಓಡಾಡುತ್ತಿರುವುದೋ ಎಂಬಂತಿರುವ ಒಂದು ಮಹಾಗಜದ ಮೇಲೆ ಕುಳಿತು ತನ್ನ ಚಕ್ರದಿಂದ ಸಂಹರಿಸಿ ಲೋಕಕ್ಕೆ ಶಾಂತಿಯನ್ನುಂಟುಮಾಡುವನು ಈ ಇಂದ್ರ ಶತ್ರುವಾದ ಆ

ತಸ್ಮಿನ್ಹತೇ ವಾಸವದೇವಶತ್ರೌ
ಮಹಾಬಲೇ ಕಾಲಸಮಪ್ರಭಾವೇ ।
ತ್ರೈಲೋಕ್ಯಮೇತದ್ವಿರುಜಂ ಸಮಂತಾ-
ತ್ತದಾ ಭವಿಷ್ಯತ್ಯಮಲಪ್ರತಾಪಂ ॥ ೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಚತುರ್ದಶಭೌತ್ಯಮನುವರ್ಣನನ್ನಾಮ
ಏಕೋನ ನವತ್ಯಧಿಕ ಶತತಮೋಽಧ್ಯಾಯಃ.

---

ಮಹಾಸುರನು ವಿಷ್ಣುಚಕ್ರದಿಂದ ಸಂಹೃತನಾದೊಡನೆಯೇ ಲೋಕವೆಲ್ಲಾ ಸುಭಿಕ್ಷವಾಗಿ ಸುಖವಾಗಿ ಶಾಂತವಾಗಿರುವುದು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದ ರೂಪವಾದ ಹದಿನಾಲ್ಕನೇ ಭೌತ್ಯಮನು
ವರ್ಣನವೆಂಬ ಹೆಸರಿನ ಒಂದು ನೂರ ಎಂಭತ್ತೊಂಭತ್ತನೆಯ
ಅಧ್ಯಾಯವು ಮುಗಿದುದು



ಶ್ರೀಃ

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ನವತ್ಯಧಿಕಶತತಮೋಽಧ್ಯಾಯಃ ॥

॥ ಶಕ್ರ ಉವಾಚ ॥

ಅಸ್ಮಿನ್ಮನ್ವಂತರೇ ಭದ್ರೇ ಗರುಡಸ್ಯ ಚ ಸಂಭವಃ ।
ಮಯಾ ದೃಷ್ಟಮತೀತೇಷು ಕಥಂ ಗರುಡವಾಹನಃ ॥ ೧ ॥

ಅಸುರಾನ್ಘಾತಯಾಮಾಸ ಭವಿಷ್ಯೇಷು ತಥೈವ ಚ ।
ಗರುಡಂ ತು ಸಮಾರುಹ್ಯ ಘಾತಯಿಷ್ಯತಿ ತತ್ಕಥಂ ॥ ೨ ॥

ಮನ್ವಂತರಾಂತೇ ಸರ್ವೇಷಾಂ ಕ್ಷಯೋ ಯಸ್ಮಾತ್ಪ್ರಕೀರ್ತಿತಃ ।
ತಸ್ಮಾದೇತನ್ಮಮಾಚಕ್ಷ್ವ ಕುಶಲಾ ಹ್ಯಸಿ ಧಾರ್ಮಿಕಾ ॥ ೩ ॥

---

### ನೂರತೊಂಭತ್ತನೆಯ ಅಧ್ಯಾಯವು.

೧-೨ ಇಂದ್ರನು ಪ್ರಶ್ನೆ ಮಾಡುತ್ತೇನೆ --ಅಮ್ಮಾ ! ಶಾಂಬರಾಯಣಿ ! ನಾನು ಹಿಂದಿನ ಮನ್ವಂತರಗಳಲ್ಲಿಯೂ ಈಗಿನ ಮನ್ವಂತರದಲ್ಲಿಯೂ ಸಹ ಗರುಡ ಹುಟ್ಟಿದ ಸಂಗತಿಯನ್ನೂ ಆ ಗರುಡನ ಮೇಲೆ ಮಹಾವಿಷ್ಣುವು ಸಂಚರಿಸುತ್ತಾ ಇರುವುದನ್ನೂ ಸಹ ನೋಡಿದ್ದೇನೆ ಮತ್ತು ರಾಕ್ಷಸರನ್ನು ಸಂಹರಿಸುವುದಕ್ಕೆ ಹೊರಟಾಗಲೂ ಗರುಡನ ಮೇಲೆ ಹೋಗುತ್ತಿರುವುದನ್ನು ಬಲ್ಲೆ ಆದರೆ ಮುಂದೆ ನಡೆಯುತ್ತಿರುವ ಸಂಗತಿಯು ನನಗೆ ತಿಳಿಯದು ಹೀಗಿರುವಲ್ಲಿ ನೀನು ಇನ್ನೂ ಎಷ್ಟೋ ಮುಂದೆ ಗರುಡಾರೂಢನಾಗಿ ರಾಕ್ಷಸರನ್ನು ಸಂಹರಿಸುತ್ತಾನೆಂದು ಹೇಳುತ್ತಾ ಇದ್ದೀಯೆ ! ಇದು ಹೇಗೆ ? ನಿನಗೆ ಮುಂದೆ ನಡೆಯುವ ಸಂಗತಿ ಹೇಗೆ ಗೊತ್ತಾಯಿತು ? ಹೇಳು

೩ ಅದೂ ಅಲ್ಲದೆ ಒಂದೊಂದು ಮನ್ವಂತರವು ಮುಗಿದಾಗಲೂ ಲೋಕ

॥ ಶಾಂಬರಾಯಣ್ಯುವಾಚ ॥

ದೇವಾನಾಮಸುರಾಣಾಂ ಚ ಪ್ರತಿಮನ್ವಂತರಂ ಯಥಾ ।
ಸಂಭವಸ್ತ್ರಿದಶಶ್ರೇಷ್ಠ ಗಂಧರ್ವಾಣಾಂ ತಥಾ ಸ್ಮೃತಃ ॥ ೪ ॥

ನಾಗಾನಾಂ ರಾಕ್ಷಸಾನಾಂ ಚ ಯಕ್ಷಾಣಾಮಥ ಪಕ್ಷಿಣಾಂ ।
ಸುಪರ್ಣಾನಾಂ ತಥಾ ಶಕ್ರ ಪ್ರಾಣಿನಾಮಪ್ಯಶೇಷತಃ ॥ ೫ ॥

ಸುಪರ್ಣಾನಾಂ ಪ್ರಧಾನಸ್ತು ತತ್ರ ಮನ್ವಂತರೇ ತದಾ ।
ಸದೈವ ರಾಜನ್ಭವತಿ ಗರುಡಃ ಪತತಾಂವರಃ ॥ ೬ ॥

ವಾಹನತ್ವೇ ತಥಾ ತಸ್ಯ ದೇವೇಶಸ್ಯ ಪ್ರಪದ್ಯತೇ ।
ಪ್ರಾದುರ್ಭಾವಾಣ್ಯಥೋಕ್ತಾನಿ ಯಥಾ ವಿಷ್ಣೋರ್ಮಯಾ ತವ ॥ ೭ ॥

ತಥೈವ ತಸ್ಯ ಜ್ಞೇಯಾನಿ ಗರುಡಸ್ಯ ಮಹಾತ್ಮನಃ ।
ದೇವಾಸ್ತು ಕೃತಕರ್ಮಾಣಃ ಶಕ್ರ ಮನ್ವಂತರಕ್ಷಯೇ ॥ ೮ ॥

---

ವೆಲ್ಲವೂ ಪ್ರಳಯಜಲದಲ್ಲಿ ಮುಳುಗಿ ನಾಶವಾಗಿ ಹೋಗುವುವೆಂದು ಹೇಳಲ್ಪಟ್ಟಿದೆ ಆದ್ದರಿಂದಲೇ ಭವಿಷ್ಯ ವಿಚಾರವನ್ನು ನೀನು ಈ ರೀತಿ ಜ್ಞಾನದೃಷ್ಟಿಯಿಂದ ತಿಳಿದು ಹೇಳುತ್ತಿರುವ ಕೌಶಲ್ಯವೇತರಿಂದುಂಟಾಯಿತೋ, ಆ ಸಂಗತಿಯನ್ನು ಪರಮಧರ್ಮ ಶೀಲಳಾದ ನೀನು ನನಗೋಸ್ಕರ ತಿಳಿಸು

೪-೭ ಅದಕ್ಕೆ ಶಾಂಬರಾಯಣಿಯು ಹೇಳುತ್ತಾಳೆ —ಇಂದ್ರ ! ಕೇಳು ಪ್ರತಿಯೊಂದು ಮನ್ವಂತರದಲ್ಲಿಯೂ ದೇವತೆಗಳೂ ರಾಕ್ಷಸರೂ ಹೇಗೆ ಹುಟ್ಟುವರೋ, ಅದೇ ಮೇರೆ ಗಂಧರ್ವರೂ, ನಾಗರೂ, ಯಕ್ಷರೂ, ಪಕ್ಷಿಗಳೂ, ಸಕಲ ಪ್ರಾಣಿಗಳೂ ಹುಟ್ಟುವುವು ಪಕ್ಷಿಗಳಿಗೆಲ್ಲಾ ರಾಜನಾದ ಗರುಡನು ಪ್ರತಿ ಮನ್ವಂತರದಲ್ಲಿಯೂ ಮಹಾವಿಷ್ಣುವಿನ ಸೇವೆ (ವಾಹನ) ಗಾಗಿಯೇ ಜನಿಸುವನು ಪ್ರತಿ ಮನ್ವಂತರ ದಲ್ಲಿಯೂ ಮಹಾವಿಷ್ಣುವು ಅವತಾರಮಾಡುತ್ತಲೇ ಇರುವನೆಂಬ ಸಂಗತಿಯನ್ನು ನಿನಗೆ ಈಗಾಗಲೇ ತಿಳಿಸಿಯೇ ಇರುತ್ತೇನೆ.

೮-೧೩. ಹೇಗೆ ಹೇಗೆ ಯಾವ ಕಾಲದಲ್ಲಿ ಮಹಾವಿಷ್ಣುವು ಅವತಾರಮಾಡು ವನೋ, ಅದೇ ಮೇರೆ ಗರುಡನೂ ಅದೇ ಸಮಯದಲ್ಲಿ ಹುಟ್ಟಿ ತನ್ನ ಸೇವೆಯನ್ನು

ತ್ಯಕ್ತಾಧಿಕಾರಾ ಗಚ್ಛಂತಿ ಪರಲೋಕಮಿತಃ ಪ್ರಭೋ ।
ತಲ್ಲಿಂಗಾಶ್ಚ ತಥಾ ಮಂತ್ರಾಸ್ತೈರೇವ ಸಹಿತಾಃ ಸುರೈಃ ॥ ೯ ॥

ಸಮೂಹಶ್ಚೈವ ಮಂತ್ರಾಣಾಂ ದೇವಸ್ತ್ರಿದಶಪೂಜಿತಃ ।
ಶರೀರೀ ಬ್ರಹ್ಮಸದನೇ ಸ ತು ನಿತ್ಯಃ ಪ್ರಕೀರ್ತಿತಃ ॥ ೧೦ ॥

ಯಾವಜ್ಜೀವತಿ ವೈ ಬ್ರಹ್ಮಾ ಸರ್ವಲೋಕನಮಸ್ಕೃತಃ ।
ತದಾ ತು ಪುರುಷಂ ಬ್ರಹ್ಮಾ ದೇವದೇವಂ ಪ್ರಪದ್ಯತೇ ॥ ೧೧ ॥

ತ್ಯಕ್ತ್ವಾ ಶರೀರಂ ದೇವೋಽಪಿ ಪುರುಷಂ ಪ್ರತಿಪದ್ಯತೇ ।
ಪುರುಷೋಽಪಿ ಮಹಾಸೃಷ್ಟಿಂ ಮಹಾಭೂತಗುಣಂ ತಥಾ ॥ ೧೨ ॥

ಕರೋತಿ ತದ್ವದೇವೇಹ ದೇವಃ ಪ್ರಾಗ್ವಚ್ಛತಕ್ರತೋ ।
ಏವಂ ಸರ್ವಮಿದಂ ನಿತ್ಯಂ ತ್ವನಿತ್ಯಂ ವಾ ತವೇರಿತಂ ॥ ೧೩ ॥

---

ನಲ್ಲಿಸುತ್ತಾನೆ ಮನ್ವಂತರವು ಮುಗಿಯುವ ಹೊತ್ತಿಗೆ ದೇವತೆಗಳು ಆನಂದದಿಂದ ಕೃತಕರ್ಮರಾಗಿ ತಮ್ಮ ಅಧಿಕಾರವನ್ನು ಬಿಟ್ಟು ಬಿಟ್ಟು ಇಂದ್ರನೊಡನೆ ಬ್ರಹ್ಮಲೋಕಕ್ಕೆ ಹೊರಟುಹೋಗುತ್ತಾರೆ ಆಗ ಆ ಇಂದ್ರನನ್ನೂ ದೇವತೆಗಳನ್ನೂ ಅನುಸರಿಸಿಕೊಂಡಿದ್ದ ಲಿಂಗಗಳೂ, ಆ ಇಂದ್ರದೇವತಾಕವಾದ ಮಂತ್ರಗಳೂ ಸಹ ಅವರೊಡನೆಯೇ ಗುಂಪು ಗುಂಪಾಗಿ ಹೋಗಿ (ವೇದಮಂತ್ರಗಳು) ಬ್ರಹ್ಮನನ್ನು ಸೇರಿಕೊಳ್ಳುತ್ತವೆ ಆ ಬ್ರಹ್ಮಲೋಕದಲ್ಲಿ ಶರೀರವನ್ನು ಧರಿಸಿರುವ ಚತುರ್ಮುಖಬ್ರಹ್ಮನು ನಿತ್ಯನೆಂದು ಹೇಳಿಸಿಕೊಂಡಿದ್ದಾನೆ ಎಲ್ಲಿಯವರಿಗೆ ಬ್ರಹ್ಮನ ಆಯುಸ್ಸು ಇರುವುದೋ ಅಲ್ಲಿಯವರಿಗೂ ಆ ಬ್ರಹ್ಮನು ಪರಮಪುರುಷನಾದ ಮಹಾವಿಷ್ಣುವನ್ನು ಅನುಸರಿಸಿಕೊಂಡೇ ಇರುತ್ತಾನೆ. ಬ್ರಹ್ಮನ ಶರೀರವು ಹೊರಟು ಹೋದ ಮೇಲೆ ಅವನು ಸಾಕ್ಷಾನ್ಮಹಾವಿಷ್ಣುವಿನಲ್ಲಿಯೇ ಐಕ್ಯನಾಗುತ್ತಾನೆ ಆಗ ಆ ಪರಮಾತ್ಮನೇ ಮಹಾಸೃಷ್ಟಿಯನ್ನೂ ಸಕಲ ಭೂತಗಳನ್ನೂ ಈಗಿರುವಂತೆಯೇ ಲೀಲೆಯಿಂದ ಸೃಜಿಸಿಬಿಡುತ್ತಾನೆ ದೇವೇಂದ್ರರಾಜ! ನಾನು ಇದುವರೆಗೆ ಹೇಳಿದೆನಲ್ಲಾ? ಅದೆಲ್ಲಾ ನಿತ್ಯವೋ? ಅನಿತ್ಯವೋ? ನೀನೇ ಯೋಚಿಸಿ ಹೇಳಯ್ಯ! ಮಹಾನುಭಾವ!

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೪ ॥**

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೫ ॥**

**ತಸ್ಯಾವಿನಾಶಿನಃ ಶಕ್ರ ಸೂಕ್ಷ್ಮಸ್ಯಾಪಿ ಮಹಾತ್ಮನಃ ।**
**ಪ್ರಾದುರ್ಭಾವಸಹಸ್ರಾಣಿ ಸಮತೀತಾನ್ಯನೇಕಶಃ ॥ ೧೬ ॥**

**ಭೂಯಶ್ಚೈವ ಭವಿಷ್ಯಂತಿ ನಾತ್ರ ಕಾರ್ಯಾ ವಿಚಾರಣಾ ।**
**ವೈವಸ್ವತೇಽಸ್ಮಿನ್ದೇವೇಶ ಯಥಾ ಮನ್ವಂತರೇ ಶುಭೇ ॥ ೧೭ ॥**

---

೧೪-೧೭. ಇಂದ್ರ! ಆತ್ಮ (ಬ್ರಹ್ಮ) ಸ್ವರೂಪವನ್ನು ತಿಳಿಸುತ್ತೇನೆ, ಕೇಳು. ಇಲ್ಲದೆ ಇದ್ದ ಅಸತ್ಪದಾರ್ಥವು ಯಾವಾಗಲೂ ಇಲ್ಲವೇ (ಸ್ವರೂಪ) ಇಲ್ಲ. ಸದ್ವಸ್ತುವಾದ ಪರಮಾತ್ಮ (ನಿತ್ಯ) ನಿಗೆ ಅಭಾವವೆಂಬುದು ಯಾವಾಗಲೂ ಇಲ್ಲವೇ ಇಲ್ಲ. ಸದಸತ್ತುಗಳೆರಡಕ್ಕೂ ಇಷ್ಟೇ ವ್ಯತ್ಯಾಸ, ನೋಡು. ಇದನ್ನು ತತ್ವದರ್ಶಿಗಳು, "ನಾಸದಾಸೀನ್ನೋಸದಾಸೀತ್" ಎಂಬ ಋಗ್ವೇದ ಮಂತ್ರದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಇಂತಹ ವೇದವಾಕ್ಯಗಳಿಂದ ತಿಳಿಯಲ್ಪಡುವ ಅವಿನಾಶಿಯಾದ ಪರಮಾತ್ಮನಿಂದಲೇ ನಮ್ಮ ಕಣ್ಣಿಗೆ ಕಾಣುತ್ತಾ ಬಹು ವಿಸ್ತಾರವಾಗಿ ಗೋಚರಿಸುತ್ತಲಿರುವ ಚರಾಚರ ಪ್ರಪಂಚವೆಲ್ಲವೂ ಲೀಲೆಯಿಂದ ಸೃಷ್ಟಿಸಲ್ಪಟ್ಟಿವೆಯೆಂದು ತಿಳಿದುಕೋ.* ಇಂತಹ ಪರಮಾತ್ಮನಿಗೆ ಎಂದೆಂದಿಗೂ ನಾಶವೇ ಇಲ್ಲ. ಇದನ್ನು ನಾಶಮಾಡುವ ಮತ್ತೊಬ್ಬ ನಾವನೂ ಇಲ್ಲವಾದ್ದರಿಂದ, 'ಏಕಮೇವಾ ದ್ವಿತೀಯಂ ಬ್ರಹ್ಮ, ನೇಹನಾನಾಸ್ತಿ ಕಿಂಚನ" ಎಂದು ಉಪನಿಷತ್ತುಗಳು ಬ್ರಹ್ಮನನ್ನು ಹೊಗಳುತ್ತಲಿವೆ. ಇಂತಹ ಅವಿನಾಶಿಯೆನಿಸಿದ ಅಣೋರಣೀಯನೂ (ಸೂಕ್ಷ್ಮಕ್ಕಿಂತ ಸೂಕ್ಷ್ಮ) ಮಹತೋ ಮಹೀಯನೂ (ದೊಡ್ಡದಕ್ಕಿಂತ ದೊಡ್ಡದು) ಆದ ಈ ಮಹಾತ್ಮನಿಗೆ ಇದುವರೆಗೆ ಎಷ್ಟೋ ಸಾವಿರಾರು ಅವತಾರ (ಹುಟ್ಟು) ಗಳು ಲೀಲೆಯಿಂದಲೇ ಸ್ವತಂತ್ರದಿಂದಲೇ ಆಗಿಹೋಗಿವೆ.

**ಪ್ರಾದುರ್ಭಾವಾನಿ ದೃಷ್ಟಾನಿ ಮಯಾ ತಸ್ಯ ಮಹಾತ್ಮನಃ ।**
**ವರಾಹಂ ವಾಮನಂ ಚೈವ ತಥಾ ಶಕ್ರ ತ್ರಿವಿಕ್ರಮಂ ॥ ೧೮ ॥**

**ನಾರಸಿಂಹಂ ತಥಾ ಮಾತ್ಸ್ಯಂ ಕೌರ್ಮಂ ಹಂಸಂ ತಥೈವ ಚ ।**
**ನೃವರಾಹಂ ತಥಾ ರಾಮಂ ರಾಮಂ ಚ ಸುರಸತ್ತಮ ॥ ೧೯ ॥**

**ಮಾಂಧಾತಾರಂ ಪೃಥುಂ ಚೈವ ಕಾರ್ತವೀರ್ಯಾರ್ಜುನಂ ತಥಾ ।**
**ಧಾತಾರಂ ಚ ತಥಾ ಮಿತ್ರಂ ಚಾಂಶುಮರ್ಯಮಣಂ ತಥಾ ॥ ೨೦ ॥**

**ಪೂಷಣಂ ಚ ಭವಂತಂ ಚ ವರುಣಂ ಭಗಮೇವ ಚ ।**
**ತ್ವಷ್ಟಾರಂ ಚ ವಿವಸ್ವಂತಂ ಸವಿತಾರಂ ತಥೈವ ಚ ॥ ೨೧ ॥**

**ವಿಷ್ಣುಂ ಚಂದ್ರಮಸಂ ರುದ್ರಂ ಬ್ರಹ್ಮಾಣಂ ಯಮಮೇವ ಚ ।**
**ಹುತಾಶನಂ ವೈಶ್ರವಣಂ ಶೇಷಂ ನಾಗೇಶ್ವರಂ ತಥಾ ॥ ೨೨ ॥**

**ಗ್ರಹಮುಖ್ಯಂ ಬುಧಂ ಚೈವ ಅಪಃ ಖಂ ಪೃಥಿವೀಂ ತಥಾ ।**
**ವಾಯುಸ್ತೇಜಶ್ಚ ದೇವೇಶ ತಥೈವಾನ್ಯಾನಿ ವಾಸ್ತವ ॥ ೨೩ ॥**

---

೧೭-೨೭ ಇನ್ನೂ ಎಷ್ಟೋ ಅವತಾರಗಳು ಆಗುತ್ತಲೇ ಇದೆ ಈ ವಿಷಯ ವಲ್ಲಿ ಸಂದೇಹವಿಲ್ಲ ಎಲೈ ಇಂದ್ರನೇ ! ನಾನು ನೋಡಿದಂತೆ ಈಗಾಗಲೇ ಈ ವೈವಸ್ವಂತ ಮನ್ವಂತರದಲ್ಲಿ ವರಾಹ, ನಾರಸಿಂಹ, ವಾಮನ, ಮತ್ಸ್ಯ, ಕೂರ್ಮ, ಹಂಸ, ನೃವರಾಹ, ಪರಶುರಾಮ, ರಾಮ, ಮಾಂಧಾತೃ ಪೃಥು, ಕಾರ್ತವೀರ್ಯಾರ್ಜುನ, ಬ್ರಹ್ಮ, ಮಿತ್ರ, ಅಂಶು, ಆರ್ಯಮ್ಣ, ಪೂಷ, ನೀನು, ವರುಣ, ಭಗ, ತ್ವಷ್ಟೃ, ವಿವಸ್ವಾನ್, ಸವಿತೃ, ವಿಷ್ಣು, ಚಂದ್ರ, ರುದ್ರ, ಬ್ರಹ್ಮ, ಯಮ, ಅಗ್ನಿ, ಕುಬೇರ, ಶೇಷ, ನಾಗ ಬುಧ, ಆಪ, ಆಕಾಶ, ಭೂಮಿ, ವಾಯು, ಬೆಂಕಿ, ಇತ್ಯಾದಿಯಾಗಿ ವಿಭೂತಿಮತ್ತಾದ ಸಾವಿರಾರು ಅವತಾರಗಳನ್ನು ನಾನು ನೋಡಿಯಾಯಿತು. ಇನ್ನೂ ನೋಡುತ್ತಲೇ ಇದ್ದೇನೆ ಇದರಂತೆ ಇದುವರಿಗೆ ಕಳೆದುಹೋದ ಮನ್ವಂತರಗಳಲ್ಲಿಯೂ ಎಷ್ಟೆಷ್ಟೋ ಅವತಾರವನ್ನು ನೋಡಿಯಾಗಿದೆ ಮುಂದಿನ ಕಾಲದಲ್ಲಿ ನಡೆಯುವ ಅವತಾರಗಳನ್ನೂ ಸಹ ನೋಡುತ್ತಾ ಹೀಗೇ ಇಂದ್ರಲೋಕದಲ್ಲಿ ಶಾಶ್ವತವಾಗಿ ಆನಂದವಾಗಿ ಕೂತಿರುತ್ತೇನೆ ಇದೇ ರೀತಿ ಮುಂದಿನ ಮನ್ವಂತರಗಳಲ್ಲಿಯೂ ಸಹ ನೂರಾರು ಅವತಾರಗಳು ಆಗಲಿವೆ ಇದುವರಿಗೆ ನಿನಗೆ ಈ ಅವತಾರದ ಕಥೆ

ಪ್ರಾದುರ್ಭಾವಸಹಸ್ರಾಣಿ ತಸ್ಯ ದೃಷ್ಟಾನಿ ಯಾನಿ ತೇ ।
ಮನ್ವಂತರೇಷ್ವತೀತೇಷು ತಸ್ಯಾತೀತಾನ್ಯನೇಕಶಃ ॥ ೨೪ ॥

ಭವಿಷ್ಯಂತಿ ಭವಿಷ್ಯೇಷು ಶತಶೋಽಥ ಸಹಸ್ರಶಃ ।
ಮನ್ವಂತರಮಥಾಸಾದ್ಯ ಚೈಕೈಕಮೇಕಂ ತಥಾ ತವ ॥ ೨೫ ॥

ಪ್ರಾದುರ್ಭಾವಮಿದಂ ಪ್ರೋಕ್ತಂ ದ್ವಿಗುಣಂ ದ್ವಿಗುಣಂ ಯತಃ ।
ಪ್ರಾದುರ್ಭಾವಾನ್ಯಶೇಷೇಣ ವಾಸುದೇವಸ್ಯ ಚಕ್ರಿಣಃ ।
ಕಃ ಸಮರ್ಥೋ ಭವೇದ್ವಕ್ತುಮಿಹವರ್ಷಶತೈರಪಿ ॥ ೨೬ ॥

ಏಕಃ ಸ ದೇವೋ ಭುವನಸ್ಯ ಗೋಪ್ತಾ
ಪರಃ ಪುರಾಣಃ ಪುರುಷೋ ಮಹಾತ್ಮಾ ।

---

ಗಳನ್ನು ಎರಡೆರಡು ಬಾರಿ ಒತ್ತಿಯೊತ್ತಿ ಹೇಳಿದ್ದೇನೆ ನಾನು ಈ ಮನ್ವಂತರದ ವೃತ್ತಾಂತಗಳನ್ನೂ ಒಂದೊಂದಾಗಿ ನಿನಗೆ ವಿಸ್ತಾರವಾಗಿ ತಿಳಿಸಿರುತ್ತೇನೆ ಆದರೆ ಆ ಮಹಾನುಭಾವನು ಮಾಡಿದ ಮುಂದ ಮಾಡುವ ಸಮಗ್ರವಾದ ಅವತಾರಗಳ ವೃತ್ತಾಂತವನ್ನೆಲ್ಲಾ ತಿಳಿಸಲು ಯಾರಿಗೂ ಶಕ್ತಿಯಿಲ್ಲ ಎಡೆಬಿಡದ ಒಂದು ನೂರು ವರ್ಷ ಕುಳಿತು ನಿದ್ರಾಹಾರವನ್ನು ತೊರೆದು ಹೇಳಿದರೂ ಈ ಕಥೆಯು ಮುಗಿಯು ವುದೇ ಇಲ್ಲ ಈ ಪ್ರಪಂಚವನ್ನು ಸರ್ವದಾ ಕಾಪಾಡುತ್ತಲಿರುವ ಪುರಾಣ ಪುರುಷ ನಾದ ಮಹಾವಿಷ್ಣುವಿನ ಒಂದೇ ಒಂದು ಅಂಶವನ್ನು ಮಾತ್ರ ನಿನಗೆ ಹೇಳಿದೇನೆ ಯಲ್ಲದೆ, ಇದರ ಮೂರು ಪಾಲಿನಷ್ಟು ಮಹಿಮೆ ಇನ್ನೂ ಉಳಿದಿದೆ ಆ ಮೂರು ಭಾಗದ ಮಹಿಮೆಯನ್ನು ವರ್ಣಿಸಲು ನನ್ನಿಂದ ಸಾಧ್ಯವಿಲ್ಲವಯ್ಯ, ಎಂದು ಶಾಂಬ

ತಸ್ಯಾಂಶಮಾತ್ರಂ ಭುವನಂ ಸಮಗ್ರಂ
ಭಾಗಾಸ್ತ್ರಯಸ್ತಸ್ಯ ನ ವರ್ಣನೀಯಾಃ　　　॥ ೧೭ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರಶಾಂಬರಾಯಣೀ ಸಂವಾದೇಽನೇಕ
ವಿಷ್ಣುಪ್ರಾದುರ್ಭಾವವರ್ಣನಂನಾಮ
ನವತ್ಯಧಿಕ ಶತತಮೋಽಧ್ಯಾಯಃ

---

ರಾಯಣಿಯು ಇಂದ್ರನಿಗೆ ಹೇಳಿದಳು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ
ಮಾರ್ಕಂಡೇಯ ವಜ್ರಸಂವಾದ ರೂಪವಾದ ಶಕ್ರಶಾಂಬರಾಯಣೀ
ಸಂವಾದದಲ್ಲಿ ಅನೇಕ ವಿಷ್ಣುಪ್ರಾದುರ್ಭಾವ ವರ್ಣನೆಯೆಂಬ
ಹೆಸರಿನ ಒಂದು ನೂರತೊಂಭತ್ತನೇ ಅಧ್ಯಾಯವು
ಮುಗಿದುದು



ಶ್ರೀಃ

---

# ಅಥ ವಿಷ್ಣುಧರ್ಮೋತ್ತರಮಹಾಪುರಾಣೇ ಪ್ರಥಮಖಂಡೇ

## ॥ ಏಕನವತ್ಯಧಿಕಶತತಮೋಽಧ್ಯಾಯಃ ॥

---

॥ ಶಕ್ರ ಉವಾಚ ॥

ಕೇನ ಕರ್ಮವಿಪಾಕೇನ ಸ್ವರ್ಗತಾ ತ್ವಂ ವರಾನನೇ ।
ದೀರ್ಘಕಾಲಮಿಹಸ್ಥಾಪಿ ತಥಾ ಚೈವಾಪ್ಯನಾಗತಾನ್ ॥ ೧ ॥

ಕಥಂ ಮನ್ವಂತರಾನ್ವೇತ್ಸಿ ತನ್ಮಮಾಚಕ್ಷ್ವ ಪೃಚ್ಛತಃ ।
ತ್ವತ್ಸಮಾ ದಿವಿ ನೈವಾನ್ಯಾ ಕಾಚಿದಸ್ತಿ ಚಿರಂತನೀ ॥ ೨ ॥

ಏಕರೂಪಃ ಕಥಂ ಕರ್ತಾ ತ್ವಯಾ ದೃಷ್ಟಃ ಸುರೇಶ್ವರಿ ।
ಮನ್ವಂತರಾಣಾಂ ಜಾನಾಸಿ ಭವಿಷ್ಯಾಣಾಂ ತಥಾ ಗತಿಂ ॥ ೩ ॥

---

## ನೂರತೊಂಭತ್ತೊಂದನೆಯ ಅಧ್ಯಾಯ.

೧-೩ ಇಂದ್ರನು ಹೇಳುತ್ತಾನೆ —ಎಲೌ! ಶಾಂಬರಾಯಣಿಯೆ! ನೀನು ಯಾವ ಪುಣ್ಯವಿಶೇಷದಿಂದ ಈ ಸ್ವರ್ಗಲೋಕವಾಸವನ್ನನುಭವಿಸುತ್ತಿರುವೆ! ಅಲ್ಲದೆ ಬಹು ಕಾಲದಿಂದ ಇಲ್ಲೇ ಇದ್ದುಕೊಂಡು ಮುಂದೆ ನಡೆಯುವ ಸಂಗತಿಗಳೆಲ್ಲವನ್ನು ಅದಾವಶಕ್ತಿಯಿಂದ ಹೇಳುತ್ತಲಿರುವೆ? ಮುಂದಿನ ಮನ್ವಂತರಗಳಲ್ಲಿ ನಡೆಯುವ ಸಮಾಚಾರಗಳೆಲ್ಲಾ ಹೇಗೆ ನಿನಗೆ ಗೊತ್ತಾಯಿತು? ನಿನ್ನ ಹಾಗೆ ಬಹು ಕಾಲದಿಂದ ದೇವಲೋಕದಲ್ಲಿರುವ ಹೆಂಗಸರನ್ನಾರನ್ನೂ ನಾನು ನೋಡಿಯೇ ಇಲ್ಲ. ಒಂದೇ ರೂಪವನ್ನು ಧರಿಸಿರುವ ಮಹಾವಿಷ್ಣುವು ಅನೇಕ ರೂಪಗಳಲ್ಲಿ ಅವತರಿಸಿದುದನ್ನೂ, ಅವತರಿಸುತ್ತಿರುವುದನ್ನೂ ನೀನು ಹೇಗೆ ತಿಳಿದುಕೊಂಡಿರುವೆ? ಮುಂದಿನ ಮನ್ವಂ

॥ ಶಾಂಬರಾಯಣ್ಯುವಾಚ ॥

ತ್ರಿದಿವೇ ಸಪ್ತಮಃ ಕಲ್ಪೋ ಮಮಾಯಂ ತ್ರಿದಿವೇಶ್ವರ ।
ದೇವದೇವಪ್ರಸಾದೇನ ವಸಂತ್ಯಾ ವರ್ತತೇಽನಘ ॥ ೪ ॥

ಪರಾರ್ಧಶ್ಚ ತಥಾ ಬ್ರಾಹ್ಮೋ ಜನಲೋಕೇ ಗತೋ ಮಮ ।
ಏಕರೂಪಾಸ್ತಥಾ ಕಲ್ಪಾ ಮಯಾ ದೃಷ್ಟಾಃ ಸುರೇಶ್ವರ ॥ ೫ ॥

ಮನ್ವಂತರಾಣಾಂ ಜಾನಾಮಿ ಭವಿಷ್ಯಾಣಾಂ ತಥಾ ಗತಿಂ ।
ಮಯಾ ಮಾನುಷ್ಯಮಾಸಾದ್ಯ ಮಾಸನಕ್ಷತ್ರಪೂಜನಂ ॥ ೬ ॥

ಪ್ರತಿಮಾಸಂ ಕೃತಂ ವಿಷ್ಣೋರ್ಯಾವಜ್ಜೀವಂ ಸುರೇಶ್ವರ ।
ತೇನ ಕರ್ಮವಿಪಾಕೇನ ತ್ರಿದಿವೇ ವಸತಿಶ್ಚಿರಂ ।
ಮಯೇಯಂ ಸುಮಹತ್ಪ್ರಾಪ್ತಾ ದೇವದೇವಪ್ರಸಾದಜಾ ॥ ೭ ॥
ಅಸ್ಮಾದಪಿ ಮಹಾಭಾಗ ಬ್ರಹ್ಮಲೋಕಂ ನಯಿತ್ಯತ ॥ ೮ ॥

---

ತರಗಳ ಭವಿಷ್ಯ ವೃತ್ತಾಂತವು ನಿನಗೆ ತಿಳಿಯುತ್ತಿರುವ ಬಗೆಯೆಂತು? ಇದನ್ನೆಲ್ಲಾ ದಯಮಾಡಿ ತಿಳಿಸುವೆಯಾ?

೪-೮ ಶಾಂಬರಾಯಣಿಯು ಹೇಳುತ್ತಾಳೆ —ಎಲೈ! ನಾನು ಈ ಇಂದ್ರ ಲೋಕಕ್ಕೆ ಬಂದು ಇಂದಿಗೆ ಏಳು ಕಲ್ಪಗಳ ಕಾಲವಾಯಿತು ಆಗಿನಿಂದಲೂ ನಾನು ಪರಮಾತ್ಮನ ಪರಮಾನುಗ್ರಹದಿಂದ ಇಲ್ಲಿಯೇ ವಾಸಮಾಡಿಕೊಂಡು ಇದ್ದೇನೆ ಬ್ರಹ್ಮನ ಪರಾರ್ಧಭಾಗವನ್ನು ನಾನು ಜನಲೋಕದಲ್ಲಿ ಕಳೆದೆನು ಒಂದೇ ರೂಪ ವಾದ ಎಷ್ಟೋ ಕಲ್ಪಗಳನ್ನು ನಾನು ನೋಡಿ ನೋಡಿ ಬೇಸತ್ತಿರುವೆನು ಮುಂದಿನ ಭವಿಷ್ಯೋತ್ತರ ಮನ್ವಂತರಗಳಲ್ಲಿ ನಡೆಯುವುದನ್ನೆಲ್ಲಾ ನಾನು ಬಲ್ಲೆ ಇದು ಏತ ರಿಂದ ಬಂದಿತೆಂದರೆ ನಾನು ಮನುಷ್ಯ ಜನ್ಮದಲ್ಲಿ ಹುಟ್ಟಿದ ಕಾಲದಲ್ಲಿ ಸಾಯುವವರಿಗೂ ಪರಮಾತ್ಮನನ್ನು ಮಾಸನಕ್ಷತ್ರಪೂಜೆಯಿಂದ ಮೆಚ್ಚಿಸಿಕೊಂಡನು ಆ ಪೂಜಾ ಪ್ರಭಾವದಿಂದ ನನಗೆ ಈ ದಿವ್ಯದೃಷ್ಟಿಯೂ ದಿವ್ಯಲೋಕವಾಸವೂ ಲಭ್ಯವಾಯಿತು ಇದೆಲ್ಲಾ ಪರಮಪುರುಷನಾದ ಮಹಾವಿಷ್ಣುವಿನ ಪ್ರಸಾದದಿಂದಲೇ ಲಭ್ಯವಾದುದೆಂದು ತಿಳಿದುಕೊಂಡಿರುವೆನು. ನಾನು ಈ ಲೋಕವಾಸವು ಮುಗಿದೊಡನೆ ಬ್ರಹ್ಮ ಲೋಕಕ್ಕೆ ಹೊರಟುಹೋಗುತ್ತೇನೆ. ನನಗೆ ಪುನರಾವೃತ್ತಿರಹಿತವಾದ ಶಾಶ್ವತ ಬ್ರಹ್ಮ ಲೋಕ ನಿವಾಸವು ಸಿದ್ಧವಾಗಿದೆ

॥ ಮಾರ್ಕಂಡೇಯ ಉವಾಚ ॥

ಏತದುಕ್ತ್ವಾ ಮಹಾಭಾಗ ಶಕ್ರಂ ಸಾ ಶಾಂಬರಾಯಣೀ ।
ಜಗಾಮಾದರ್ಶನಂ ರಾಜಂಸ್ತತ್ರೈವ ಸುರಪೂಜಿತಾ ॥ ೯ ॥

ಮಾಸರ್ಕ್ಷಪೂಜಾಮಧಿಕೃತ್ಯ ವಿಷ್ಣೋ-
ರ್ಮಯಾ ತವೇದಂ ಕಥಿತಂ ಸಮಗ್ರಂ ।
ತಸ್ಮಾತ್ಪ್ರಯತ್ನೇನ ನರೇಂದ್ರಚಂದ್ರ
ಮಾಸರ್ಕ್ಷಪೂಜಾಂ ಪ್ರಯತೇತ ಕರ್ತುಂ ॥ ೧೦ ॥

ಶ್ರೋತವ್ಯಮೇತತ್ಪ್ರಯತೇನ ವಜ್ರ
ಪಾಪಾಪಹಂ ಧರ್ಮವಿವೃದ್ಧಿದಂ ಚ ।
ಸಂವಾದಮಗ್ರ್ಯಂ ತ್ರಿದಶೇಶ್ವರಸ್ಯ
ಸಿದ್ಧಾಂಗನಾಯಾಶ್ಚ ಪರಂ ಪವಿತ್ರಂ ॥ ೧೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ಪ್ರಥಮಖಂಡೇ ಮಾರ್ಕಂಡೇಯ
ವಜ್ರಸಂವಾದೇ ಶಕ್ರಶಾಂಬರಾಯಣೀಕಥಾನಕಂನಾಮೈಕ
ನವತ್ಯಧಿಕ ಶತತಮೋಽಧ್ಯಾಯಃ.

---

ಮಾರ್ಕಂಡೇಯನು ಹೇಳುತ್ತಾನೆ --

೯-೧೧ ಈ ಮಾತನ್ನು ಶಕ್ರನಿಗೆ ಹೇಳಿ ಶಾಂಬರಾಯಣಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು ಮಾಸನಕ್ಷತ್ರ ಪೂಜೆಯ ಸಂದರ್ಭ ಬಂದದ್ದರಿಂದ ನಾನು ನಿನಗೆ ಈ ಕಥೆಯನ್ನು ಹೇಳಿದೆನಯ್ಯ! ವಜ್ರಮಹಾರಾಜ! ಆದ್ದರಿಂದ ಸಮಸ್ತರೂ ಏನಾದರೂ ಪ್ರಯತ್ನಮಾಡಿ ಈ ಮಾಸನಕ್ಷತ್ರ ಪೂಜೆಯನ್ನು ಮಾಡಲು ಪ್ರಯತ್ನಮಾಡಬೇಕು ಎಲೈ ವಜ್ರರಾಜನೆ! ಈ ಕಥೆಯು ಪಾಪಪರಿಹಾರಕ ವಾದುದು, ಧರ್ಮವೃದ್ಧಿಯನ್ನುಂಟುಮಾಡತಕ್ಕದ್ದು ಇಂಥಾ ಪರಮಪವಿತ್ರವಾದ ಇಂದ್ರ ಸಿದ್ಧಾಂಗನಾ ಸಂವಾದರೂಪವಾದ ಈ ಪುಣ್ಯಕಥೆಯನ್ನು ಕೇಳಿದವರು ಪರಿಶುದ್ಧರಾಗುವರು

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಪ್ರಥಮಖಂಡದಲ್ಲಿ ಮಾರ್ಕಂಡೇಯ
ವಜ್ರಸಂವಾದರೂಪವಾದ ಶಕ್ರಶಾಂಬರಾಯಣೀ ಸಂವಾದ
ಕಥನವೆಂಬ ಹೆಸರಿನ ಒಂದು ನೂರತೊಂಭತ್ತೊಂದನೆಯ
ಅಧ್ಯಾಯ ಮುಗಿದುದು